

# ಶ್ರೀ ಮನ್ಮಹಾಭಾರತ ತಾತ್ಪರ್ಯನಿರ್ಣಯವು

ಕನ್ನಡ ಟೀಕಾ, ವ್ಯಾಖ್ಯಾನ, ವಿಶೇಷಾಂಶ,
ಮೂಲಾರ್ಥ ಭಾಷಾಂತರ ಸಹಿತ

## ಭಾಗ ೨



ವೇದಮೂರ್ತಿ, ವೇದಾಂತ ವಾಚಸ್ಪತಿ
ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು



॥ ಶ್ರೀ ಮಧ್ವನಾಥೋ ವಿಜಯತೇ ॥

## ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯ ಚತುರ್ಥ ಗುಚ್ಛದಲ್ಲಿ
ಭಾರತ ಗೀತಾ ಪ್ರಸ್ಥಾನದಲ್ಲಿ ಮೂರನೆಯದಾದ

# ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯವು

**ಪೂರ್ವಾರ್ಧ ೪ರಿಂದ ೧೦ರ ವರೆಗಿನ ಅಧ್ಯಾಯಗಳು**

ದ್ವೈತ ವೇದಾಂತ ವಿದ್ವಾನ್, ದ್ವೈತ ವೇದಾಂತ ಶಿರೋಮಣಿ, ವೇದಾಂತ ವಾಚಸ್ಪತಿ
ಉಡುಪಿ ಸಂಸ್ಕೃತ ಮಹಾಪಾಠಶಾಲಾ ನಿವೃತ್ತ ವೇದಾಂತ ಪ್ರಾಚಾರ್ಯ
ದಿವಂಗತ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

**ಕನ್ನಡಟೀಕಾ ಭಾಷಾಂತರ ಸಹಿತ**



ಪ್ರಕಾಶಕರು
ಅಗ್ರಹಾರ ಮುದ್ರಣಾಲಯ
ಕರ್ನಾಟಕ ಬ್ಯಾಂಕಿನ ಹಿಂಭಾಗ,
ರಥಬೀದಿ, ಉಡುಪಿ-576 101

ಗ್ರಂಥದ ಹೆಸರು : ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯ ಭಾಗ ೨

ಪ್ರತಿಪದಾರ್ಥ, ಮೂಲಾರ್ಥ
ವಿಶೇಷಾಂಶ, ಭಾವಾನುವಾದ
ತಾತ್ಪರ್ಯ ಸಹಿತ ಕನ್ನಡ
ಟೀಕಾ ಭಾಷಾಂತರ } ವೇದಮೂರ್ತಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು

ಪುಟಗಳು }
ಭಾಗ ೧ 159
ಭಾಗ ೨ 229
ಭಾಗ ೩ 702

ಎರಡನೇ ಭಾಗ ಅಧ್ಯಾಯ ೪ ರಿಂದ ೧೦ರ ವರೆಗೆ    ಬಿಡುಗಡೆ 13-10-1991

[illegible] ಸೇವಾ ಸಂಘ ಉಡುಪಿ ಅವರ ಕೃಪೆಯಿಂದ



ಬೆಲೆ: ಪ್ರಥಮ ಭಾಗ ರೂ. 30/- (ಅಂಚೆ ವೆಚ್ಚ ಪ್ರತ್ಯೇಕ)
ದ್ವಿತೀಯ ಭಾಗ ರೂ, 40/- " "

# ಅರ್ಪಣೆ



ಬಾಲ್ಯದಲ್ಲಿ ಎಸಗುತ್ತಿದ್ದ ಬಾಲಚೇಷ್ಟೆಯನ್ನು ಕಂಡು ಮುದ್ದು
ಮುದ್ದಾದ ಮಾತುಗಳನ್ನು ಅಕ್ಕರೆಯಿಂದ ಕೇಳಿ ಆನಂದಿತರಾಗಿ ಉದ್ಧಟತನ,
ಹಟಮಾರಿತನ, ಸಿಟ್ಟು, ಅಹಂಕಾರ-ಮಮಕಾರ ಮುಂತಾದ ದುರ್ಗುಣಗಳನ್ನು
ದೂರೀಕರಿಸಲು ಸಕಾಲದಲ್ಲಿ ಹಿತನುಡಿಗಳನ್ನು ಬೋಧಿಸಿ, ಜೀವನ ನಿರ್ವಹಣೆ ಸುಗಮ
ವಾಗಿ ಸಾಗುವಂತೆ ಗುಣವಾಕ್ಯಗಳನ್ನು ಮುದ್ದುಮುದ್ದಾಗಿ ಬೋಧಿಸಿ, ಸೂಕ್ತ ಮಾರ್ಗದರ್ಶನ
ವಿತ್ತು ಸುಖಮಯ ಜೀವನ ಸಾಗಿಸಲು ದಿವ್ಯಜ್ಯೋತಿಯನ್ನು ತೋರಿಸಿಕೊಟ್ಟ ನನ್ನ
ಪೂಜ್ಯ ತೀರ್ಥರೂಪ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು ಹಾಗೂ
ಪೂಜ್ಯ ಮಾತೃಶ್ರೀ ಶ್ರೀಮತಿ ರಾಜಮ್ಮ ನಾರಾಯಣ ತಂತ್ರಿ ಅವರ
ಚರಣಕಮಲಗಳಿಗೆ ತುಂಬು ಹೃದಯದಿಂದ ಅರ್ಪಿಸುವೆನು.

ಕೆ. ಕೆ. ತಂತ್ರಿ

# ಪ್ರಕಾಶಕನ ಬಿನ್ನಹ

ರಾಮಾಯಣ ಮತ್ತು ಮಹಾಭಾರತದ ಕಥೆಯ ವಿವರವಾದ ವರ್ಣನೆಗೆ ಒಳಗೊಂಡ ಭಾರತ ತಾತ್ಪರ್ಯ ನಿರ್ಣಯವೆಂದು ಕರೆಯಲ್ಪಡುವ ಈ ಗ್ರಂಥವನ್ನು ವೇದವ್ಯಾಸ ದೇವರ ಆಜ್ಞೆಗನುಸಾರವಾಗಿ ಆಚಾರ್ಯ ಶ್ರೀ ಮಧ್ವರು ಮೂಲಗ್ರಂಥದ ತತ್ವವನ್ನು ಅಸ್ತವ್ಯಸ್ತಗೊಳಿಸದೆ ರಚಿಸಿ ಸಜ್ಜನರ ಉದ್ಧಾರಕ್ಕೆ ಕಾರಣೀಭೂತರಾದರು. ಎರಡನೇ ಭಾಗದಲ್ಲಿ ಶ್ರೀ ರಾಮಚಂದ್ರದೇವರ ಚರಿತ್ರೆಯನ್ನೂ, ಶ್ರೀ ವೇದವ್ಯಾಸ ದೇವರ ಚರಿತ್ರೆಯನ್ನೂ ಅಮೂಲಾಗ್ರವಾಗಿ ವಿವರಿಸಿರುತ್ತಾರೆ.

ಕಾಲಮಹಿಮೆಯಿಂದ ಅನೇಕರು ಅನೇಕ ರೀತಿಯಲ್ಲಿ ಸೇರಿಸಿ ಲೋಪಮಾಡಿ ಮೂಲಗ್ರಂಥದ ತತ್ವವನ್ನು ಅಡಿಮೇಲಾಗಿ ಮಾಡಿದ ಸಂದರ್ಭದಲ್ಲಿ ಸಕಲ ಪುರಾಣ ಇತಿಹಾಸಾದಿ ಗ್ರಂಥಗಳ ಪರಸ್ಪರ ವಿರೋಧಾಭಾಸವನ್ನು ನೀಗಿಸಿ, ಅವುಗಳ ಯಥಾರ್ಥವಾದ ತಾತ್ಪರ್ಯವನ್ನು ಸ್ಪಷ್ಟಪಡಿಸುವ ಉದ್ದೇಶದಿಂದ ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯದ ಅರ್ಥವನ್ನು ಸಕಲ ಜನರೂ ತಿಳಿದು ಪುಣ್ಯಾತ್ಮರಾಗಬೇಕೆಂಬ ಉದ್ದೇಶದಿಂದ ಸುಲಭ ಶೈಲಿಯಲ್ಲಿ ನಮ್ಮ ಪೂಜ್ಯ ತೀರ್ಥರೂಪರವರ ಮೂಲಕ ಶ್ರೀ ಮಧ್ವಮುನಿ ಸೇವಾ ಸಂಘವವರು ಕನ್ನಡೀಕರಿಸಿ ಮುದ್ರಿಸಿ ಚಿರಸ್ಮರಣೀಯರಾಗಿದ್ದಾರೆ.

ನಮ್ಮ ಪೂಜ್ಯ ತೀರ್ಥರೂಪರವರಿಂದ ಕನ್ನಡೀಕರಿಸಲ್ಪಟ್ಟ ಪುಸ್ತಕಗಳಿಗೆ ಎಲ್ಲೆಡೆಯಿಂದಲೂ ಬೇಡಿಕೆಗಳು ಬರುತ್ತಿರುವುದರಿಂದ, ಪೂಜ್ಯ ಮಾತಾಪಿತೃಗಳ ಮತ್ತು ಭಗವದನುಗ್ರಹಕ್ಕೆ ಪಾತ್ರರಾಗಬೇಕೆಂಬ ಉದ್ದೇಶವನ್ನಿರಿಸಿಕೊಂಡು, ನಿವೃತ್ತ ಅಧ್ಯಾಪಕನಾದ ನಾನು ಈ ಸಾಹಸಕಾರ್ಯ ಮಾಡಲುದ್ಯುಕ್ತನಾದೆನು. ಮುದ್ರಣ ವೆಚ್ಚ, ಕಾಗದಗಳ ವೆಚ್ಚ ಇದರಿಂದಾಗಿ ಸಕಾಲದಲ್ಲಿ ಎರಡನೆ ಭಾಗವನ್ನು ಮುದ್ರಿಸಿ ಪ್ರಕಟಿಸಲಾಗದಿದ್ದುದಕ್ಕೆ ವಿಷಾದಿಸುತ್ತೇನೆ. ಮುಂದಿನ ಪ್ರಕಟಣೆಗಳಿಗೆ ಉದಾರಿಗಳಿಂದ ಕೊಡುಗೆಗಳನ್ನು ಯಾಚಿಸುತ್ತೇನೆ. ಮೂರನೇ ಭಾಗ (ಅಧ್ಯಾಯ ೧೧ ರಿಂದ ೩೨) ವನ್ನು ಆದಷ್ಟು ಬೇಗನೆ ಪ್ರಕಟಪಡಿಸಿ, ಮಾಧ್ವ ಜನತೆಗೆ ನೀಡುವೆನೆಂಬ ಆಶ್ವಾಸನೆಯನ್ನು ನೀಡುವೆನು

ನಮ್ಮ ಪೂಜ್ಯ ತೀರ್ಥರೂಪರ ಹಿತಾಕಾಂಕ್ಷಿಗಳೂ, ಕೊಡುಗೈ ದಾನಿಗಳೂ, ಶ್ರೀ ಮಧ್ವಮುನಿ ಸೇವಾ ಸಂಘದ ಅಧ್ಯಕ್ಷರೂ, ಸಿಂಡಿಕೇಟ್ ಬ್ಯಾಂಕಿನ ನಿವೃತ್ತ ಅಧ್ಯಕ್ಷರೂ ಆದ ಶ್ರೀ ಕೆ. ಕೆ. ಪೈ ಅವರು ಪುನರ್ಮುದ್ರಣಕ್ಕೆ ಅನುಮತಿಯನ್ನಿತ್ತು, ಶ್ರೀ ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗಿರುವರು. ಸಂಘದ ಸದಸ್ಯರಲ್ಲಿ ಓರ್ವರಾದ ಶ್ರೀ ಶಿವರಾಯ ರಾಮಕೃಷ್ಣ ಬಾಳಿಗರು ಈ ಕಾರ್ಯಕ್ಕೆ ನನಗೆ ಪ್ರಚೋದನೆಯನ್ನಿತ್ತರು,

ನನ್ನ ವಿನಂತಿಯನ್ನು ಮನ್ನಿಸಿ, ಈ ಮಹಾಗ್ರಂಥದ ಕಾಗದಗಳ ಬೆಲೆ ಮತ್ತು ಮುದ್ರಣದ ವೆಚ್ಚಕ್ಕಾಗಿ ಆತ್ಮ ಸಂತೋಷದಿಂದ ರೂ. 1,000/- (ಒಂದು ಸಾವಿರ ರೂ.ಗಳು ಮಾತ್ರ) ವನು ದಯಪಾಲಿಸಿರುವ ಡಾ. ಎ. ಆರ್. ಆಚಾರ್ (ಆಡಳಿತ ನಿರ್ದೇಶಕರು, ಎಸೋಸಿಯೇಟೆಡ್ ಕೆಮಿಕಲ್ಸ್, ಬೊಂಬಾಯಿ ಚಿರಸ್ಮರಣೀಯರು. ಅಂತೆಯೇ ಹನುಮಾನ್ ಟ್ರಾನ್ಸ್‌ಪೋರ್ಟ್ ಕಂ ಮತ್ತು ಗಜಾನನ ಮೋಟಾರ್ ಕಂಪನಿಯ ಆಡಳಿತ ನಿರ್ದೇಶಕರು ಜಾಹೀರಾತಿನ ರೂಪದಲ್ಲಿ ರೂ. 2,000/- (ರೂಪಾಯಿ ಎರಡು ಸಾವಿರ ಮಾತ್ರ) ವನ್ನು ಕೊಟ್ಟು ಭಗವದನುಗ್ರಹಕ್ಕೆ ಪಾತ್ರರಾಗಿರುವರು. ಜನತಾ ಕೋ-ಆಪರೇಟಿವ್ ಬ್ಯಾಂಕಿನ ಅಧ್ಯಕ್ಷ, ನಿರ್ದೇಶಕ ಮಂಡಳಿ, ಮತ್ತು ಪ್ರಧಾನ ವ್ಯವಸ್ಥಾಪಕರು ಅವರು ಜಾಹೀರಾತಿನ ರೂಪದಲ್ಲಿ ರೂ. 500/-ನ್ನು ಕೊಟ್ಟು ಪ್ರೋತ್ಸಾ

ಹಿಸಿರುವರು. ಶ್ರೀ ಕೃಷ್ಣ ಪರಮಾತ್ಮನು ಮುಂದಿನ ಪ್ರಕಟಣೆಗಳಲ್ಲಿ ಇದೇ ರೀತಿಯ ಸಹಾಯ ವನ್ನು ನೀಡುವಂತೆ ಅವರುಗಳನ್ನು ಅನುಗ್ರಹಿಸಲೆಂದು ಬೇಡುವೆನು.

ಈ ಮಹಾಗ್ರಂಥಕ್ಕ ವಿಚಾರ ಪ್ರಚೋದಕ ಮುನ್ನುಡಿ ಬರೆದು ಪ್ರೋತ್ಸಾಹಿಸಿದ ಶ್ರೀ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಗಳವರಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು ಸಲ್ಲುತ್ತವೆ. ಉದ್ಘಾಟನೆಯ ಸಮಾರಂಭವನ್ನು ನೆರವೇರಿಸಲು ಅನುಗ್ರಹ ಮಾಡಿ ಶುಭ ಸಂದೇಶ ವನ್ನಿತ್ತು ಅನುಗ್ರಹಿಸಿದ ಪರ್ಯಾಯ ಪೀಠಾಧಿರೂಢ ಶ್ರೀ ಕೃಷ್ಣಾಪುರ ಮಠದ ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀಗಳವರಿಗೂ ಹಾಗೂ ಅದಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀ ಶ್ರೀ ವಿಶ್ವಪ್ರಸನ್ನ ತೀರ್ಥ ಶ್ರೀಗಳವರಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳು. ಈ ಕಾರ್ಯಕ್ಕೆ ತುಂಬುಹೃದಯದ ಪ್ರೋತ್ಸಾಹವನ್ನಿತ್ತು ಸಹಕರಿಸಿದ ಡಾ. ವಿ. ಎಸ್. ಆಚಾರ್ಯ ರಿಗೆ ಧನ್ಯವಾದಗಳು. ಮುದ್ರಣ ಕಾರ್ಯಕ್ಕೆ ಅನುಕೂಲವಾಗುವಂತೆ ಹಳೆಯ ಪುಸ್ತಕಗಳನ್ನಿತ್ತು ಸಹಕರಿಸಿದ ಪರ್ಯಾಯ ಶ್ರೀ ಕೃಷ್ಣಾಪುರ ಮಠದ ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀಗಳವ ರಿಗೂ. ಉಡುಪಿ ಸಂಸ್ಕೃತ ಮಹಾಪಾಠಶಾಲೆಯ ಪ್ರಾಚಾರ್ಯ ಶ್ರೀ ಪಿ. ಲಕ್ಷ್ಮೀನಾರಾಯಣ ಶರ್ಮ ಅವರಿಗೂ, ಮಾರ್ಪಳ್ಳಿ ಶ್ರೀ ಮೋಹನ ಭಟ್ ಅವರಿಗೂ ನಮ್ಮ ತುಂಬು ಹೃದಯದ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿ ಪ್ರಕಾಶಿಸಲು ನೆರವಾದ ಅಗ್ರಹಾರ ಮುದ್ರಣಾಲಯದ ಸಿಬ್ಬಂದಿ ವರ್ಗದವರಿಗೆ ಹೃತ್ಪೂರ್ವಕ ಧನ್ಯವಾದಗಳು.

ತತ್ವಜಿಜ್ಞಾಸುಗಳಾದ ಸಜ್ಜನರು ಈ ಗ್ರಂಥದ ಸದುಪಯೋಗ ಪಡೆದು ತತ್ವಜ್ಞಾನ ಸಂಪನ್ನರಾಗಿ ಉದ್ಧೃತರಾಗಲೆಂದು ಹಾರೈಸಿ, ಇನ್ನು ಮುಂದಿನ ಪ್ರಕಟಣೆಗಳಿಗೆ ಉದಾರಿಗಳಿಂದ ಅಭಿಮಾನಿಗಳಿಂದ ಧನಸಹಾಯವನ್ನು ಯಾಚಿಸಿ, ಮುಂದಿನ ಪ್ರಕಟಣೆಗಳಿಗೆ ಶಕ್ತಿಯನ್ನು ನೀಡು ವಂತೆ ಶ್ರೀ ಭಗವಂತನನ್ನು ಪ್ರಾರ್ಥಿಸುವೆನು.

ಇತಿ ಸಜ್ಜನ ವಿಧೇಯ,

**ಕೆ. ಕೆ. ತಂತ್ರಿ**

(ನಿವೃತ್ತ ಅಧ್ಯಾಪಕ)

ದಿ. ಅಗ್ರಹಾರ ನಾರಾಯಣ ತಂತ್ರಿಗಳ ತೃತೀಯ ಪುತ್ರ



# ಮುನ್ನುಡಿ



"ಪಾರಾಶರ್ಯಃ ಪರತತ್ತ್ವ ಪ್ರಸಿದ್ಧ್ಯೈ ತಾತ್ಪರ್ಯಾರ್ಥಃ ಪರಮಂ ಭಾರತಸ್ಯ
ವ್ಯಕ್ತಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾದೇನಂ ಧನ್ಯಂ ಭುವನೇ ಮನ್ಯಮಾನಃ"

ಎಂಬ ಮಧ್ವವಿಜಯದ ವಚನದಂತೆ ಬದರಿಕಾಶ್ರಮದಲ್ಲಿ ಸಾಕ್ಷಾತ್ ಪರಾಶರ ಪುತ್ರರಾದ ವೇದ ವ್ಯಾಸದೇವರೇ ಭಾರತ ಮೊದಲಾದ ಪುರಾಣಗಳ ನಿಜಾರ್ಥವನ್ನು ತಿಳಿಸುವುದಕ್ಕೋಸ್ಕರ ಗ್ರಂಥ ಗಳನ್ನು ರಚಿಸಬೇಕೆಂದು ಮಧ್ವಾಚಾರ್ಯರಿಗೆ ಅಪ್ಪಣೆ ಕೊಡಿಸಿದ್ದರು. ತ್ರಿವಿಧ ಭಾಷೆಯ (ಗುಹ್ಯ ದರ್ಶನ ಸಮಾಧಿ) ಪರಿಜ್ಞಾನವಿಲ್ಲದವರಿಗೆ ಹಾಗೆಯೇ ನೂರು ರೀತಿಗಳ ಪರಿಚಯವಿಲ್ಲದವರಿಗೆ ಪುರಾಣಗಳ ತಾತ್ಪರ್ಯಾರ್ಥವನ್ನು ತಿಳಿಯಲು ಸಾಧ್ಯವಿಲ್ಲ. ಸಾಮಾನ್ಯವಾಗಿ ನೋಡುವಾಗ ಪರಸ್ಪರ ವಿರುದ್ಧಾರ್ಥ ಪ್ರತಿಪಾದನೆ ಮಾಡುವಂತೆ ತೋರತಕ್ಕ ವಾಕ್ಯಗಳು ಪುರಾಣಗಳಲ್ಲಿ ಬಹಳಷ್ಟು ಇವೆ. ಇವುಗಳ ಯಥಾರ್ಥವನ್ನು ತಿಳಿಸುವುದಕ್ಕೋಸ್ಕರ ಮಧ್ವಾಚಾರ್ಯರು ವೇದವ್ಯಾಸರ ಅಪ್ಪಣೆಯಂತೆ 32 ಅಧ್ಯಾಯಗಳುಳ್ಳ "ಮಹಾಭಾರತ ತಾತ್ಪರ್ಯ ನಿರ್ಣಯ" ಎಂಬ ಗ್ರಂಥವನ್ನು ರಚಿಸಿರುವರು. ಈ ಗ್ರಂಥವನ್ನು ಓದಿದಾಗ ಮಾತ್ರ ಪುರಾಣಗಳ ನಿಜ ಅಭಿಪ್ರಾಯ ತಿಳಿದು ಭಗ ವಂತನ ತತ್ತ್ವಜ್ಞಾನವನ್ನು ಹೊಂದಿ ಶ್ರೇಯಸ್ಸನ್ನು ಸಾಧಿಸಬಹುದು.

ಸಂಸ್ಕೃತ ಭಾಷೆಯಲ್ಲಿರುವ ಈ ಗ್ರಂಥವನ್ನು ಜನಸಾಮಾನ್ಯರಿಗೆ ಅನುಕೂಲವಾಗುವಂತೆ ಸರಳ ಕನ್ನಡ ಅರ್ಥಾನುವಾದದಿಂದ ಕೂಡಿಕೊಂಡು ಮಧ್ವಮುನಿ ಸೇವಾ ವೃಂದದವರು ಈ ಹಿಂದೆ ಪ್ರಕಟಿಸಿದ್ದರು. ಆ ಪ್ರತಿಗಳೆಲ್ಲವೂ ಮುಗಿದು ಹೋದ್ದರಿಂದ ಈ ಹಿಂದೆ ಅನುವಾದಕರಾಗಿದ್ದ ದಿವಂಗತ ಅಗ್ರಹಾರ ನಾರಾಯಣ ತಂತ್ರಿಗಳ ಸುಪುತ್ರರಾದ ಕೆ. ಕೆ. ತಂತ್ರಿಗಳವರು ಪುನರ್ ಮುದ್ರಣಕ್ಕೆ ಮನಸ್ಸು ಮಾಡಿ ಈಗಾಗಲೇ ಮೂರು ಅಧ್ಯಾಯಗಳ ಪುಸ್ತಕವನ್ನು ಈ ಹಿಂದೆ ಬಿಡುಗಡೆ ಮಾಡಿದ್ದರು. ಈಗ ಪುನಃ 4 ರಿಂದ 10ನೇ ಅಧ್ಯಾಯದ ವರೆಗೆ ರಾಮಾಯಣ ಹಾಗೂ ವ್ಯಾಸಾವತಾರದ ಕಥೆಯನ್ನು ನಿರೂಪಣೆ ಮಾಡುವಂತಹ ಗ್ರಂಥಭಾಗವನ್ನು ಪುನರ್ಮುದ್ರಣ ಮಾಡಿಸಲಿರುವ ಸಂಗತಿ ತಿಳಿದು ಸಂತೋಷವಾಯಿತು. ಸಜ್ಜನರೆಲ್ಲರೂ ಈ ಗ್ರಂಥವನ್ನು ಕೊಂಡು ರಾಮಾಯಣದ ಯಥಾರ್ಥ ಅಭಿಪ್ರಾಯವನ್ನು ತಿಳಿದು ಶ್ರೀ ರಾಮದೇವರ ಮೇಲೆ ನಿಶ್ಚಲ ಭಕ್ತಿ ಮಾಡಿಪರಮ ಶ್ರೇಯಸ್ಸನ್ನು ಹೊಂದಲಿ. ಈ ಪುಸ್ತಕವನ್ನು ಪುನರ್ಮುದ್ರಣ ಮಾಡತಕ್ಕ ಕೆ ಕೆ. ತಂತ್ರಿಗಳವರಿಗೂ ನಮ್ಮ ಆರಾಧ್ಯಮೂರ್ತಿ ಶ್ರೀ ಕಾಳೀಯಮರ್ಧನ ದೇವರು ಸರ್ವಾರ್ಥಗಳನ್ನು ಈಡೇರಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ ಕೃಷ್ಣಾಪುರ ಮಠ
ಉಡುಪಿ

ಇತ್ಯನೇಕ ಶ್ರೀ ಮನ್ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀಪಾದಂಗಳವರು



ರಾಮಾಯಣ ಮಹಾಭಾರತಗಳು ಭಾರತೀಯ ಸಂಸ್ಕೃತಿಯ ಆಕರಗಳಾಗಿವೆ. ಶ್ರೀರಾಮ, ಶ್ರೀಕೃಷ್ಣರ ಚರಿತ್ರೆಗಳು ಸಂಸ್ಕೃತಿಯ ಕನ್ನಡಿಯೂ ಆಗಿವೆ. ಆದರೆ ರಾಮಾಯಣ ಮಹಾಭಾರತಗಳ ನಿಜವಾದ ಚಿತ್ರವನ್ನು ನಮ್ಮ ಮುಂದೆ ಇಟ್ಟವರು ಶ್ರೀಮಧ್ವಾಚಾರ್ಯರಾಗಿದ್ದಾರೆ ಎಲ್ಲಾ ಗ್ರಂಥಾಲಯಗಳನ್ನು ಸಂದರ್ಶಿಸಿ ಹಳೆಯ ಪುಸ್ತಕಗಳನ್ನು ಶೋಧಿಸಿ ರಾಮಾಯಣ ಮಹಾಭಾರತಗಳ ನಿಜವಾದ ಘಟನೆಗಳನ್ನು ಮಹಾಭಾರತ ತಾತ್ಪರ್ಯ ನಿರ್ಣಯಗಳ ಮುಖಾಂತರ ನಮಗೆ ತೋರಿಸಿದ್ದಾರೆ. ಇದೀಗ ಉಡುಪಿಯ ಹಿರಿಯ ವಿದ್ವಾಂಸರಾಗಿದ್ದ **ಅಗ್ರಹಾರ ಶ್ರೀ ನಾರಾಯಣ ತಂತ್ರಿ**ಗಳು ಬರೆದ ತಾತ್ಪರ್ಯ ನಿರ್ಣಯದ ಕನ್ನಡ ಅನುವಾದದ ರಾಮಾಯಣದ ಭಾಗವು ಪುನಃ ಮುದ್ರಿತವಾಗಿರುವುದನ್ನು ತಿಳಿದು ನಮಗೆ ಸಂತೋಷವಾಗಿದೆ. ಶ್ರೀ ನಾರಾಯಣ ತಂತ್ರಿಗಳ ಸುಪುತ್ರರಾದ ಕೆ. ಕೆ. ತಂತ್ರಿಗಳು ಪರಿಶ್ರಮ ವಹಿಸಿ ಈ ಕಾರ್ಯವನ್ನು ಕೈಗೊಂಡಿರುವುದು ಅಭಿನಂದನೀಯವಾಗಿದೆ. ಜಿಜ್ಞಾಸುಗಳು ಇದರ ಲಾಭವನ್ನು ಪಡೆಯಲೆಂದು ಆಶಿಸುತ್ತೇನೆ.

**ಶ್ರೀ ಪೇಜಾವರ ಮಠ, ಉಡುಪಿ** — **ಶ್ರೀ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ**

---

ಪರಮ ಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ, ಶ್ರೀ ಪೇಜಾವರ ಅಧೋಕ್ಷಜ ಮಠ ಜಗದ್ಗುರು ಶ್ರೀ ಮಧ್ವಾಚಾರ್ಯ ಸಂಸ್ಥಾನ ಉಡುಪಿ ಅವರು ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಮುದ್ರಣಕ್ಕಾಗಿ ಮತ್ತು ಕಾಗದಗಳ ವೆಚ್ಚಕ್ಕಾಗಿ ರೂ 1000/- (ರೂ ಒಂದು ಸಾವಿರ ಮಾತ್ರ)ವನ್ನು ಕೊಟ್ಟು ಅನುಗ್ರಹಿಸಿ, ಮುಂದಿನ ಪ್ರಕಟಣೆಗಳಿಗೆ ಶಕ್ತಿಯನ್ನು ದಯಾಪಾಲಿಸುವಂತೆ ಹರಸಿದ್ದಾರೆ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು. ಶ್ರೀ ಶ್ರೀಗಳವರಿಗೆ ಕೀರ್ತಿಯನ್ನು ಶ್ರೀ ಕೃಷ್ಣ ಪರಮಾತ್ಮ ಮತ್ತು ಶ್ರೀ ಮುಖ್ಯಪ್ರಾಣರು ಇತೋಪ್ಯತಿಶಯವಾಗಿ ಬೆಳಗಿಸಲೆಂದು ಬೇಡುವೆನು.

**ಕೆ. ಕೆ. ತಂತ್ರಿ**

ಶ್ರೀ ವಿಶ್ವಪ್ರಿಯ ತೀರ್ಥರು ನಮ್ಮವರಾದ ಶ್ರೀ ಕೆ. ಕೃಷ್ಣ ತಂತ್ರಿ ಇವರಿಗೆ ಮಾಡುವ ಸಪ್ರೇಮ ನಾರಾಯಣ ಸ್ಮರಣೆಗಳು,



ಮಹಾಭಾರತ ತಾತ್ಪರ್ಯ ನಿರ್ಣಯವು ಒಂದು ಅಮೂಲ್ಯ ಕೃತಿ. ಸಕಲ ಶಾಸ್ತ್ರದ ಅರ್ಥವನ್ನು ಒಳಗೊಂಡಿದೆ. ಮಹಾಭಾರತದ ಸಂದಿಗ್ಧ ಸ್ಥಳಗಳಿಗೆಲ್ಲಾ ಸೂಕ್ತ ಸಮಾಧಾನವನ್ನು ಕೊಡುವುದಾಗಿದೆ. ಶ್ರೀ ವೇದವ್ಯಾಸರ ವಿಶೇಷ ಅಪ್ಪಣೆ ಮೇರೆಗೆ ಆಚಾರ್ಯ ಮಧ್ವರಿಂದ ರಚಿತವಾದ ಗ್ರಂಥ. ಆಧ್ಯಾತ್ಮಿಕ ತೃಷಾ ಉಳ್ಳ ಪ್ರತಿಯೊಬ್ಬನೂ ಅಧ್ಯಯನ ಮಾಡಬೇಕಾದ ಗ್ರಂಥ. ಇಂತಹ ಗ್ರಂಥದ ಕನ್ನಡ ಅನುವಾದವನ್ನು ನಿಮ್ಮ ತಂದೆಯವರು ಮಾಡಿ ಸಾಮಾನ್ಯ ಜನರಿಗೂ ಎಟಕುವಂತೆ ಮಾಡಿದ್ದರು. ಅದು ಪೂರ್ಣವಾಗಿ ವ್ಯಯವಾದಾಗ ಪುನಃ ಅದರ ಮುದ್ರಣವನ್ನು ಮಾಡಿ ನಿಮ್ಮ ತಂದೆಯವರ ವಿಶೇಷವಾಗಿ ಆಚಾರ್ಯ ಮಧ್ವರ ಕೃಪಾಕಟಾಕ್ಷಕ್ಕೆ ಪಾತ್ರರಾಗಿದ್ದೀರಿ. ಆಚಾರ್ಯ ಮಧ್ವರ ಅಂತರ್ಯಾಮಿ ಶ್ರೀ ಕೃಷ್ಣ ನಿಮಗೆ ಪ್ರೀತನಾಗಲಿ.

ಶ್ರೀ ಅದಮಾರು ಮಠ
ಉಡುಪಿ.

ಇತ್ಯನೇಕ ಸಪ್ರೇಮ ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿಶ್ವಪ್ರಿಯ ತೀರ್ಥರು

# ಧನ ಸಹಾಯವಿತ್ತ ಮಹನೀಯರು



**ಡಾ. ಎ. ಆರ್. ಆಚಾರ್**

ಆಡಳಿತ ನಿರ್ದೇಶಕರು, ಎಸೋಸಿಯೇಟೆಡ್ ಕೆಮಿಕಲ್ಸ್, ಬೊಂಬಾಯಿ



**ಶ್ರೀ ಪಿ. ರಬೀಂದ್ರ ನಾಯಕ್**

ಆಡಳಿತ ನಿರ್ದೇಶಕರು

ಹನುಮಾನ್ ಟ್ರಾನ್ಸ್‌ಪೋರ್ಟ್ ಕಂಪೆನಿ ಉಡುಪಿ

ಗಜಾನನ ಮೋಟಾರ್ ಟ್ರಾನ್ಸ್‌ಪೋರ್ಟ್ ಕಂಪೆನಿ ಸಾಗರ

ನಮ್ಮ ಮುಂದಿನ ಪ್ರಕಟಣೆಗಳಲ್ಲೂ ಇದೇ ರೀತಿಯ ಸಹಕಾರವನ್ನು ನಿರೀಕ್ಷಿಸುವ,

**ಕೆ. ಕೆ. ತಂತ್ರಿ**

॥ ಶ್ರೀಃ ॥

# ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯವು

## ನಾಲ್ಕನೇ ಅಧ್ಯಾಯವು

**ಓಂ ॥ ಜಯತಿ ಶ್ರೀಮದಾನಂದತೀರ್ಥ ಮಾರ್ತಂಡ ಚಂಡಗೌಃ ।**
**ಯತ್ಸಂಪರ್ಕಃ ಸತಾಂ ಮೋಹಶರ್ವರೀಂ ಸಮುದೀದಲತ್ ॥**
**ಮಹಾಭಾರತತಾತ್ಪರ್ಯ ನಿರ್ಣಯಸ್ಯಾರ್ಥಮಂಜಸಾ ।**
**ಕರ್ನಾಟಭಾಷಯಾ ಬ್ರೂತೇ ತಂತ್ರಿನಾರಾಯಣಃ ಸುಧೀಃ ॥**
**ಶ್ರೀ ವಾದಿರಾಜಟೀಕಾರ್ಥಂ ಶ್ರೀ ಜನಾರ್ದನಕೀರ್ತಿತಂ ।**
**ಬಾಹುಲ್ಯೇನ ಸಮಾಲೋಚ್ಯ ಗ್ರಂಥಕೃನ್ಮಧ್ವತಃ ಪ್ರಿಯೇ ॥**
**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ಓಂ ಅಥಾಭ್ಯವರ್ಧಂಶ್ಚತುರಾಃ ಕುಮಾರಾಃ**
**ನೃಪಸ್ಯ ಗೇಹೇ ಪುರುಷೋತ್ತಮಾದ್ಯಾಃ ॥**
**ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿ-**
**ರಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಂ ॥೧॥**

ಅ ॥ ದಶರಥನಿಂದಲೂ ತಮ್ಮ ತಮ್ಮ ತಾಯಂದಿರಲ್ಲಿ ಉತ್ಪತ್ತಿಯನ್ನು ಹೊಂದಿದ ಮೇಲೆ ಚಾತುರ್ಯಾದಿ ಗುಣಯುಕ್ತರಾದ, ಪುರುಷೋತ್ತಮನಾದ ಶ್ರೀ ರಾಮನು ಮೊದಲಾಗಿರತಕ್ಕವರಾಗಿವುಳ್ಳ **ಕುಮಾರರು** ದಶರಥರಾಜನ ಮನೆಯಲ್ಲಿ ಬೆಳೆದರು. ನಿತ್ಯದಲ್ಲಿಯೂ ಅಭಿವೃದ್ಧಿಯನ್ನು ಹೊಂದಿಕೊಂಡು ಇರುವ ಆ ಶ್ರೀ ರಾಮನ ವೃದ್ಧಿಯು ಅಯೋಧ್ಯಾಪಟ್ಟಣದಲ್ಲಿರತಕ್ಕ ಜನರ ವ್ಯಾಪ್ತವಾದ ಮೂರ್ತಿಯನ್ನು ನೋಡಲಿಕ್ಕೆ ಶಕ್ತಿಯಿಲ್ಲದಿದ್ದವರ ದೃಷ್ಟಿಯನ್ನು ಅಪೇಕ್ಷಿಸಿಕೊಂಡು ವೃದ್ಧಿಯು ಹೇಳಲ್ಪಡುತ್ತದೆ. **'ನ ಕರ್ಮಣಾ ವರ್ಧತೇ ನೋ ಕನೀಯಾನ್'** ಇತ್ಯಾದಿ ಶ್ರುತಿಪ್ರಸಿದ್ಧವು.

**ವಿಶೇಷಾಂಶ**—(1) ಶ್ರೀಮದಾಚಾರ್ಯರು ಭಕ್ತರಿಗೆ ಜ್ಞಾನವನ್ನೂ, ಅಭಕ್ತರಿಗೆ ಮೋಹವನ್ನೂ ಕೊಡುವ ಶ್ರೀ ರಾಮನಾಗಿ ಅವತಾರಮಾಡಿದ ಶ್ರೀಹರಿಯ ಅದ್ಭುತ ಲೀಲೆಯನ್ನು ಸಂಕ್ಷೇಪದಿಂದ ಹೇಳುವುದಕ್ಕಾಗಿ ಬಾಲಕಾಂಡ ಕಥೆಯನ್ನು ಹೇಳುತ್ತಾರೆ (2) ಶ್ರೀ ರಾಮಚಂದ್ರದೇವರಿಗೆ ಪ್ರಾದುರ್ಭಾವಮಾತ್ರವು. ಲಕ್ಷ್ಮಣಾದಿಗಳಂತೆ ಸಾಕ್ಷಾತ್ಕುಮಾರತ್ವವಿಲ್ಲವೆಂದು ಸೂಚಿಸುವುದಕ್ಕಾಗಿ ಪುರುಷೋತ್ತಮ ಪದವು. **'ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ'** ಎಂದು ಗೀತೆಯಲ್ಲಿ ಹೇಳಿದ ಅವ್ಯಯತ್ವ ಈಶ್ವರತ್ವಾದಿಗಳನ್ನೂ ಪುರುಷೋತ್ತಮ ಪದದಿಂದ ಸೂಚಿಸಿರುವರು. (3) ಕ್ರಮಿಕ ವೃದ್ಧಿದರ್ಶನಾಖ್ಯ ಫಲವು ಪರಗಾಮಿಯಾದುದರಿಂದ ಅಭ್ಯವರ್ಧನ್ ಎಂದು ಪರಸ್ಮೈಪದ ಪ್ರಯೋಗವು ॥೧॥

ಮೂ ॥ ನಿರೀಕ್ಷ್ಯ ನಿತ್ಯಂ ಚತುರಃ ಕುಮಾರಾನ್
ಪಿತಾ ಮುದಂ ಸಂತತಮಾಪ ಚೋಚ್ಚಾಂ ॥
ವಿಶೇಷತೋ ರಾಮಮುಖೇಂದುಬಿಂಬ
ಮವೇಕ್ಷ್ಯ ರಾಜಾ ಕೃತಕೃತ್ಯ ಆಸೀತ್ ॥೨॥

ಅ ॥ ತಂದೆಯಾದ ದಶರಥರಾಜನು ನಿತ್ಯದಲ್ಲಿಯೂ ನಾಲ್ಕು ಸಂಖ್ಯಾಕರಾದ ಕುಮಾರರನ್ನು ನೋಡಿ ಅತ್ಯುಚ್ಚ ಹೇಗೆ ಆದೀತೋ ಹಾಗೆ ಅವಿಚ್ಛಿನ್ನವಾದ ಸಂತೋಷವನ್ನು ಹೊಂದಿದನು. (ಜ) ಜಗತ್ತನ್ನೇ ಮೋಹಿಸತಕ್ಕ ಪುತ್ರರನ್ನು ನೋಡಿದಾಗ ಸಂತೋಷವು ಸಂಭಾವಿತವೇ ದಶರಥರಾಜನು ವಿಶೇಷಾಕಾರವಾಗಿ ಶ್ರೀ ರಾಮನ ಮುಖವೆಂಬುವ ಚಂದ್ರಮಂಡಲವನ್ನು ನೋಡಿ ಮಾಡಲ್ಪಟ್ಟ, ಮಾಡಲರ್ಹಗಳಾದ ಪುಣ್ಯಗಳುಳ್ಳವನು ಆದನು.

**ವಿಶೇಷಾಂಶ**— (1) ಅತಿಮನೋಹರನಾದ ರಾಮನ ಮುಖವನ್ನು ನೋಡಿದವರಿಂದಲೇ ಪರಮಾನಂದವು ಹುಟ್ಟುತ್ತದೆ ಎನ್ನುವ ತಾತ್ಪರ್ಯದಿಂದ 'ರಾಮಮುಖೇಂದುಬಿಂಬಂ' ಎಂದು ಹೇಳಿದ್ದು. 'ರಮಯತೀತಿ ರಾಮಃ' ಎನ್ನುವ ವ್ಯುತ್ಪತ್ತಿಯಿಂದ ಶ್ರೀ ರಾಮನು ಸರ್ವಾಂಗಗಳಿಂದಲೂ ಹರ್ಷದಾಯಕನು. ಅದರಲ್ಲಿಯೂ ಮಂದಹಾಸದಿಂದಲೂ ಕೃಪಾಕಟಾಕ್ಷದಿಂದಲೂ ಅತ್ಯಂತವಾಗಿ ಜನರನ್ನು ರಂಜಿಸುತ್ತಾನೆಂದು ಸೂಚಿಸುವುದಕ್ಕಾಗಿ ಮುಖವೆನ್ನುವ ಪದವನ್ನು ಗ್ರಹಣಮಾಡಿರುವರು ॥೨॥

ಮೂ ॥ ತನ್ಮಾತರಃ ಪೌರಜನಾ ಅಮಾತ್ಯಾ
ಅಂತಃಪುರಾ ವೈಷಯಿಕಾಶ್ಚ ಸರ್ವೇ ॥
ಅವೇಕ್ಷಮಾಣಾಃ ಪರಮಂ ಪುಮಾಂಸಂ
ಸ್ವಾನಂ ತೃಪ್ತಾ ಇವ ಸಂಬಭೂವುಃ ॥೩॥

ಅ ॥ ರಾಮಾದಿಗಳ ತಾಯಂದಿರು. ಪಟ್ಟದಲ್ಲಿದ್ದ ಜನರು, ಮಂತ್ರಿಗಳು, ದಾಸಿಯರು ಎಲ್ಲಾ ರಾಷ್ಟ್ರದಲ್ಲಿದ್ದ ಜನರೂ ಕೂಡ ಸರ್ವೋತ್ತಮನಾದ, ಪುರುಷಶಬ್ದವಾಚ್ಯನಾದ ಶ್ರೀರಾಮನನ್ನು ನೋಡುವವರಾಗಿ ಸ್ವರೂಪಭೂತನಾದ ಆನಂದದಿಂದ ತೃಪ್ತ (ಮುಕ್ತ)ರಾದವರಂತೆಯೇ ಆದರು.

**ವಿಶೇಷಾಂಶ** — ಸುಮಿತ್ರಾ-ಕೈಕೇಯಿಗೆ ಪ್ರತ್ಯೇಕ ಮಕ್ಕಳು ಇದ್ದಾಗ್ಯೂ ಲಾವಣ್ಯ ಮೊದಲಾದ ಶುಭಗುಣಗಳಿಂದ ಸರ್ವೋತ್ತಮನಾದ, ಪರಮಪುರುಷನಾದ ಶ್ರೀ ರಾಮನ ಸರ್ವಾಂಗಗಳನ್ನು ನೋಡಿದರಿಂದಲೇ ಅತಿಶಯಿತವಾದ ಆನಂದವು ಹುಟ್ಟುವುದು ಎಂದು ಸೂಚಿಸುವುದಕ್ಕಾಗಿ 'ಪರಮಂ ಪುಮಾಂಸಂ' ಎಂದು ಹೇಳಿದ್ದು ॥೩॥

ಮೂ ॥ ತತಃ ಸುವಂಶೇ ಶಶಿನಃ ಪ್ರಸೂತೋ
ಗಾಧೀತಿ ಶಕ್ರಸ್ತನುಜೋಽಸ್ಯ ಚಾಸೀತ ॥
ವರೇಣ ವಿಪ್ರತ್ವಮವಾಪ ಯೋಽಸೌ
ವಿಶ್ವಸ್ಯ ಮಿತ್ರಂ ಸ ಇಹಾಜಗಾಮ ॥೪॥

ಅ ॥ ಚಂದ್ರನ ಪ್ರಶಸ್ತವಾದ ವಂಶವಲ್ಲಿ ಶಕ್ರನು (ದೇವೇಂದ್ರನು) ಗಾಧಿರಾಜನೆನ್ನುವ ನಾಮದಿಂದ ಹುಟ್ಟಿದನು. ಈ ಗಾಧಿರಾಜನಿಗೆ ಯಾವಾತನು ವರದಿಂದ ಬ್ರಾಹ್ಮಣತ್ವವನ್ನು ಹೊಂದಿರುವನೋ ಅಂಥಾ ವಿಶ್ವಾ-ಮಿತ್ರ ಋಷಿಯು ಮಗನಾಗಿ ಹುಟ್ಟಿದನು. ಆ ವಿಶ್ವಾಮಿತ್ರನು ಕುಮಾರರಿಗೆ ಬಾಲ್ಯಾವಸ್ಥೆಯು ಮುಗಿದಮೇಲೆ ಈ ಅಯೋಧ್ಯಾಪಟ್ಟಣಕ್ಕೆ ಬಂದನು.

**ವಿಶೇಷಾಂಶ** — ಜಗತ್ತಿಗೆ ಅಮಿತ್ರನು ಎನ್ನುವ ಭ್ರಾಂತಿಯನ್ನು ಕಳೆಯುವುದಕ್ಕಾಗಿ 'ವಿಶ್ವಸ್ಯ – ಮಿತ್ರಂ' ಎಂದು ವಿಭಾಗಮಾಡಿ ಹೇಳಿರುವರು. ವಿಶ್ವಸ್ಯ-ಜಗತ್ತಿಗೆ, ಅ-ಸರ್ವ ರೀತಿಯಿಂದಲೂ. ಮಿತ್ರಂ-ಯಾವ ಋಷಿಯು ಮಿತ್ರನೋ ಆತನು ವಿಶ್ವಾಮಿತ್ರನು. ದುಷ್ಟರಾದ ದೈತ್ಯರನ್ನು ಸಂಹರಿಸಿದರಿಂದ ಜಗತ್ತಿಗೆ ಉಪಕಾರಕನು. ॥೪॥

ಮೂ ॥ ತೇನಾರ್ಥಿತೋ ಯಜ್ಞರಿರಕ್ಷಯೈವ
ಕೃಚ್ಛ್ರೇಣ ಪಿತ್ರಾಸ್ಯ ಭಯಾದ್ವಿಸೃಷ್ಟಃ ॥
ಜಗಾಮ ರಾಮಃ ಸಹ ಲಕ್ಷ್ಮಣೇನ
ಸಿದ್ಧಾಶ್ರಮಂ ಸಿದ್ಧಜನಾಭಿವಂದ್ಯಃ ॥೫॥

ಅ ॥ ಆ ವಿಶ್ವಾಮಿತ್ರನಿಂದ ಯಜ್ಞವನ್ನು ರಕ್ಷಿಸಬೇಕೆನ್ನುವ ಇಚ್ಛೆಯಿಂದಲೇ ಶ್ರೀ ರಾಮನು ಪ್ರಾರ್ಥಿಸಲ್ಪಟ್ಟನು. ಈ ವಿಶ್ವಾಮಿತ್ರನ ಶಾಪಭಯದಿಂದ ಕಷ್ಟದಿಂದ ರಾಮನ ತಂದೆ ಯಾದ ದಶರಥರಾಜನಿಂದ ಬಿಡಲ್ಪಟ್ಟನು. ಸಿದ್ಧಜನರಿಂದ ನಮಸ್ಕರಿಸಿಕೊಳ್ಳಲ್ಪಡತಕ್ಕ ಶ್ರೀ ರಾಮನು ಲಕ್ಷ್ಮಣನಿಂದ ಕೂಡಿಕೊಂಡು ಯೋಗಿಗಳ ಆಶ್ರಮವನ್ನು ಕುರಿತು ಹೋದನು॥೫॥

ಮೂ ॥ ಅನುಗ್ರಹಾರ್ಥಂ ಸ ಋಷೇ ರನಾಪ
ಸಲಕ್ಷ್ಮಣೋಽಸ್ತ್ರಂ ಮುನಿತೋ ಹಿ ಕೇವಲಂ ॥
ನನಂದಿರೇ ಬ್ರಹ್ಮಮುಖಾಃ ಸುರೇಶಾಃ
ತನುಸ್ತ್ರರೂಪಾಃ ಪ್ರಕಟಾಃ ಸಮೇತ್ಯ ॥೬॥

ಅ ॥ ಲಕ್ಷ್ಮಣನಿಂದ ಕೂಡಿದ ಆ ರಾಮನು ಋಷಿಗೆ ಕೇವಲ ಅನುಗ್ರಹಕ್ಕಾಗಿ (ಅಂದರೆ ತನ್ನ ಗುಣಗಳನ್ನು ಪ್ರತಿಪಾದಿಸತಕ್ಕ ಅಸ್ತ್ರಮಹಾಮಂತ್ರಗಳಿಗೆ '**ಅನಂತಂ ವಿಷ್ಣು ಸನ್ನಿಧೌ**' ಎನ್ನುವ ವಚನರೀತಿಯಿಂದ ತನ್ನ ಕವಿಯ ಸಮೀಪದಲ್ಲಿ ಜಪದಿಂದುಂಟಾದ ಅನುಗ್ರಹಕ್ಕಾಗಿಯೂ ಅಥವಾ ಮಹಾನುಭಾವನಾದ ಶಿಷ್ಯನು ಗುರುಗಳ ಮುಖದಿಂದ ಮಂತ್ರವನ್ನು ಕೇಳಬೇಕು ಎಂದು ಸದ್ವರ್ಗಗಳ ಶಿಕ್ಷಣರೂಪದಿಂದ ಲೋಕಕ್ಕೆ ಅನುಗ್ರಹಿಸುವುದಕ್ಕಾಗಿಯೂ, ಅಥವಾ ಸ್ವಾಪೇಕ್ಷಿತ ರಾದ ಅಸುರಜನರನ್ನು ಮೋಹಿಸಲಿಕ್ಕೆ ಸಾಚಿವ್ಯವನ್ನು ಮಾಡಿದರಿಂದುಂಟಾದ ಅನುಗ್ರಹಕ್ಕಾ ಗಿಯೂ ಅಥವಾ ಕಸ್ತೂರೀಸಂಬಂಧದಿಂದ ವಾಯುವಿಗೆ ಪರಿಮಲಾಖ್ಯಗುಣದ ಲಾಭದಂತೆಯೇ ಕವಿಯಸಂಬಂಧದಿಂದ ಆ ಮಂತ್ರಗಳಿಗೆ ಸಾಮರ್ಥ್ಯವಿಶೇಷದಾನರೂಪವಾದ ಅನುಗ್ರಹಕ್ಕಾಗಿ) ಅಸ್ತ್ರವನ್ನು ಹೊಂದಿದನು. ಅಸ್ತ್ರಗಳನ್ನು ಹೊಂದಿಸಿಕೊಡುವ ಅಥವಾ ಅಸ್ತ್ರವೇ ಪ್ರತಿಮೆಯಾಗಿ ಯುಳ್ಳ, ಬ್ರಹ್ಮನೇ ಮೊದಲಾಗುಳ್ಳ ದೇವಶ್ರೇಷ್ಠರು ಪ್ರತ್ಯಕ್ಷೀಭೂತರಾಗಿ ಆ ರಾಮನನ್ನು ಹೊಂದಿ ನಮಸ್ಕರಿಸಿದರು. ॥೬॥

ಮೂ ॥ ಅಥೋ ಜಘಾನಾಶು ಶರೇಣ ತಾಟಕಾಂ
ವರಾದ್ವಿಧಾತುಸ್ತದನನ್ಯವಧ್ಯಾಂ ॥
ರರಕ್ಷ ಯಜ್ಞಂ ಚ ಮುನೇರ್ನಿಹತ್ಯ
ಸುಬಾಹುಮೀಶಾನಗಿರಾ ವಿಮೃತ್ಯುಂ ॥೭॥

ಅ ॥ ಆ ಮೇಲೆ (ಶ್ರೀ ರಾಮನು) ಬ್ರಹ್ಮನ ವರದೆಶೆಯಿಂದ ಶ್ರೀ ರಾಮನಕ್ಕಿಂತ ಬೇರೆಯವರಿಂದ ಸಂಹರಿಸಿಕೊಳ್ಳಲ್ಪಡಲಿಕ್ಕೆ ಅಶಕ್ಯಳಾದ ತಾಟಕೆಯನ್ನು ಬಾಣದಿಂದ ಶೀಘ್ರದಲ್ಲಿ ಸಂಹರಿಸಿದನು. ರುದ್ರನ ಮಾತಿನಿಂದ ಮರಣರಹಿತನಾದ ಸುಬಾಹುನಾಮಕ ರಾಕ್ಷಸನನ್ನು ಸಂಹಾರಮಾಡಿ ವಿಶ್ವಾಮಿತ್ರನ ಯಜ್ಞವನ್ನು ರಕ್ಷಿಸಿದನು. ॥೭॥

ಮೂ ॥ ಶರೇಣ ಮಾರೀಚಮಥಾರ್ಣವೇಽಕ್ಷಿಪ
ದ್ವಚೋ ವಿರಿಂಚಸ್ಯ ತು ಮಾನಯಾನಃ ॥
ಅವಧ್ಯತಾ ತೇನ ಹಿ ತಸ್ಯ ದತ್ತಾ
ಜಘಾನ ಚಾನ್ಯಾನ್ರಜನೀಚರಾನಥ ॥೮॥

ಅ ॥ ಸುಬಾಹುನಾಮಕ ರಾಕ್ಷಸನನ್ನು ಸಂಹರಿಸಿದ ಮೇಲೆ ಶ್ರೀ ರಾಮನು (ತು =) ಸೀತಾವಂಚನಮೊದಲಾದ ಮುಂದಿನ ಕಾರ್ಯವಿಶೇಷದೆಶೆಯಿಂದ ಚತುರ್ಮುಖನ ಮಾತನ್ನು ಬಹು ಮಾನಿಸುವವನಾಗಿ ಮಾರೀಚ ರಾಕ್ಷಸನನ್ನು ವಾಯುವ್ಯಾಸ್ತ್ರದಿಂದ ಮಂತ್ರಿತವಾದ ಬಾಣದಿಂದ ಸಮುದ್ರದಲ್ಲಿ ಬಿಸಾಡಿದನು. ಆ ಬ್ರಹ್ಮನಿಂದ ಆ ಮಾರೀಚನಿಗೆ ಅವಧ್ಯತ್ವರೂಪವಾದ ವರವು ಕೊಡಲ್ಪಟ್ಟಿದೆ ಮಾರೀಚನನ್ನು ಬಿಸಾಡಿದ ಮೇಲೆ ಇತರರಾದ ರಾಕ್ಷಸರನ್ನು ಸಂಹರಿಸಿದನು ॥೮॥

ಮೂ ॥ ತದಾ ವಿದೇಹೇ ನ ಸುತಾಸ್ವಯಂವರೋ
ವಿಘೋಷಿತೋಽ ದಿಕ್ಷು ವಿದಿಕ್ಷು ಸರ್ವತಃ ॥
ನಿಧಾರ್ಯ ತದ್ಗಾಧಿಸುತಾನುಯಾಯಿ
ಯಯೌ ವಿದೇಹಾನನುಜಾನುಯಾತಃ ॥೯॥

ಅ ॥ ವಿಶ್ವಾಮಿತ್ರಋಷಿಯ ಯಜ್ಞಸಮಾಪ್ತಿ ಸಮಯದಲ್ಲಿ ಜನಕರಾಜನಿಂದ ಎಲ್ಲಾ ದಿಕ್ಕುಗಳಲ್ಲಿಯೂ, ಆಗ್ನೇಯಾದಿ ಕೋಣದಿಕ್ಕುಗಳಲ್ಲಿಯೂ ಮಗಳಾದ ಸೀತಾದೇವಿಯ ಸ್ವಯಂವರವು (ಕನ್ನಿಕೆಯು ವರನ ಪ್ರತಾಪಾತಿಶಯವನ್ನು ನೋಡಿ ತಾನೇ ಎಲ್ಲಿ ಅಂಗೀಕರಿಸಿಕೊಳ್ಳುತ್ತಾಳೋ ಅದು ಸ್ವಯಂವರವು) ಕೇಳಿಸಲ್ಪಟ್ಟಿತು. ಆ ಧ್ವನಿಯನ್ನು ನಿಶ್ಚಯಿಸಿಕೊಂಡು ವಿಶ್ವಾಮಿತ್ರನನ್ನು ಅನುಸರಿಸಿಕೊಂಡು ಇರುವ ತಮ್ಮನಾದ ಲಕ್ಷ್ಮಣನಿಂದ ಹಿಂಬಾಲಿಸಿಕೊಳ್ಳಲ್ಪಟ್ಟ ಶ್ರೀ ರಾಮನು ವಿದೇಹದೇಶಕ್ಕೆ ಹೋದನು. ॥೯॥

ಮೂ ॥ ಅಥೋ ಅಹಲ್ಯಾಂ ಪತಿನಾಭಿಶಪ್ತಾಂ
ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಾಂ ॥
ಸ್ವದರ್ಶನಾನ್ಮಾನುಷತಾಮುಪೇತಾಂ
ಸುಯೋಜಯಾಮಾಸ ಸ ಗೌತಮೇನ ॥೧೦॥

ಅ॥ ಆಶ್ರಮದಿಂದ ಹೊರಟಮೇಲೆ ಆ ಶ್ರೀ ರಾಮನು ಇಂದ್ರನು ಮಾಡಲ್ಪಟ್ಟ ಬಲಾತ್ಕಾರದಿಂದ ಕ್ರೀಡಿಸಿದರಿಂದ ಗಂಡನಾದ ಗೌತಮನಿಂದ ಶಾಪ ಹೊಂದಲ್ಪಟ್ಟು ಶಿಲೆಯಾಗಿ ಬಿದ್ದಿರುವ ತನ್ನ ಕೃಪಾಯುಕ್ತವಾದ ದರ್ಶನನೆಶಯಿಂದ ಮನುಷ್ಯಸ್ವರೂಪತ್ವವನ್ನು ಹೊಂದಿದ ಅಹಲ್ಯಾನಾಮಕಳಾದ ಗೌತಮನ ಹೆಂಡತಿಯನ್ನು ಗೌತಮನಿಂದ ಕೂಡಿಸಿದನು. ॥೧೦॥

ಮೂ ॥ ಬಲಂ ಸ್ವಭಕ್ತೇರಧಿಕಂ ಪ್ರಕಾಶಯನ್
ಅನುಗ್ರಹಂ ಚ ತ್ರಿದಶೇಷು ತುಲ್ಯಂ ॥
ಅನನ್ಯಭಕ್ತಾಂ ಚ ಸುರೇಶಕಾಂಕ್ಷಯಾ
ವಿಧಾಯ ನಾರೀಂ ಪ್ರಯಯೌ ತಯಾರ್ಚಿತಃ ೧೧॥

ಅ ॥ ದೇವತೆಗಳಲ್ಲಿ ತನ್ನ ಭಕ್ತಿಗೆ ಅತ್ಯಧಿಕವಾದ ಬಲವನ್ನೂ ಅವ್ಯಶವಾದ ತನ್ನ ಅನುಗ್ರಹವನ್ನೂ ಕೂಡ ಪ್ರಕಾಶಪಡಿಸುತ್ತಾ ಶ್ರೀ ರಾಮನು ಇತರರಲ್ಲಿ ಭಕ್ತಿಯಿಲ್ಲದಿರುವ ಅಹಲ್ಯಾದೇವಿಯನ್ನು ದೇವೇಂದ್ರನ ಇಚ್ಛೆಯಿಂದ ಸುಂದರಿಯನ್ನಾಗಿ ಮಾಡಿ ಅವಳಿಂದ ಪೂಜಿಸಿಕೊಳ್ಳಲ್ಪಟ್ಟವನಾಗಿ ಹೋದನು. ॥೧೧॥

ಲಕ್ಷ್ಮೀರೂಪಳಾದ ಸೀತಾದೇವಿಗೆ ಶ್ರೀ ರಾಮನ ಅತಿ ಸೌಂದರ್ಯವನ್ನು ನೋಡುವುದರಲ್ಲಿಯೂ ಶಕ್ತಿಯಿದ್ದ ಪ್ರಯುಕ್ತ ಜನಕರಾಜನ ಪಟ್ಟಣವನ್ನು ಪ್ರವೇಶಮಾಡಿದಾಗ ಲಾವಣ್ಯಾತಿಶಯವು ರಾಮನಿಂದ ತೋರಿಸಲ್ಪಟ್ಟಿತು ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ—

ಮೂ ॥ ಶ್ಯಾಮಾವದಾತೇ ಜಗದೇಕಸಾರೇ
ಸನಂತಚಂದ್ರಾಧಿಕಕಾಂತಿಕಾಂತೇ ॥
ಸಹಾನುಜೇ ಕಾರ್ಮುಕಬಾಣಪಾಣೌ
ಪುರೀಂ ಪ್ರವಿಷ್ಟೇ ತುತುಷುರ್ವಿದೇಹಜಾಃ ॥೧೨॥

ಅ ॥ ಶ್ಯಾಮವರ್ಣನೂ ಶುಭ್ರನೂ ಆದವನು,(ಅಂದರೆ ಶ್ಯಾಮತ್ವವಿದ್ದಾಗ್ಯೂ ಸೂರ್ಯಮಂಡಲದಂತೆಯೂ, ಇಂದ್ರನೀಲಮಣಿಯಂತೆಯೂ ಶುಕ್ಲ – ಭಾಸ್ವರತೇಜೋವಿಶೇಷದಿಂದ ಕೂಡಿರುವುದರಿಂದ ಶುಭ್ರನಾದವನು, ಜಗತ್ತುಗಳಿಗೆ ಮುಖ್ಯ ಶ್ರೇಷ್ಠನಾದವನು, ಶೋಭನರಾದ (ಕಲಂಕರಹಿತರಾದ) ಅನಂತ ಚಂದ್ರರಿಂದ ಅಧಿಕವಾದ ಕಾಂತಿಯಿಂದ ಮನೋಹರನಾದ, ಧನುರ್ಬಾಣಗಳು ಕೈಯಲ್ಲಿವುಳ್ಳ ತಮ್ಮನಾದ ಲಕ್ಷ್ಮಣನಿಂದ ಕೂಡಿದ ಶ್ರೀರಾಮನು ವಿದೇಹರಾಜನ ಪಟ್ಟಣವನ್ನು ಪ್ರವೇಶಮಾಡುತ್ತಿರಲು, ವಿದೇಹಪಟ್ಟಣದಲ್ಲಿದ್ದ ಜನರು ಅತ್ಯಧಿಕವಾಗಿ ಸಂತೋಷಪಟ್ಟರು ॥೧೨॥

ಹಿಂದೆ ಹೇಳಿದ ಕಾಂತಿವಿಶೇಷದ ದರ್ಶನಯೋಗ್ಯತೆಯು ಲಕ್ಷ್ಮೀದೇವಿಗೇನೇ. ಇತರರಿಗೆ ಇಲ್ಲವೆನ್ನುವ ಅಭಿಪ್ರಾಯದಿಂದ 'ತುತುಷುರ್ವಿದೇಹಜಾಃ' ಎಂದು ಹೇಳಿರುವರು. ದದೃಶುಃ–ನೋಡಿದರು ಎಂದು ಹೇಳಲಿಲ್ಲ, ನೋಡಿದರೂ ಕೂಡ ಒಂದೊಂದು ಅವಯವವನ್ನೇ ನೋಡುತ್ತಾರೆ. ಸಂಪೂರ್ಣ ನೋಡುವುದಿಲ್ಲವೆನ್ನುವ ಅಭಿಪ್ರಾಯದಿಂದ ಹೇಳುತ್ತಾರೆ—

ಮೂ ॥ ಪಪ್ರುರ್ನಿತಾಂತಂ ಸರಸಾಕ್ಷಿಭೃಂಗೈ
ರ್ನರಾನನಾಬ್ಜಂ ಪುರುಷೋತ್ತಮಸ್ಯ ।
ವಿದೇಹನಾರೀನರವರ್ಯಸಂಘಾ
ಯಥಾ ಮಹಾಪೌರುಷಿಕಾಸ್ತದಂಘ್ರಿಂ ॥೧೩॥

ಅ ॥ ವಿದೇಹಪಟ್ಟಣದಲ್ಲಿರತಕ್ಕ ಸ್ತ್ರೀ–ಮನುಷ್ಯರು ಇವರಲ್ಲಿ ಶ್ರೇಷ್ಠರಾದವರ ಸಮೂಹಗಳು, ಸ್ನೇಹಸಹಿತಗಳಾದ ಅಥವಾ ಬಾಹ್ಯಾರ್ಥವಿಷಯಕವಾದ ಮನಸ್ಸಿನ ವಿಕಾರೋತ್ಕರ್ಷವೇ ರಸವು. ಅದರಿಂದಕೂಡಿರುವ ನಯನಗಳೆನ್ನುವ ಭ್ರಮರಗಳಿಂದ ಪುರುಷೋತ್ತಮನಾದ ಶ್ರೀ ರಾಮನ ಉತ್ಕೃಷ್ಟವಾದ ಮುಖವೆನ್ನುವ ಕಮಲವನ್ನು, ಮಹಾಪುರುಷನಾದ ಶ್ರೀ ನಾರಾಯಣನ ಸಂಬಂಧಿಯರಾದ ಶುಕ-ನಾರದಾದಿಗಳು ಶ್ರೀ ಹರಿಯ ಚರಣವನ್ನೆಂಬಂತೆ ಅತ್ಯಂತವಾಗಿ ಆದರಪೂರ್ವಕವಾಗಿ ಕಂಡರು.

**ವಿಶೇಷಾಂಶ**— (1) ಮಹಾಪುರುಷನಾದ ಶ್ರೀ ಹರಿಯ ಸಂಬಂಧಿಯರು ಶುಕ-ನಾರದಾದಿಗಳು. ಪ್ರಜೆಗಳಾದರೂ ಅಥವ ಭಕ್ತರಾದುದರಿಂದ ಕೇವಲ ಸೌಂದರ್ಯವನ್ನು ನೋಡುವುದರಲ್ಲಿಯೇ ಲೋಭವಿದ್ದಪ್ರಯುಕ್ತ ಮುಖಾರವಿಂದವನ್ನೇ ನೋಡಿದರು. ಶುಕವೊದಲಾದವರಾದರೂ ಪರಮಭಾಗವತರಾದಪ್ರಯುಕ್ತ ನಿರಂತರದಲ್ಲಿಯೂ ಶ್ರೀಹರಿಯ ಪೂಜೆಯಲ್ಲಿಯೇ ಆಸಕ್ತರಾದಪ್ರಯುಕ್ತ ಪಾದವನ್ನೇ ಅನೇಕಬಾರಿ ನೋಡುತ್ತಾ ಇರುತ್ತಾರೆ ॥೧೩॥

ಮೂ ॥ ತದಾ (ಥಾ) ವಿದೇಹಃ ಪ್ರತಿಲಭ್ಯ ರಾಮಂ
ಸಹಸ್ರನೇತ್ರಾವರಜಂ ಗವಿಷ್ಠಂ ॥
ಸಮರ್ಚಯಾಮಾಸ ಸಹಾನುಜಂ ತ-
ನ್ಮಹಿಂ ಚ ಸಾಕ್ಷಾಜ್ಜ್ವಲನಪ್ರಕಾಶಂ ॥೧೪॥

ಅ ॥ ಹಾಗೆಯೇ ರಾಮನು ಪಟ್ಟಣಕ್ಕೆ ಪ್ರವೇಶವಾದುವ ಕಾಲದಲ್ಲಿ ಜನಕರಾಜನ ತಮ್ಮನಾದ ಲಕ್ಷ್ಮಣನಿಂದ ಕೂಡಿ ಭೂಮಿಯಲ್ಲಿರತಕ್ಕ, ಇಂದ್ರನ ತಮ್ಮನಾದ ವಾಮನರೂಪಿಯಾದ ಶ್ರೀ ರಾಮನನ್ನು ಹೊಂದಿ ಕೇವಲ ಅಗ್ನಿಯಂತೆ ಪ್ರಕಾಶವುಳ್ಳ ಜೊತೆಗೆ ಬಂದ ಆ ವಿಶ್ವಾಮಿತ್ರನನ್ನು ಭಕ್ತಿಶ್ರದ್ಧಾಪೂರ್ವಕವಾಗಿ ಪೂಜಿಸಿದನು.

**ವಿಶೇಷಾಂಶ** — ಹೇಗೆ ಇಂದ್ರನು ಅಣ್ಣನಾದಾಗ್ಯೂ ಗುಣಗಳಿಂದ ಅಧಿಕನಾದಪ್ರಯುಕ್ತ ವಾಮನನನ್ನು ಪೂಜಿಸುತ್ತಿದ್ದನೋ. ಹಾಗೆಯೇ ವೃದ್ಧನಾದಾಗ್ಯೂ ಜನಕರಾಜನು ಬಾಲಕನಾದ ಶ್ರೀ ರಾಮನನ್ನು ಪೂಜಿಸುತ್ತಿದ್ದನು ಎಂದು ಸೂಚಿಸುವುದಕ್ಕಾಗಿ 'ಸಹಸ್ರನೇತ್ರಾವರಜಂ' ಎಂದು ಹೇಳಿದ್ದು ॥೧೪॥

ಮೂ ॥ ಮೇನೇ ಚ ಜಾಮಾತರಮಾತ್ಮಕನ್ಯಾ
ಗುಣೋಚಿತಂ ರೂಪಮವಾಪ್ತಾರಂ ॥
ಉವಾಚ ಚಾಸ್ಮೈ ಋಷಿರುಗ್ರತೇಜಾಃ
ಕುರುಷ್ವ ಜಾಮಾತರಮೇನಮಾಶ್ವಿತಿ ॥೧೫॥

ಅ ॥ (ಜನಕರಾಜನು) ತನ್ನ ಕನ್ನಿಕೆಯ ಗುಣಗಳಿಗೆ ಯೋಗ್ಯನಾದ ರೂಪದಿಂದ ಹೊಸ ಅವತಾರವುಳ್ಳ ಅಂದರೆ ಅಸದೃಶರೂಪವುಳ್ಳ ರಾಮನನ್ನು ಅಳಿಯನನ್ನಾಗಿಯೇ ತಿಳಿದು ಕೊಂಡನು. ಕ್ರೂರವಾದ ತೇಜಸ್ಸುಳ್ಳ ವಿಶ್ವಾಮಿತ್ರ ಋಷಿಯು ಈ ಶ್ರೀ ರಾಮನನ್ನು ಶೀಘ್ರದಲ್ಲಿ ಅಳಿಯನನ್ನಾಗಿ ಮಾಡು, ಎಂದು ಜನಕರಾಜನನ್ನು ಕುರಿತು ಹೇಳಿದನು ॥೧೫॥

ಮೂ ॥ ಸ ಆಹ ಚೈನಂ ಪರಮಂ ವಚಸ್ತೇ
ಕರೋಮಿ ನಾತ್ರಾಸ್ತಿ ವಿಚಾರಣಾ ಮೇ ॥
ಶೃಣುಷ್ವ ಮೇಽಥಾಪಿ ಯಥಾ ಪ್ರತಿಜ್ಞಾ
ಸುತಾಪ್ರದಾನಾಯ ಕೃತಾ ಪುರಸ್ತಾತ್ ॥೧೬॥

ಅ ॥ ಆ ಜನಕರಾಜನು ವಿಶ್ವಾಮಿತ್ರನನ್ನು ಕುರಿತು ಹೇಳಿದನು – ನಿನ್ನ ಉತ್ಕೃಷ್ಟವಾದ ಮಾತನ್ನು ಪೂರೈಸುತ್ತೇನೆ. ಶ್ರೀ ರಾಮನಿಗೋಸ್ಕರ ಕನ್ನಿಕೆಯನ್ನು ಕೊಡುವವಿಷಯದಲ್ಲಿ ನನಗೆ ಬೇರೆ ವಿಚಾರವು ಇಲ್ಲ. ಹೀಗಾದಾಗ್ಯೂ ಪೂರ್ವದಲ್ಲಿಯೇ ನನ್ನಿಂದ ಮಗಳನ್ನು ಕೊಡುವುದಕ್ಕಾಗಿ ಎಂತಹ ಪ್ರತಿಜ್ಞೆಯು ಮಾಡಲ್ಪಟ್ಟದೋ ಅದನ್ನು ಕೇಳು ॥೧೬॥

ಮೂ ॥ ತಪೋ ಮಯಾ ಚೀರ್ಣಮುಮಾಪತೇಃ ಪುರಾ
ವರಾಯುಧಾವಾಪ್ತಿಧೃತೇನ ಚೇತಸಾ ॥
ಸ ಮೇ ದದೌ ದಿವ್ಯಮಿದಂ ಧನುಸ್ತದಾ
ಕಥಂಚನಾಚಾಲ್ಯಮನ್ಯೈಃ ಪಿನಾಕಿನಂ ॥೧೭॥

ಅ ॥ ಉತ್ಕೃಷ್ಟವಾದ ಆಯುಧದ ಪ್ರಾಪ್ತಿಯಲ್ಲಿ ಧರಿಸಲ್ಪಟ್ಟ ಅಂತಃಕರಣದಿಂದ ಮೊದಲೇ ನನ್ನಿಂದ ಪಾರ್ವತೀಪತಿಯಾದ ಶ್ರೀ ರುದ್ರನ ತಪಸ್ಸು ಮಾಡಲ್ಪಟ್ಟಿದೆ. ಆ ರುದ್ರನು ತನ್ನನ್ನು ಹೊರತು ಯಾರಿಂದಲೂ ಯಾವ ಪ್ರಕಾರದಿಂದಲೂ ಹಂದಾಡಿಸಿಕೊಳ್ಳಲ್ಪಡದಿರುವ ಈ ದಿವ್ಯ ಧನುಸ್ಸನ್ನು ನನಗೆ ಆಗಲೇ ಕೊಟ್ಟಿರುವನು (ಎಂದು ಜನಕರಾಜನು ಹೇಳಿದನು) ॥೧೭॥

ಮೂ ॥ ನ ದೇವದೈತ್ಯೋರಗಗಂಧರ್ವನಾಯಕಾ
ಅಲಂ ಧನುಶ್ಚಾಲಯಿತುಂ ಸವಾಸವಾಃ ॥
ಕುತೋ ನರಾಸ್ತದ್ವರತೋ ಹಿ ಕಿಂಕರಾಃ
ಸಹಾಸಸ್ಯೈವಾತ್ರ ಕೃಷಂತಿ ಕೃಚ್ಛ್ರತಃ ॥೧೮॥

ಅ ॥ ದೇವೇಂದ್ರನಿಂದ ಸಹಿತರಾದ, ದೇವತೆಗಳು, ದೈತ್ಯರು, ಸರ್ಪರು, ಗಂಧರ್ವರೂ ಧನುಸ್ಸನ್ನು ಹಂದಾಡಿಸಲಿಕ್ಕೆ ಸಮರ್ಥರಲ್ಲ. ಮನುಷ್ಯರು ಯಾವುದರಿಂದ ಸಮರ್ಥರಾದಾರು? (ಅಂದರೆ ಸಮರ್ಥರಲ್ಲವೇ ಅಲ್ಲ.) (ನಿನ್ನ ಭೃತ್ಯರು ಹೇಗೆ ಹಂದಾಡಿಸುತ್ತಾರೆ ಅಂದರೆ) ಭೃತ್ಯರು (ಭಂಡಿಯಿಂದ ಕೂಡಿಯೇ ಧನಸ್ಸನ್ನು ಸೆಳೆಯಲಿ, ಭಂಡಿಯಾದರೂ ಧನುಸ್ಸಿನ ಭಾರದಿಂದ ಪುಡಿಯಾಗದಿರಲಿ ಎಂದು) ಆ ರುದ್ರನ ವರದಿಂದಲೇ ಭಂಡಿಯಿಂದ ಕೂಡಿಯೇ ನನ್ನ ಮನೆಯಲ್ಲಿ ಪ್ರಯಾಸದಿಂದ ಸೆಳೆಯುತ್ತಾರೆ. ವರದಿಂದ ಸಾಧ್ಯವಾಗದಿರುವುದು ಯಾವುದೂ ಇಲ್ಲವೆನ್ನುವುದು ಪ್ರಸಿದ್ಧವು ॥೧೮॥

ಮೂ ॥ ಅಥಾರ್ಯಮೇತದ್ಧನುರಾಪ್ಯ ಶಂಕರಾ
ದಹಂ ನೃಣಾಂ ವೀರ್ಯಪರೀಕ್ಷಣೇ ಧೃತಃ ॥
ಸುತಾರ್ಥಮೇತಾಂ ಚಕರ ಪ್ರತಿಜ್ಞಾಂ
ದದಾಮಿ ಕನ್ಯಾಂ ಯ ಇದಂ ಹಿ ಪೂರಯೇತ್ ॥೧೯॥

ಅ ॥ ನಾನು ಯಾರಿಂದಲೂ ಧರಿಸಲಿಕ್ಕೆ ಅಸಾಧ್ಯವಾದ ಈ ಧನುಸ್ಸನ್ನು ರುದ್ರದೇವರಿಂದ ಹೊಂದಿ ಮನುಷ್ಯರ ವೀರ್ಯವನ್ನು ಪರೀಕ್ಷಿಸುವ ವಿಷಯದಲ್ಲಿ ಧರಿಸಿರುತ್ತೇನೆ. (ಶ್ರೀ ರಾಮನ ವೀರ್ಯವನ್ನು ಪರೀಕ್ಷಿಸಲಿಕ್ಕೆ ಅಲ್ಲ.) (ಇಟ್ಟಿರುತ್ತೇನೆ.) ಯಾವ ಪುರುಷನು ಈ ಧನುಸ್ಸನ್ನು ಸಜ್ಜೀಕರಿಸ್ಯಾನೋ (ಆತನಿಗೋಸ್ಕರ) ಮಗಳನ್ನು ಕೊಡುತ್ತೇನೆ. ಹೀಗೆ ಮಗಳನ್ನು ಕೊಡುವುದಕ್ಕಾಗಿ ಈ ಪ್ರತಿಜ್ಞೆಯನ್ನು ನಾನು ಮಾಡಿರುವೆನು ॥೧೯॥

ಮೂ ॥ ಇತೀರಿತಾಂ ಮೇ ಗಿರಮಭ್ಯವೇತ್ಯ
ದಿತೇಃ ಸುತಾ ದಾನವಯಕ್ಷರಾಕ್ಷಸಾಃ ॥
ಸಮೇತ್ಯ ಭೂಪಾಶ್ಚ ಸಮೀಪಮಾಶು
ಪ್ರಗೃಹ್ಯ ತಚ್ಚಾಲಯಿತುಂ ನ ಶೇಕುಃ ॥೨೦॥

ಅ ॥ ಈ ಪ್ರಕಾರ ಹೇಳಲ್ಪಟ್ಟ ನನ್ನ ಪ್ರತಿಜ್ಞಾರೂಪವಾದ ಮಾತನ್ನು ಚೆನ್ನಾಗಿ ಧ್ವನಿಗೈಸಿ ತಿಳಿದು ದಿತಿಯ ಪುತ್ರರಾದ ದಾನವರೂ, ಯಕ್ಷರೂ, ರಾಕ್ಷಸರೂ, ರಾಜರೂ ಕೂಡ ಸಮೀಪಕ್ಕೆ ಬಂದು ಶೀಘ್ರದಲ್ಲಿ ಧನುಸ್ಸನ್ನು ಹಿಡಿದು ಹಿಂದಾಡಿಸಲಿಕ್ಕೆ ಸಮರ್ಥರಾಗಲಿಲ್ಲ.

ಮೂ ॥ ಸಂಸಿನ್ನಗಾತ್ರಾಃ ಪರಿವೃತ್ತನೇತ್ರಾ
ದಶಾಸನಾದ್ಯಾಃ ಪತಿತಾ ವಿಮೂರ್ಚ್ಛಿತಾಃ ॥
ತಥಾಪಿ ಮಾಂ ಧರ್ಷಯಿತುಂ ನ ಶೇಕುಃ
ಸುತಾಕೃತೇ ತೇ ವಚನಾತ್ಸ್ವಯಂಭುವಃ ॥೨೧॥

ಅ ॥ ಸ್ವೇದಯುಕ್ತಗಳಾದ ಶರೀರಗಳುಳ್ಳ ಪರಿಭ್ರಮಣಯುಕ್ತಗಳಾದ ಕಣ್ಣುಗಳುಳ್ಳ ರಾವಣನೇ ಮೊದಲಾದವರು ಪತಿತರಾಗಿ ವಿಶೇಷವಾಗಿ ಮೂರ್ಛಾಯುಕ್ತರಾಗಿರುತ್ತಾರೆ. ಪತಿತರಾದಾಗ್ಯೂ ಆ ರಾವಣಾದಿಗಳು ಮಗಳಿಗೋಸ್ಕರ ಬ್ರಹ್ಮನ ವರರೂಪವಾದ ವಾಕ್ಯದಿಂದ ನನ್ನನ್ನು ನಿಗ್ರಹಿಸಲಿಕ್ಕೆ ಸಮರ್ಥರಾಗುವುದಿಲ್ಲ ॥೨೧॥

ಬ್ರಹ್ಮನ ವಚನವನ್ನೇ ವಿವರಿಸುತ್ತಾರೆ—

ಮೂ ॥ ಪುರಾ ಹಿ ಮೇऽದಾತ್ತ್ರಿಭುರಬ್ಜಜೋ ವರಂ
ಪ್ರಸಾದಿತೋ ಮೇ ತಪಸಾ ಕಥಂಚನ ॥
ಬಲಾನ್ನ ತೇ ಕಶ್ಚಿದುಪೈತಿ ಕನ್ಯಕಾಂ
ತದಿಚ್ಛುಭಿಸ್ತೇನ ಚ ಧರ್ಷಣೇತಿ ॥೨೨॥

ಅ ॥ ನನ್ನ ತಪಸ್ಸಿನಿಂದ ಪ್ರಯಾಸದಿಂದ ಪ್ರಸನ್ನೀಕೃತನಾದ, ಸರ್ವ ಸಮರ್ಥನಾದ ಬ್ರಹ್ಮನು (ಯಾವನೊಬ್ಬ ಪುರುಷನೂ ಬಲತ್ಕಾರದಿಂದ ನಿನ್ನ ಮಗಳನ್ನು ಹೊಂದಲಾರನು,

೨ ಕನ್ಯಾರ್ಥಿಗಳಿಂದ ನಿನಗೆ ನಿಗ್ರಹವು ಆಗಲಾರದು ಈ ಪ್ರಕಾರವಾಗಿ ನನಗೆ ಎರಡು ವರವನ್ನು ಮೊದಲೇ ಕೊಟ್ಟಿರುವನು.

**ವಿಶೇಷಾಂಶ** — (1) ಬಲಾತ್ಕಾರದಿಂದ ಕನ್ನಿಕೆಯನ್ನು ಅಪಹರಿಸಿದರೂ ಕಾರ್ಯ ಹಾನಿಯು. ತಂದೆಗೆ ನಿರ್ಬಂಧನಾಡಿದರೂ ಪಿತೃಸ್ನೇಹದಿಂದ ಕನ್ನಿಕೆಯು ತಾನಾಗಿಯೇ ಹೋಗು ವಳು ಹೀಗೆ ಎರಡು ಪ್ರಕಾರದಿಂದಲೂ ಕಾರ್ಯಹಾನಿಯು. ಆದಕಾರಣ ಎರಡು ವರಗಳೂ ಅವಶ್ಯಕವೇ ॥೨೨॥

**ಮೂ** ॥ **ತತಸ್ತು ತೇ ನಷ್ಟಮುದಾ ಇತೋ ಗತಾಃ**
**ಸಮಸ್ತಶೋ ಹ್ಯಸ್ತನ ಏವ ಪಾರ್ಥಿವಾಃ ॥**
**ತತೋ ನ ವಾಮಾಯಂ ಪರಿಪೂರ್ಣಮಾನಸಂ**
**ನೃಣೋತು ಕನ್ಯಾಮಯಮೇವ ಮೇಽರ್ಥಿತಃ ॥೨೩॥**

ಅ ॥ ಬಿದ್ದ ಮೇಲೆ ಪರಿಹೃತವಾದ ಗರ್ವವುಳ್ಳ ಆ ಎಲ್ಲಾ ರಾಜರೂ ಸ್ವಯಂವರದೆಶೆ ಯಿಂದ ನಿನ್ನೆದಿವಸದಲ್ಲಿಯೇ ಹೋಗಿರುವರು. (ಯಾವ ಕಾರಣದಿಂದ ಇಂತಹ ನನ್ನ ಪ್ರತಿಜ್ಞೆಯು ಇದೆಯೋ) ಆ ಕಾರಣದಿಂದ ಈ ರಾಮನು ನನ್ನ ಮನಸ್ಸಂಬಂಧಿಯಾದ ಪ್ರಯೋಜನವನ್ನು (ಅಂದರೆ ಮನೋಽಭೀಷ್ಟವನ್ನು) ಪೂರ್ಣೀಕರಿಸಿ, ಕನ್ನಿಕೆಯನ್ನು ಸ್ವೀಕರಿಸಲಿ. (ಅಂದರೆ) ಕನ್ಯಾವರಣಕ್ಕೆ ಕಾಲವು ಪ್ರಾಪ್ತವಾಗಿದೆ). ನನ್ನಿಂದ ಈ ರಾಮನೇ ಪ್ರಾರ್ಥಿತನಾಗಿರುತ್ತಾನೆ. (ಅಂದರೆ ಸೀತೆಯನ್ನು ಕೊಡಲಿಕ್ಕೆ ಇಷ್ಟನಾಗಿರುತ್ತಾನೆ. ) ॥೨೩॥

**ಮೂ** ॥ **ತಥೇತಿ ಚೋಕ್ತೋ ಮುನಿನಾ ಸ ಕಿಂಕರೈ-**
**ರನಂತಭೋಗೋಪಮಮಾಶ್ವಥಾನಯತ್ ॥**
**ಸವಿಕ್ಷ್ಯ ತದಾ ಸುಕರೇಣ ರಾಘವಃ**
**ಸಲೀಲಮುದ್ಧೃತ್ಯ ಹಸನ್ನಪೂರಯತ್ ॥೨೪॥**

ಅ ॥ ಹಾಗೆಯೇ ಆಗಲಿ, (ನೀನು ಹೇಳಿದ್ದನ್ನು ಮಾಡುವನು) ಎಂದು ವಿಶ್ವಾಮಿತ್ರ ನಿಂದಲೂ ಕೂಡ ಹೇಳಿಸಿಕೊಳ್ಳಲ್ಪಟ್ಟ ಆ ಜನಕರಾಜನು ಶೀಘ್ರದಲ್ಲಿ ಶೇಷನ ಶರೀರದಿಂದ ಸದೃಶ ವಾದ ಧನುಸ್ಸನ್ನು ತರಿಸಿದನು.ರಾಮನು ಆ ಧನುಸ್ಸನ್ನು ನೋಡಿ ಎಡಕೈಯಿಂದ ಕ್ರೀಡೆ ಹೇಗೆ ಆದಿತೋ ಹಾಗೆ ಎತ್ತಿಕೊಂಡು ನಗಾಡುತ್ತಾ ಪೂರ್ಣೀಕರಿಸಿದನು ॥೨೪॥

**ಮೂ** ॥ **ವಿಕೃಷ್ಯಮಾಣಂ ತದನಂತರಾಧಸಾ**
**ಪರೇಣ ಸಿಸ್ಮಿತಮಬಲೇನ ಲೀಲಯಾ ॥**
**ಅಭಜ್ಯತಾಸಹ್ಯಮಮುಷ್ಯ ತದ್ಬಲಂ**
**ಪ್ರಸೋಢುಮೀಶಂ ಕುತ ಏವ ತದ್ಭವೇತ್ ॥೨೫॥**

ಅ ॥ ಸಂಕಲ್ಪಮಾತ್ರದಿಂದಲೇ ಅನಂತಕಾರ್ಯ ಸಿದ್ಧಿಯುಳ್ಳ, ಅಪರಿಮಿತ ಸಾಮರ್ಥ್ಯ ವುಳ್ಳ ಸರ್ವೋತ್ತಮನಾದ ಶ್ರೀ ರಾಮನಿಂದ ಕ್ರೀಡೆಯಿಂದ ಸೆಳೆಯಲ್ಪಡತಕ್ಕ ಸಹಿಸಲಶಕ್ಯವಾದ ಧನುಸ್ಸು ಭಗ್ನವಾಯಿತು. ಈ ಶ್ರೀ ರಾಮನ ಪ್ರಸಿದ್ಧವಾದ ಬಲವನ್ನು ಸಹಿಸಲಿಕ್ಕೆ ಸಮರ್ಥ ವಾದುದು ಯಾವ ಕಾರಣದಿಂದ ಆಗುವುದು. (ಸರ್ವಥಾ ಆಗಲಾರದು) ॥೨೫॥

ಮೂ ॥ ಸ ಮಧ್ಯತಸ್ತತ್ರವಿಭಜ್ಯ ಲೀಲಯಾ
ಯಥೇಕ್ಷುದಂಡಂ ಶತಮನ್ಯುಕುಂಜರಃ ॥
ವಿಲೋಕಯನ್ವಕ್ತ್ರಮೃಷೇರವಸ್ಥಿತಃ
ಸಲಕ್ಷ್ಮಣಃ ಪೂರ್ಣತನುರ್ಯಥಾ ಶಶೀ ॥೨೬॥

ಅ ॥ ಶ್ರೀರಾಮನು ಆ ಧನುಸ್ಸನ್ನು ದೇವೇಂದ್ರನ ಐರಾವತಾಖ್ಯ ಆನೆಯು ಕಬ್ಬಿನ ಕೋಲನ್ನೆಂಬಂತೆ ಕ್ರೀಡೆಯಿಂದ ಮಧ್ಯಪ್ರದೇಶದಿಂದಲೇ ಮುರಿದು ವಿಶ್ವಾಮಿತ್ರನ ಮುಖವನ್ನು ನೋಡುತ್ತಾ ಷೋಡಶಕಲಾಪರಿಪೂರ್ಣವಾದ ಶರೀರವುಳ್ಳ ಚಂದ್ರನಂತೆ ಲಕ್ಷ್ಮಣನಿಂದ ಕೂಡಿದವನಾಗಿ ನಿಂತನು ॥೨೬॥

ಈಗ ಶ್ರೀರಾಮನು ಯಾವ ಸೀತಾದೇವಿಗೆ ತನ್ನ ಲಾವಣ್ಯವನ್ನು ತೋರಿಸುವುದಕ್ಕಾಗಿ ಪ್ರಕಟೀಕರಿಸಿರುವನೋ ಅಂತಹ ಸೀತಾದೇವಿಯ ಸೌಂದರ್ಯದರ್ಶನ ಪ್ರಕಾಶವನ್ನು ವರ್ಣಿಸುತ್ತಾ ಶೃಂಗಾರರಸಕ್ಕೆ ಮುಖ್ಯಾಲಂಬನಭೂತನಾದ ರಾಮನನ್ನು ವರ್ಣಿಸುತ್ತಾರೆ—

ಮೂ ॥ ತನುಬ್ಜನೇತ್ರಂ ಪೃಥುತುಂಗವಕ್ಷಸಂ
ಶ್ಯಾಮಾವದಾತಂ ಚಲಕುಂಡಲೋಜ್ವಲಂ ॥
ಶಶಕ್ಷತೋತ್ಥೋಪಮಚಂದನೋಕ್ಷಿತಂ
ದದರ್ಶ ವಿದ್ಯುದ್ವಸನಂ ನೃಪಾತ್ಮಜಾ ॥೨೭॥

ಅ ॥ ಜನಕರಾಜನ ಮಗಳಾದ ಸೀತಾದೇವಿಯು ವಿಶಾಲವಾದ ಎತ್ತರವಾದ ವಕ್ಷಸ್ಥಳವುಳ್ಳ, ನೀಲವರ್ಣನಾದಾಗ್ಯೂ (ಸೂರ್ಯಮಂಡಲದಂತೆಯೂ ಇಂದ್ರನೀಲಮಣಿಯಂತೆಯೂ ಶುಕ್ಲಭಾಸ್ವರತೇಜೋವಿಶೇಷದಿಂದ ಕೂಡಿರುವ ಪ್ರಯುಕ್ತ ಶುಭ್ರನಾದವನು ಚಂಚಲಗಳಾದ ಕುಂಡಲಗಳಿಂದ ಪ್ರಕಾಶಿಸುತ್ತಿರುವ, ಮೊಲದ ಶಸ್ತ್ರಾದಿಗಳ ಛೇದದಿಂದ ಹುಟ್ಟಿದ ರಕ್ತವೇ ಸದೃಶವಾಗಿವುಳ್ಳ ಚಂದನದಿಂದ ಸೇಚಿಸಿಕೊಳ್ಳಲ್ಪಟ್ಟ, (ಅಲಂಕೃತನಾದ) ಮಿಂಚಿನಂತೆ ವಸ್ತ್ರವುಳ್ಳ, ಕಮಲದಳದಂತೆ ಕಣ್ಣುಗಳುಳ್ಳ, ಹಿಂದೆ ಹೇಳಿದ ಅನಂತ ಚಂದ್ರರಿಂದ ಅಧಿಕವಾದ ಕಾಂತಿಯಿಂದ ಭರಿತಗಳಾದ ಸರ್ವಾಂಗಗಳುಳ್ಳ, ಮನೋಹರವಾದ ಮುಖಕಮಲದಿಂದ ಶೋಭಿಸಿಕೊಂಡಿರುವ ಶ್ರೀ ರಾಮನನ್ನು ಕಂಡಳು ॥೨೭॥

ಈಗ ಪುಷ್ಪಮಾಲಿಕೆಯನ್ನು ಸಮರ್ಪಿಸುವ ವ್ಯವಸದಿಂದ, ಶೃಂಗಾರರಸಕ್ಕೆ ಎರಡನೇ ಆಲಂಬನಭೂತಳಾದ ಸೀತಾದೇವಿಯನ್ನು ವರ್ಣಿಸುತ್ತಾರೆ—

ಮೂ ॥ ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾ–
ಮಮ್ಲಾನಪದ್ಮಾಂ ಜಲಜಾಯತಾಕ್ಷೀ ॥
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ
ತದಂಸ ಆಸಜ್ಯ ಚ ಪಾರ್ಶ್ವತೋಽಭವತ್ ॥೨೮॥

ಅ ॥ ಆ ಮೇಲೆ ಕಮಲದಳದಂತೆ ವಿಶಾಲಗಳಾದ ಕಣ್ಣುಗಳುಳ್ಳ ಸೀತಾದೇವಿಯು ಒಣಗದೆ ಇರತಕ್ಕ (ಅಂದರೆ ನೂತನಗಳಾದ) ಕಮಲಗಳುಳ್ಳ ಮಾಲಿಕೆಯನ್ನು ಕೈಗಳಿಂದ

ಹಿಡಿದುಕೊಂಡು ಮನೋಹರಗಳಾದ ಪಾದವಿಕ್ಷೇಪಗಳಿಂದ ಮೆಲ್ಲಗೆ (ಶ್ರೀ ರಾಮನನ್ನು) ಹೊಂದಿ ಆ ಮಾಲಿಕೆಯನ್ನು ಶ್ರೀ ರಾಮನು ಭುಜಶಿರಸ್ಸಿನಲ್ಲಿ ಇಟ್ಟು ಶ್ರೀ ರಾಮನ ಎಡಭಾಗದಲ್ಲಿ ಕೂತುಕೊಂಡಳು ॥೨೮॥

ಮೂ ॥ ತತಃ ಪ್ರಮೋದೋ ನಿತರಾಂ ಜನಾನಾಂ
ವಿದೇಹಪುರ್ಯಾಮಭವತ್ಸಮಂತಾತ್ ॥
ರಾಮಂ ಸಮಾಲೋಕ್ಯ ನರೇಂದ್ರ ಪುತ್ರ್ಯಾ
ಸಮೇತಮಾನಂದನಿಧಿಂ ಪರೇಶಂ ॥೨೯॥

ಅ ॥ ಆಮೇಲೆ ಜನಕರಾಜನ ಪಟ್ಟಣದಲ್ಲಿ, ಜನಕರಾಜನ ಮಗಳಾದ ಸೀತಾದೇವಿಯಿಂದ ಕೂಡಿರುವ ಆನಂದಕ್ಕೆ ಆಶ್ರಯಭೂತನಾದ, ಬ್ರಹ್ಮಾದಿಗಳಿಗೂ ಸ್ವಾಮಿಯಾದ ಶ್ರೀರಾಮನನ್ನು ನೋಡಿ ಇರತಕ್ಕ ಜನರಿಗೆ ಸುತ್ತಮುತ್ತಲೂ ಅತ್ಯಂತವಾಗಿ ಸಂತೋಷವು ಉಂಟಾಯಿತು॥೨೯॥

ಮೂ ॥ ಲಕ್ಷ್ಮ್ಯಾ ಸಮೇತೇ ಪ್ರಕಟಂ ರಮೇಶೇ
ಸಂಪ್ರೇಷಯಾಮಾಸ ತದಾಶು ಪತ್ರೀ ॥
ವಿದೇಹರಾಜೋ ದಶದಿಗ್ರಥಾಯ
ಸ ತಂ ನಿಶಮ್ಯಾಶು ತುತೋಷ ಭೂಮಿಪಃ ॥೩೦॥

ಅ ॥ ಲಕ್ಷ್ಮೀಪತಿಯಾದ ಶ್ರೀ ರಾಮನು ಎಲ್ಲಾ ಲೋಕಗಳಿಗೂ ಪ್ರಕಟವು ಹೇಗೆ ಆದೀತೋ ಹಾಗೆ ಲಕ್ಷ್ಮೀರೂಪಳಾದ ಸೀತಾದೇವಿಯಿಂದ ಕೂಡುತ್ತಿರಲು ಆಗ ಶ್ರೀ ರಾಮನ ತಂದೆಯಾದ ಹತ್ತು ದಿಕ್ಕುಗಳಲ್ಲಿಯೂ ರಥಗಳುಳ್ಳ ದಶರಥರಾಜನಿಗೋಸ್ಕರ ಜನಕರಾಜನು ಶೀಘ್ರದಲ್ಲಿ (ದೂತನನ್ನು) ಕಳುಹಿಸಿಕೊಟ್ಟನು. ಆ ದಶರಥರಾಜನು ಲಕ್ಷ್ಮೀರೂಪಳಾದ ಸೀತಾ ದೇವಿಯೂ ಸಾಕ್ಷಾತ್ ಶ್ರೀ ನಾರಾಯಣರೂಪನಾದ ಶ್ರೀ ರಾಮನೂ ಇವರ ಸಮಾಗಮನವನ್ನು ಶೀಘ್ರದಲ್ಲಿ ತಿಳಿದು ಸಂತೋಷಪಟ್ಟನು ॥೩೦॥

ಮೂ ॥ ಅಥಾತ್ಮಜಾಭ್ಯಾಂ ಸಹಿತಃ ಸಭಾರ್ಯೋ
ಯಯೌ ಗಜಸ್ಯಂದನಪತ್ತಿಯುಕ್ತಯಾ ॥
ಸ್ವಸೇನಯಾಗ್ರೇ ಪ್ರಣಿಧಾಯ ಧಾತೃಜಂ
ವಸಿಷ್ಠಮಾಶ್ವೇವ ಸ ಯತ್ರ ಮೈಥಿಲಃ ॥೩೧॥

ಅ ॥ ಆಮೇಲೆ ಭರತಶತ್ರುಘ್ನರಿಂದಲೂ, ಹೆಂಡರಿಂದಲೂ ಕೂಡಿಕೊಂಡು, ಆನೆಗಳೂ, ರಥಗಳೂ, ಕಾಲಾಳುಗಳೂ–ಇವುಗಳಿಂದ ಕೂಡಿದ ತನ್ನ ಸೈನ್ಯಸಮೇತನಾಗಿ ದಶರಥರಾಜನು ಅಲ್ಲಿಗೇನೇ ಶೀಘ್ರದಲ್ಲೇ ಹೋದನು ॥೩೧॥

ಮೂ ॥ ಸ ಮೈಥಿಲೇನಾತಿತರಾಂ ಸಮರ್ಚಿತೋ
ವಿವಾಹಯಾಮಾಸ ಸುತಂ ಮುದಂಭರಃ ॥
ಪುರೋಹಿತೋ ಗಾಧಿಸುತಾನುಮೋದಿತೋ
ಜುಹಾವ ವಹ್ನಿಂ ವಿಧಿನಾ ವಸಿಷ್ಠಃ ॥೩೨॥

ಅ ॥ ಜನಕರಾಜನಿಂದ ಅತ್ಯಂತವಾಗಿ ಪೂಜಿಸಿಕೊಳ್ಳಲ್ಪಟ್ಟ ಸಂತೋಷವನ್ನು ಧರಿಸಿಕೊಂಡು ಇರುವ ಅಥವಾ ಸಂತೋಷವನ್ನು ಹೊಂದಿಸಿಕೊಡತಕ್ಕ ಆ ದಶರಥರಾಜನ ಮಗನಾದ ಶ್ರೀ ರಾಮನಿಗೆ ಮದುವೆ ಮಾಡಿಸಿದನು. ಗಾಧಿರಾಜನ ಮಗನಾದ ವಿಶ್ವಾಮಿತ್ರನಿಂದ ಸಮ್ಮತನಾದ ಪುರೋಹಿತ ವಸಿಷ್ಠಋಷಿಯು ವಿವಾಹಹೋಮ ವಿಧಿಯಿಂದ ಲಾಜಾದಿ ಹೋಮವನ್ನು ಮಾಡಿಸಿದನು. ಅಥವಾ ಅಗ್ನ್ಯಾಖ್ಯ ದೇವತೆಯನ್ನು ಸಂತೋಷೀಕರಿಸಿದನು ॥೩೨॥

ಮೂ ॥ ತದಾ ವಿಮಾನಾವಲಿಭಿರ್ನಿಭಸ್ತಲಂ
ದಿದೃಕ್ಷತಾಂ ಸಂಕುಲಮಾಸ ನಾಕಿನಾಂ ॥
ಸುರಾನಕಾ ದುಂದುಭಯೋ ವಿನೇದಿರೇ
ಜಗುಶ್ಚ ಗಂಧರ್ವವರಾಃ ಸಹಸ್ರಶಃ ॥೩೩॥

ಅ ॥ ವಿವಾಹಸಮಯದಲ್ಲಿ ನೋಡಲಿಕ್ಕೆ ಇಚ್ಛಿಸತಕ್ಕ ದೇವತೆಗಳ ವಿಮಾನಗಳ ಪಂಕ್ತಿಗಳಿಂದ ಆಕಾಶಪ್ರದೇಶವು ನಿಬಿಡವಾಯಿತು. ದೇವತೆಗಳ ಪಟಹಗಳೂ ದೇವಭೇರಿಗಳೂ ಶಬ್ದ ಮಾಡಿದುವು. ಸಾವಿರಾರು ಗಂಧರ್ವಶ್ರೇಷ್ಠರು ಅನೇಕಾವರ್ತಿ ಗಾನಮಾಡಿದರು ॥೩೩॥

ಮೂ ॥ ವಿಜಾನನ್ತಾನಾ ಜಗತಾಂ ಹಿ ಮಾತರಂ
ಪುರಾರ್ಥಿತುಂ ನಾಯಯುರತ್ರ ದೇವತಾಃ ॥
ತದಾ ತು ರಾಮಂ ರಮಯಾ ಯುತಂ ಪ್ರಭುಂ
ದಿದೃಕ್ಷವಸ್ತಶ್ಚಕ್ರುರಲಂ ನಭಸ್ತಲಂ ॥೩೪॥

ಅ ॥ ಯಾವ ಕಾರಣದಿಂದ ದೇವತೆಗಳು ಜಗತ್ತುಗಳಿಗೆ ತಾಯಿಯಾದ ಸೀತಾದೇವಿಯನ್ನು ವಿಶೇಷವಾಗಿ ತಿಳಿದಿರುವರೋ, ಆದಕಾರಣ ದೇವತೆಗಳ ಸ್ವಯಂವರ ವಿಘೋಷಣ ಕಾಲದಲ್ಲಿ ಸೀತಾದೇವಿಯನ್ನು ಬೇಡುವುದಕ್ಕಾಗಿ ಈ ಸ್ವಯಂವರವನ್ನು ಕುರಿತು ಬರಲಿಲ್ಲ. ವಿವಾಹಕಾಲದಲ್ಲಿ ವಿಶೇಷವಾಗಿ ಸರ್ವರಿಗೂ ದೃಷ್ಟಿಗೋಚರನಾಗಿ ಲಕ್ಷ್ಮೀದೇವಿಯಿಂದ ಕೂಡಿದ ಸರ್ವರಿಗೂ ಸ್ವಾಮಿಯಾದ ಶ್ರೀ ರಾಮನನ್ನು ನೋಡಲಿಚ್ಛಿಸಿದವರಾಗಿ ಆಕಾಶಪ್ರದೇಶವನ್ನು ಪೂರ್ಣವನ್ನಾಗಿ ಮಾಡಿದರು. ಅಥವಾ ಆಗಮನಸಮಯದಲ್ಲಿ ಅಲಂಕರಿಸಿದರು.

ವಿಶೇಷಾಂಶ— 'ಪುರಾ ನಾಯಯುಃ' ಎಂದು ಹೇಳಿದುದರಿಂದ ಮೊದಲು ಬರಲಿಲ್ಲ. ಈಗ ಸ್ವಯಂವರವನ್ನು ನೋಡುವುದಕ್ಕಾಗಿ ಬಂದಿರುವರು ಎಂದು ಸೂಚಿತವಾಯಿತು॥೩೪॥

ಮೂ ॥ ಯಥಾ ಪುರಾ ಸಾಗರಜಾ ಸ್ವಯಂವರೇ
ಸುಮಾನಸಾನಾಮಭವತ್ಸಮಾಗಮಃ ॥
ತಥಾ ಹ್ಯಭೂತ್ಸರ್ವದಿವೌಕಸಾಂ ತದಾ
ತಥಾ ಮುನೀನಾಂ ಸಹಭೂಭೃತಾಂ ಭುವಿ ॥೩೫॥

ಅ ॥ ಹೇಗೆ ಮೊದಲು ಸಮುದ್ರರಾಜನ ಮಗಳಾದ ಲಕ್ಷ್ಮೀದೇವಿಯ ಸ್ವಯಂವರದಲ್ಲಿ ದೇವತೆಗಳಿಗೆ ಸಮಾಗಮವು ಆಗಿದೆಯೋ, ಹಾಗೆಯೇ ಶ್ರೀರಾಮನಿಗೆ ವಿವಾಹವಾಗುವಕಾಲದಲ್ಲಿ ಎಲ್ಲಾ ದೇವತೆಗಳ ಸಮಾಗಮವು ಸ್ವರ್ಗದಲ್ಲಿ ಆಯಿತು. ಹಾಗೆಯೇ ಋಷಿಗಳಿಗೂ ರಾಜರಿಗೂ

ಏಕಕಾಲದಲ್ಲಿ ಭೂಲೋಕದಲ್ಲಿ ಸಮಾಗಮವಾಯಿತು ಅಥವಾ ಲಕ್ಷ್ಮಣಾದಿರೂಪಗಳಿಂದ ಅವತರಿಸಿರುವ ದೇವತೆಗಳಿಗೂ ರಾಜರಿಂದ ಸಹಿತರಾದ ವಸಿಷ್ಠ–ವಿಶ್ವಾಮಿತ್ರಾದಿ ಋಷಿಗಳಿಗೂ ಭೂಲೋಕದಲ್ಲಿ ಸಮಾಗಮವಾಯಿತು.

**ವಿಶೇಷಾಂಶ—** 'ಯಥಾ ಪುರಾ' ಎಂದು ಪ್ರಾಚೀನ ಲಕ್ಷ್ಮೀದೇವಿಯ ಸ್ವಯಂವರವನ್ನು ದೃಷ್ಟಾಂತೀಕರಿಸತಕ್ಕ ಶ್ರೀಮದಾಚಾರ್ಯರು ಅಲ್ಲಿಯೂ ಸ್ವಯಂವರವನ್ನು ನೋಡುವುದಕ್ಕಾಗಿಯೇ ಎರಡು ಕಡೆಗಳಲ್ಲಿಯೂ ಪಂಙ್ಕ್ತೀಕರಿಸಿಕೊಂಡು ದೇವತೆಗಳು ನಿಂತಿದ್ದಾರೆ. ಲಕ್ಷ್ಮೀದೇವಿಯನ್ನು ಅಪೇಕ್ಷಿಸಿಕೊಂಡು ಅಲ್ಲ, ಎಂದು ಸೂಚಿಸುತ್ತಾರೆ. ॥೩೫॥

ಮೂ ॥ ಪ್ರಗೃಹ್ಯ ಪಾಣಿಂ ಚ ನೃಪಾತ್ಮಜಾಯಾ
ರರಾಜ ರಾಜೀವಸನಾಸನೇತ್ರಃ ।
ಯಥಾ ಪುರಾ ಸಾಗರಜಾಸಮೇತಃ
ಸುರಾಸುರಾಣಾಮಮೃತಾಬ್ಧಿಮಂಥನೇ ॥೩೬॥

ಅ ॥ ಮೊದಲು ದೇವಾಸುರರಿಗೆ (ಅಮೃತ ಪ್ರಾಪ್ತಿಗಾಗಿ) ಕ್ಷೀರಸಮುದ್ರವನ್ನು ಮಥನ ಮಾಡುವ ಕಾಲದಲ್ಲಿ ಸಮುದ್ರರಾಜನ ಕನ್ನಿಕೆಯಾದ ಲಕ್ಷ್ಮೀದೇವಿಯಿಂದ ಕೂಡಿರುವ ಶ್ರೀ ನಾರಾಯಣನಂತೆ, ಕಮಲಸದೃಶವಾದ ಕಣ್ಣುಗಳುಳ್ಳ ಶ್ರೀ ರಾಮನು ಜನಕರಾಜನ ಮಗಳಾದ ಸೀತಾದೇವಿ ಕೈಯನ್ನು ಹಿಡಿದು (ಅಂದರೆ ವಿವಾಹಮಾಡಿಕೊಂಡು) ಶೋಭಿಸಿದನು. ॥೩೬॥

ಮೂ ॥ ಸ್ವಲಂಕೃತಾಸ್ತತ್ರ ವಿಶೇರುರಂಗನಾ
ವಿದೇಹರಾಜಸ್ಯ ಹಿ ಯಾಃ ಸ್ಥ (ಚ ಯಾ ಹಿ) ಯೋಷಿತಃ ॥
ಮುದಾ ಸಮೇತಂ ರಮಯಾ ರಮಾಪತಿಂ
ವಿಲೋಕ್ಯ ರಾಮಾಯ ದದೌ ಧನಂ ನೃಪಃ ॥೩೭॥

ಅ ॥ ವಿದೇಹರಾಜನಿಗೆ ಯಾವ ಸ್ತ್ರೀಯರು ಇದ್ದರೋ, ಆ ದಾವ ಚೆನ್ನಾಗಿ ಅಲಂಕೃತರಾದ ಸ್ತ್ರೀಯರು ಸಂಚರಿಸಿದರು ದಶರಥರಾಜನು ಸಂತೋಷದಿಂದ ಲಕ್ಷ್ಮೀಸ್ವರೂಪಳಾದ ಸೀತಾದೇವಿಯಿಂದ ಕೂಡಿರುವ ಲಕ್ಷ್ಮೀಪತಿಯಾದ ಶ್ರೀ ರಾಮನನ್ನು ನೋಡಿ ಶ್ರೀ ರಾಮನಿಗೋಸ್ಕರ ದ್ರವ್ಯವನ್ನು ಕೊಟ್ಟನು ॥೩೭॥

ಮೂ ॥ ಪ್ರಿಯಾಣಿ ವಸ್ತ್ರಾಣಿ ರಥಾನ್ಸಕುಂಜರಾನ್
ಪರಾರ್ಘ್ಯರತ್ನಾಖಿಲಸ್ಯ ಚೇಶಿತುಃ ।
ದದೌ ಚ ಕನ್ಯಾ ತ್ರಯಮುತ್ತಮಂ ಮುದಾ
ತದಾ ಸ ರಾಮಾನುಜೇಭ್ಯ ಏವ ॥೩೮॥

ಅ ॥ ಆ ಜನಕರಾಜನು ಸರ್ವಜಗತ್ತಿಗೂ ಸ್ವಾಮಿಯಾದ ಶ್ರೀ ರಾಮನಿಗೋಸ್ಕರ ಪ್ರಿಯಗಳಾದ ವಸ್ತ್ರಗಳನ್ನೂ, ಆನೆಗಳಿಂದ ಕೂಡಿದ ರಥಗಳನ್ನೂ, ಅಮೂಲ್ಯಗಳಾದ ರತ್ನಗಳನ್ನೂ ಕೊಟ್ಟನು. ವಸ್ತ್ರಾದಿಗಳನ್ನು ಕೊಡುವ ಕಾಲದಲ್ಲಿ ರಾಮನ ಸಹೋದರರಿಗೂ ಸಂತೋಷದಿಂದಲೇ ಉತ್ತಮರಾದ ಮೂರು ಕನ್ನಿಕೆಯರನ್ನು, ವಿವಾಹ ಮಾಡಿಕೊಟ್ಟನು ॥೩೮॥

ಮೂ ॥ ಮಹೋತ್ಸವಂ ತಂ ತ್ವನುಭೂಯ ದೇವತಾ
ನರಾಶ್ಚ ಸರ್ವೇ ಪ್ರಯಯುರ್ಯಥಾಗತಂ ॥
ಪಿತಾ ಚ ರಾಮಸ್ಯ ಸುತೈಃ ಸಮನ್ವಿತೋ
ಯಯಾವಯೋಧ್ಯಾಂ ಸ್ವಪುರೀಂ ಮುದಾ ತತಃ ॥೩೯॥

ಅ ॥ ದೇವತೆಗಳೂ ಎಲ್ಲಾ ಮನುಷ್ಯರೂ ಕೂಡ ಆ ಮಹೋತ್ಸವವನ್ನು ನೋಡಿ ಬಂದ ಹಾಗೆ ಸಂತೋಷದಿಂದ ಹೊರಟು ಹೋದರು. ಆ ಮೇಲೆ ರಾಮನ ತಂದೆಯಾದ ದಶರಥನೂ ಕೂಡ ಮಕ್ಕಳಿಂದ ಕೂಡಿದವನಾಗಿ ಅಯೋಧ್ಯಾನಾಮಕವಾದ ತನ್ನ ಪಟ್ಟಣವನ್ನು ಕುರಿತು ಸಂತೋಷದಿಂದ ಹೊರಟು ಹೋದನು ॥೩೯॥

ಮೂ ॥ ತದಂತರೇ ಸೋಽಥ ದದರ್ಶ ಭಾರ್ಗವಂ
ಸಹಸ್ರಲಕ್ಷಾಮಿತಭಾನುದೀಧಿತಿಂ ॥
ವಿಭಾಸಮಾನಂ ನಿಜರಶ್ಮಿಮಂಡಲೇ
ಧನುರ್ಧರಂ ದೀಪ್ತಪರಶ್ವಧಾಯುಧಂ ॥೪೦॥

ಅ ॥ ಆ ಮೇಲೆ ಆ ದಶರಥರಾಜನು ವಿದೇಹ-ಅಯೋಧ್ಯಾಪಟ್ಟಣ ಇವುಗಳ ಮಧ್ಯದಲ್ಲಿ ಸಹಸ್ರ ಲಕ್ಷ ಅಮಿತರೂ ಆದ, ಸೂರ್ಯರ ಕಿರಣದಂತೆ ಕಿರಣವುಳ್ಳ, ಸ್ವಾಭಾವಿಕವಾದ ಜ್ಞಾನ ವೆನ್ನುವ ಕಿರಣಸಮೂಹದಲ್ಲಿ ಪ್ರಕಾಶಿಸುತ್ತಿರುವ ಧನುಸ್ಸನ್ನು ಧರಿಸುತ್ತಿರುವ, ಪ್ರಕಾಶಮಾನವಾದ ಕುಠಾರವೇ ಆಯುಧವಾಗಿವುಳ್ಳ ಭೃಗುಕುಲೋತ್ಪನ್ನನಾದ ಪರಶುರಾಮನನ್ನು ಕಂಡನು ॥೪೦॥

ಮೂ ॥ ಅಜಾನತಾಂ ರಾಘವಮಾದಿಪೂರುಷಂ
ಸಮಾಗತಂ ಜ್ಞಾಪಯಿತುಂ ನಿದರ್ಶನೈಃ ॥
ಸಮಾಹ್ವಯಂತಂ ರಘುಪಂ ಸ್ಪೃಧೇನ
ನೃಪೋ ಯಯಾಚೇ ಪ್ರಣಿಪತ್ಯ ಭೀತಃ ॥೪೧॥

ಅ ॥ ದಶರಥರಾಜನು ಶ್ರೀ ರಾಮನನ್ನು ಆದಿಪುರುಷನನ್ನಾಗಿ ತಿಳಿಯದೆ ಇದ್ದ (ಅಂದರೆ ರಾಮನು ಶ್ರೀ ಹರಿಯು ಎಂದು ಜ್ಞಾನರಹಿತರಾದ) ಸಜ್ಜನರಿಗೆ ದೃಷ್ಟಾಂತಗಳಿಂದ ತಿಳಿಸುವು ದಕ್ಕಾಗಿ ಬಂದಿರತಕ್ಕ ಶ್ರೀ ರಾಮನನ್ನು ಸ್ಪರ್ಧೆಯಿಂದಲೆಂಬಂತೆ (ಯುದ್ಧಮಾಡುವುದಕ್ಕಾಗಿ) ಕರೆಯುತಕ್ಕ ಶ್ರೀ ಪರಶುರಾಮನನ್ನು ಭಯಗ್ರಸ್ತನಾಗಿ ನಮಸ್ಕರಿಸಿ ಬೇಡಿದನು ॥೪೧॥

ಮೂ ॥ ನ ಮೇ ಸುತಂ ಹಂತುಮಿಹಾರ್ಹಸಿ ಪ್ರಭೋ
ಮಮೋಽಗತಸ್ಯೇತ್ಯುದಿತಃ ಸ ಭಾರ್ಗವಃ ॥
ಸುತತ್ರಯಂ ತೇ ಪ್ರದದಾಮಿ ರಾಘವಂ
ರಣೇ ಸ್ಥಿತಂ ದ್ರಷ್ಟುಮಿಹಾಗತೋಽಸ್ಮ್ಯಹಂ ॥೪೨॥

ಅ ।। ಎಲೋ! ಸರ್ವಸಮರ್ಥನೇ! ಈ ಸಮಯದಲ್ಲಿ ನಾನು ವೃದ್ಧನಾದಪ್ರಯುಕ್ತ ನನ್ನ ಮಗನನ್ನು ಕೊಲ್ಲುವುದು ಯೋಗ್ಯವಲ್ಲ. ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಆ ಪರಶುರಾಮನು ನಿನಗೋಸ್ಕರ ಮೂರು ಮಕ್ಕಳನ್ನು (ಲಕ್ಷ್ಮಣ-ಭರತ-ಶತ್ರುಘ್ನರನ್ನು) ಕೊಡುತ್ತೇನೆ. ಈಗ ಯುದ್ಧದಲ್ಲಿ ಹಿಂಜರಿಯದಿರತಕ್ಕ ಶ್ರೀ ರಾಮನನ್ನು ತೋರಿಸಲಿಕ್ಕಾಗಿ ಇಲ್ಲಿಗೆ ನಾನು ಬಂದಿರುತ್ತೇನೆ. ।।೪೨।।

ಮೂ ।। ಸ ಇತ್ಥಮುಕ್ತ್ವಾ ನೃಪತಿಂ ರಘೂತ್ತಮಂ
ಭೃಗೂತ್ತಮಃ ಪ್ರಾಹ ನಿಜಾಂ ತನುಂ ಹರಿಃ ॥
ಅಭೆ ದವಜ್ಞೇಷ್ವಪಿ (ಭಿ) ದರ್ಶಯನ್ ಪರಂ
ಪುರಾತನೋಽಹಂ ಹರಿರೇಷ ಇತ್ಯಪಿ ।।೪೩।।

ಅ ।। ಈ ಪ್ರಕಾರ ಆ ಪರಶುರಾಮನು ದಶರಥರಾಜನನ್ನು ಕುರಿತು ಹೇಳಿ ನಾನೂ ಕೂಡ ಪುರಾತನನಾದ ಶ್ರೀ ಹರಿಯು ಎಂದು ಇಂದ್ರಾರ್ಜುನಾದಿಗಳಂತೆ ವಿಶೇಷ ರಹಿತವಾದ ತನಗೂ, ರಾಮನಿಗೂ ಅವತಾರದಿಂದ ಅಭೇದವನ್ನು ಅಜ್ಞರಲ್ಲಿಯೂ ತಿಳಿಸುತ್ತಾ ಸ್ವಸ್ವರೂಪ ಭೂತನಾದ ರಘೂತ್ತಮನಾದ ರಾಮರೂಪಿಯಾದ ಶ್ರೀ ಹರಿಯನ್ನು ಕುರಿತು ಹೇಳಿದನು ।।೪೩।।

ಮೂ ।। ಶೃಣುಷ್ವ ರಾಮ ತ್ವಮಿಹೋದಿತಂ ಮಯಾ
ಧನುರ್ದ್ವಯಂ ಪೂರ್ವಮಭೂನ್ಮಹಾದ್ಭುತಂ ॥
ಉಮಾಪತಿಸ್ತ್ವೇಕಮಧಾರಯತ್ತತೋ-
ರಮಾಪತಿಶ್ಚಾಪರಮುತ್ತಮೋತ್ತಮಂ ।।೪೪।।

ಅ ।। ಎಲೋ ರಾಮನೇ! ನೀನು ಇಲ್ಲಿ ನನ್ನಿಂದ ಹೇಳಲ್ಪಟ್ಟದ್ದನ್ನು ಕೇಳು. ಮೊದಲು ಆಶ್ಚರ್ಯಕರವಾದ ಧನಸ್ಸುಗಳು ಎರಡು ಇದ್ದುವು. ರುದ್ರನಾದರೂ ಒಂದನ್ನು ಧರಿಸಿದನು. ರುದ್ರನು ಧರಿಸಿದ ಧನುಸ್ಸಿಗಿಂತ ಇತರವಾದ ಅದಕ್ಕಿಂತಲೂ ಉತ್ತಮೋತ್ತಮವಾದ ಧನುಸ್ಸನ್ನು ಲಕ್ಷ್ಮೀಪತಿಯಾದ ಶ್ರೀ ಹರಿಯು ಧರಿಸಿದನು ।।೪೪।।

ಮೂ ।। ತದಾ ತು ಲೋಕಸ್ಯ ನಿದರ್ಶನಾರ್ಥಿಭಿಃ
ಸಮರ್ಥಿತೌ ತೌ ಹರಿಶಂಕರೌ ಸುರೈಃ ॥
ರಣೇ ಸ್ಥಿತೌ ವಾಂ ಪ್ರಸಮೀಕ್ಷಿತುಂ ವಯಂ
ಸಮರ್ಥಯಾಮೋಽತ್ರ ನಿದರ್ಶನಾರ್ಥಿನಃ ।।೪೫।।

ಅ ।। ಧನುಸ್ಸನ್ನು ಹಿಡಿಯುವ ಕಾಲದಲ್ಲಿ ಸಜ್ಜನರ ಸಮೂಹಕ್ಕೆ ಪರತತ್ವಜ್ಞಾನವನ್ನು ಇಚ್ಛಿಸತಕ್ಕ ದೇವತೆಗಳಿಂದ ಆ ಹರಿ-ಶಂಕರರು ಯುದ್ಧದಲ್ಲಿರತಕ್ಕ ನಿಮ್ಮನ್ನು ನೋಡುವುದಕ್ಕಾಗಿ ಈಗ ಪರತತ್ವಜ್ಞಾನವನ್ನು ಇಚ್ಛಿಸತಕ್ಕ ನಾವು ಪ್ರಾರ್ಥಿಸುತ್ತೇವೆ; ಹೀಗೆ ಚೆನ್ನಾಗಿ ಪ್ರಾರ್ಥಿಸಿ ಕೊಳ್ಳಲ್ಪಟ್ಟರು ।।೪೫।।

ಮೂ ।। ತತೋ ಹಿ ಯುದ್ಧಾಯ ರಮೇಶಶಂಕರೌ
ವ್ಯವಸ್ಥಿತೌ ತೇ ಧನುಷೀ ಪ್ರಗೃಹ್ಯ ॥
ಯತೋಽಂತರಸ್ಯೈಷ ನಿಯಾಮಕೋ ಹರಿಃ
ತತೋ ಹರೋಽಗ್ರೇಽಸ್ಯ ಶಿಲೋಪಮೋಽಭೂತ್ ।।೪೬।।

ಅ ॥ ಆದಕಾರಣ ಲಕ್ಷ್ಮೀಪತಿಯಾದ ಶ್ರೀ ಹರಿಯೂ, ರುದ್ರನೂ ಇವರಿಬ್ಬರೂ ಆ ಪಿನಾಕ ಶಾರ್ಙಗಳೆನ್ನುವ ಧನುಸ್ಸುಗಳನ್ನು ಹಿಡಿದುಕೊಂಡು ಯುದ್ಧಕ್ಕಾಗಿ ನಿಂತುಕೊಂಡರು. ಯಾವ ಕಾರಣದಿಂದ ಈ ಶ್ರೀ ಹರಿಯು ಈ ರುದ್ರನ ಹೃತ್ಕಮಲದಲ್ಲಿ ಪ್ರೇರಕನೋ ಆದಕಾರಣ ರುದ್ರನು ಶ್ರೀ ಹರಿಯ ಎದುರಿನಲ್ಲಿ ಪಾಷಾಣದಿಂದ ಸದೃಶನು ಆದನು. ವ್ಯಾಪಾರವಿಲ್ಲದಿರುವುದರಿಂದ ಜಡದಂತೆಯೇ ಆದನು ॥೪೬॥

ಮೂ ॥ ಶಶಾಕ ನೈವಾಥ ಯದಾಭಿವೀಕ್ಷಿತಂ
ಪ್ರಸ್ಪಂದಿತುಂ ವಾ ಕುತ ಏವ ಯೋದ್ಧುಂ ॥
ಶಿವಸ್ತದಾ ದೇವಗಣಾಃ ಸಮಸ್ತಶಃ (ಸ್ತಾಃ)
ಶಶಂಸುರುಚ್ಚೈರ್ಜಗತೋ ಹರೇರ್ಬಲಂ ೪೭॥

ಅ ॥ ಜಡತ್ವಪ್ರಾಪ್ತ್ಯನಂತರದಲ್ಲಿ ರುದ್ರನು ಯಾವಾಗ ನೋಡುವುದಕ್ಕಾಗಿ ಆಗಲೀ ಹಂದಾಡುವುದಕ್ಕಾಗಲೀ ಸಮರ್ಥನಾಗಲಿಲ್ಲವೋ, ಯುದ್ಧಮಾಡಲಿಕ್ಕೆ ಹೇಗೆ ಸಮರ್ಥನಾದಾನು? (ಯಾವುದರಿಂದಲೂ ಸಮರ್ಥನಾಗಲಾರನು.) ಆ ಸಮಯದಲ್ಲಿ ಎಲ್ಲಾ ದೇವತೆಗಳ ಸಮೂಹಗಳೂ ರಮಾದಿ ಜಗತ್ತಿನ ಸಕಾಶದೆಶೆಯಿಂದ ಶ್ರೀ ಹರಿಯ ಬಲವನ್ನು ಉತ್ತಮವನ್ನಾಗಿ ಪ್ರತ್ಯಕ್ಷವಾಗಿಯೇ ಹೊಗಳಿದರು ॥೪೭॥

ಮೂ ॥ ಯದೀರಣೇನೈವ ವಿನೈಷ ಶಂಕರಃ
ಶಶಾಕ ನ ಪ್ರಶ್ವಸಿತುಂ ಚ ಕೇವಲಂ ॥
ಕಿಮತ್ರ ವಕ್ತವ್ಯಮತೋ ಹರೇರ್ಬಲಂ
ಹರಾತ್ಪರಂ ಸರ್ವತ ಏವ ಚೇತಿ ॥೪೮॥

ಅ ॥ ಈ ರುದ್ರನು ಯಾವ ಶ್ರೀ ಹರಿಯ ಪ್ರೇರಣೆಯಿಂದ ಹೊರತೇ ಕೇವಲ ಹಂದಾಡುವುದಕ್ಕಾಗಿಯೂ ಯಾವ ಕಾರಣದಿಂದ ಸಮರ್ಥನಾಗುವುದಿಲ್ಲವೋ, ಆದಕಾರಣ ಈ ಅವಸ್ಥೆಯು ಇರುತ್ತಿರಲು ಶ್ರೀ ಹರಿಯ ಬಲವು ರುದ್ರನದೆಶೆಯಿಂದಲೂ ಸರ್ವರಿಂದಲೂ ಶ್ರೇಷ್ಠವೆಂದು ಏನು ಹೇಳತಕ್ಕುದು? ॥೪೮॥

ಮೂ ॥ ತತಃ ಪ್ರಣಮ್ಯಾಶು ಜನಾರ್ದನಂ ಹರಃ
ಪ್ರಸನ್ನದೃಷ್ಟ್ಯೈ ಹರಿಣಾಭಿವೀಕ್ಷಿತಃ ॥
ಜಗಾಮ ಕೈಲಾಸಮಮುಷ್ಯ ತದ್ಧನುಃ
ತ್ವಯಾ ಪ್ರಭಗ್ನಂ ಕಿಲ ಲೋಕಸನ್ನಿಧೌ ॥೪೯॥

ಅ ॥ ಆ ಮೇಲೆ ರುದ್ರನು ಶೀಘ್ರದಲ್ಲಿ ಶ್ರೀ ಹರಿಯನ್ನು ನಮಸ್ಕರಿಸಿ ಶ್ರೀಹರಿಯಿಂದ ಸಂತುಷ್ಟವಾದ ದೃಷ್ಟಿಯಿಂದ ಕಾಣಿಸಿಕೊಳ್ಳಲ್ಪಟ್ಟವನಾಗಿ ಕೈಲಾಸಪರ್ವತಕ್ಕೆ ಹೋದನು. ರುದ್ರನ ಆ ಧನಸ್ಸ ನಿನ್ನಿಂದ ಜನರ ಸನ್ನಿಧಿಯಲ್ಲಿ ಜನಕರಾಜನ ಸಭೆಯಲ್ಲಿ ಮುರಿಯಲ್ಪಟ್ಟಿತು ಎಂದು ಶ್ರುತವಾಗಿದೆ ॥೪೯॥

ಮೂ ॥ ಧನುರ್ಯದನ್ಯದ್ಧರಿಹಸ್ತಯೋಗ್ಯಂ
ತತ್ಕಾರ್ಮುಕಾತ್ಕೋಟಿಗುಣಂ ಪುನಶ್ಚ ॥
ವರಂ ಹಿ ಹಸ್ತೇ ತದಿದಂ ಗೃಹೀತಂ
ಮಯಾ ಗೃಹಾಣೈತದತೋ ಹಿ ವೈಷ್ಣವಂ ॥೩೦॥

ಅ ॥ ಶ್ರೀ ಹರಿಯ ಹಸ್ತಕ್ಕೆ ಯೋಗ್ಯವಾದುದು ಯಾವುದು ಇತರವಾದುದು ಧನುಸ್ಸೋ ಅದು ಆ ರುದ್ರನ ಧನುಸ್ಸಿಗಿಂತ ಯಾವ ಕಾರಣದಿಂದ ವ ತ್ತೆ ಕೋಟಿಸಂಖ್ಯಾಕ ಅಧಿಕಗುಣಗಳುಳ್ಳದ್ದೋ, ಆದಕಾರಣ ಉತ್ತಮವೇ. ಅಧಿಕಗುಣವುಳ್ಳದ್ದು ಶ್ರೇಷ್ಠವೆನ್ನವುದು ಪ್ರಸಿದ್ಧವು: ಧನುಸ್ಸನ್ನು ಹಿಡಿದರಷ್ಟೆ ಪ್ರತ್ಯಕ್ಷವು ಆದಕಾರಣ ಈ ಧನುಸ್ಸನ್ನು ಹಿಡಿದುಕೊಳ್ಳು. ಆ ಈ ವೈಷ್ಣವ ಧನುಸ್ಸು ನನ್ನಿಂದ ಕೈಯಲ್ಲಿ ಸ್ವೀಕರಿಸಲ್ಪಟ್ಟದಷ್ಟೆ ॥೩೦॥

ಮೂ ॥ ಯದೀದಮಾಗೃಹ್ಯ ವಿಕರ್ಷಸಿ ತ್ವಂ
ತದಾ ಹರಿರ್ನಾತ್ರ ವಿಚಾರ್ಯಮಸ್ತಿ ॥
ಇತಿ ಬ್ರುವಾಣಃ ಪ್ರದದೌ ಧನುರ್ವರಂ
ಪ್ರದರ್ಶಯನ್ವಿಷ್ಣು ಬಲಂ ಹರಾದ್ವರಂ ॥ ೩೧ ॥

ಅ ॥ ಯಾವ ಪಕ್ಷದಲ್ಲಿ ನೀನು ಈ ಶಾರ್ಙ್ಗಧನುಸ್ಸನ್ನು ಹಿಡಿದು ಸೆಳೆಯುತ್ತೀಯೋ, ಹಾಗಾದರೆ ನೀನು ಶ್ರೀ ಹರಿಯು. ನಿನಗೆ ಹರಿತ್ವವಿಷಯದಲ್ಲಿ ವಿಚಾರಮಾಡತಕ್ಕ ಅಂಶವು ಇರುವುದಿಲ್ಲ. ಈ ಪ್ರಕಾರ (ಪರಶುರಾಮನು) ಹೇಳುವವನಾಗಿ ರುದ್ರನ ಬಲದಿಂದ ಶ್ರೇಷ್ಠವಾದ ವಿಷ್ಣುವಿನ ಬಲವನ್ನು ತೋರಿಸುವವನಾಗಿ ಶಾರ್ಙ್ಗಾಖ್ಯವಾದ ಧನುಃಶ್ರೇಷ್ಠವನ್ನು ಕೊಟ್ಟನು ೩೧॥

ಮೂ ॥ ಪ್ರಗೃಹ್ಯ ತಚ್ಚಾಪವರಂ ಸ ರಾಘವಃ
ಚಕಾರ ಸಜ್ಯಂ ನಿಮಿಷೇಣ ಲೀಲಯಾ ॥
ಚಕರ್ಷ ಸಂಧಾಯ ಶರಂ ಚ ಪಶ್ಯತಃ
ಸಮಸ್ತಲೋಕಸ್ಯ ಚ ಸಂಶಯಂ ನುದನ್ ॥ ೩೨ ॥

ಅ ॥ ಆ ಶ್ರೀ ರಾಮನು ಜ್ಯಾಸಹಿತವಾದ ಆರೋಪಿತವಾದ ಆ ಧನುಃಶ್ರೇಷ್ಠವನ್ನು ಹಿಡಿದುಕೊಂಡು ನೋಡತಕ್ಕ ಎಲ್ಲಾ ಜನರ (ಶ್ರೀ ರಾಮನು ಶ್ರೀ ಹರಿಯು ಎನ್ನುವ ವಿಷಯ ದಲ್ಲಿರತಕ್ಕ) ಸಂದೇಹವನ್ನು ಪರಿಹರಿಸುತ್ತಾ ಬಾಣವನ್ನು ಧನುಸ್ಸಿನಲ್ಲಿ ಕೂಡಿಸಿ ನಿಮಿಷಮಾತ್ರದಿಂದ ಕ್ರೀಡೆಯಿಂದ ಸೆಳೆದನು ॥೩೨॥

ಮೂ ॥ ಪ್ರದರ್ಶಿತೇ ವಿಷ್ಣುಬಲೇ ಸಮಸ್ತಶೋ (ತೋ)
ಪರಾಚ್ಚ ನಿಸ್ಸಂಖ್ಯತಯಾ ಮಹಾಧಿಕೇ ॥
ಜಗಾದ ಮೇಘೌಘಗಭೀರಯಾ ಗಿರಾ
ಸ ರಾಘವಂ ಭಾರ್ಗವ ಆದಿಪೂರುಷಃ ॥೩೩॥

ಅ ॥ ರಮಾದಿಗಳಿಂದಲೂ ರುದ್ರನಿಂದಲೂ ಅನಂತವಾಗಿರುವುದರಿಂದ ಅತ್ಯುತ್ಕೃಷ್ಟವಾದ ಶ್ರೀವಿಷ್ಣುವಿನ ಬಲವು ಶ್ರೀರಾಮನಿಂದ ತೋರಿಸಲ್ಪಡುತ್ತಿರಲು ಆದಿಪುರುಷನಾದ ಪರಶುರಾಮನು ಮೇಘಗಳ ಸಮೂಹದಂತೆ ಗಂಭೀರವಾದ ಮಾತಿನಿಂದ ಶ್ರೀ ರಾಮನನ್ನು ಕುರಿತು ಹೇಳಿದನು॥೩೩॥

ಮೂ ॥ ಅಲಂ ಬಲಂ ತೇ ಜಗತೋಽಖಿಲಾದ್ವರಂ
ಪರೋಽಸಿ ನಾರಾಯಣ ಏವ ನಾನ್ಯಥಾ ॥
ನಿಸರ್ಜಯಸ್ವೇಹ ಶರಂ ತಪೋಮಯೇ
ಮಹಾಸುರೇ ಲೋಕಮಯೇ ವರಾದ್ವಿಭೋಃ ॥೫೪॥

ಅ ॥ ಎಲ್ಲಾ ಜಗತ್ತಿಗಿಂತ ಶ್ರೇಷ್ಠವಾದ ನಿನ್ನ ಬಲವು ಪೂರ್ಣವಾಗಿದೆ. ನೀನು ಸರ್ವೋತ್ತಮನಾದ ನಾರಾಯಣನೇ ಆಗಿರುತ್ತಿ. ಜೀವರ ಸಮೂಹದರೂಪನು ಆಗುವುದಿಲ್ಲ. ನನ್ನ ಹೊಟ್ಟೆಯಲ್ಲಿರತಕ್ಕ ತಪಪ್ರಧಾನನಾದ ಚತುರ್ಮುಖಬ್ರಹ್ಮನ ವರದೆಶೆಯಿಂದ ಲೋಕವ್ಯಾಪ್ತರಾದ (ಅಂದರೆ ಸರ್ವತ್ರ ಇರತಕ್ಕ) ಮಹಾಸುರರಲ್ಲಿ ಬಾಣವನ್ನು ಬಿಡು. ॥೫೪॥

ರುದ್ರನ ವರದೆಶೆಯಿಂದ ಎಂದು ಹೇಳಿದ್ದನ್ನು ವಿಶದೀಕರಿಸುತ್ತಾರೆ—

ಮೂ ॥ ಪುರಾತುಲೋ ನಾಮ ಮಹಾಸುರೋಽಭವ-
ದ್ವರಾತ್ಸ ತು ಬ್ರಹ್ಮಣ ಆಪ ಲೋಕತಾಂ ॥
ಪುನಶ್ಚ ತಂ ಪ್ರಾಹ ಜಗದ್ಗುರುರ್ಯದಾ
ಹರಿರ್ಜಿತಃ ಸ್ಯಾದ್ಧಿ ತದೈವ ವಧ್ಯಸೇ ॥೫೫॥

ಅ ॥ ಮೊದಲು ಅತುಲನೆನ್ನುವ ಶ್ರೇಷ್ಠ ಅಸುರನು ಇದ್ದನು. ಅವನಾದರೂ ಬ್ರಹ್ಮನ ವರದೆಶೆಯಿಂದ ಲೋಕವ್ಯಾಪ್ತತ್ವವನ್ನು ಹೊಂದಿದನು. ಮತ್ತು ಜಗದ್ಗುರುವಾದ ಬ್ರಹ್ಮನು ಆ ಅಸುರನನ್ನು ಯಾವಾಗ ಶ್ರೀ ಹರಿಯು ಲೋಕಪ್ರಸಿದ್ಧಿಯಿಂದ ಪರಾಜಿತನಾಗುವನೋ ಆವಾಗಲೇ ಸಂಹರಿಸಿಕೊಳ್ಳಲ್ಪಡುತ್ತಿ ಎಂದು ಪುನಃ ಹೇಳಿದನು. ॥೫೫॥

ಮೂ ॥ ಅತೋ ವಧಾರ್ಥಂ ಜಗದಂತಕಸ್ಯ
ಸರ್ವಾಜಿತೋಽಹಂ ಜಿತವದ್ವ್ಯವಸ್ಥಿತಃ ॥
ಇತೀರಿತೇ ಲೋಕಮಯೇ ಸ ರಾಘವೋ
ಮುಮೋಚ ಬಾಣಂ ಜಗದಂತಕೇಽಸುರೇ ॥೫೬॥

ಅ ॥ ಆದಕಾರಣ ಜಗತ್ತನ್ನು ನಾಶಪಡಿಸತಕ್ಕ ಅತುಲಾಖ್ಯ ಅಸುರನ ಸಂಹಾರಕ್ಕಾಗಿ ಎಲ್ಲರಿಂದಲೂ ಪರಾಜಯಿಸಿಕೊಳ್ಳಲ್ಪಡದಿರುವ ನಾನು ಪರಾಜಿತನಂತೆ ನಿಂತಿರುತ್ತೇನೆ. ಹೀಗೆ ಹೇಳುತ್ತಿರಲು ಆ ಶ್ರೀ ರಾಮನು ಸರ್ವಲೋಕಗಳಲ್ಲಿ ವ್ಯಾಪ್ತನಾದ ಜಗತ್ತನ್ನು ನಾಶಪಡಿಸತಕ್ಕ ಅಸುರನಲ್ಲಿ ಬಾಣವನ್ನು ಬಿಟ್ಟನು. ॥೫೬॥

ಹಾಗಾದರೆ ಶ್ರೀಹರಿಯನ್ನು ದ್ವೇಷಿಸತಕ್ಕವನಿಗೆ ವಿಷ್ಣುವಿನ ಶರೀರ ಪ್ರವೇಶವು ಹೇಗೆಂದರೆ-

ಮೂ ॥ ಪುರಾ ವರೋಽನೇನ ಶಿವೋಪಲಂಭಿತೋ
ಮುಮುಕ್ಷಯಾ ವಿಷ್ಣುತನುಪ್ರವೇಶನಂ ॥
ಸ ತೇನ ರಾಮೋದರಗೋ ಬಹಿರ್ಗತಃ
ತದಾಜ್ಞಯೈನಾಶು ಬಭೂವ ಭಸ್ಮಸಾತ್ ॥೫೭॥

ಅ ॥ ಈ ಅಸುರನಿಂದ ಮೋಕ್ಷೇಚ್ಛೆಯಿಂದ ಶ್ರೀಹರಿಯ ಶರೀರ ಪ್ರವೇಶವು ನನಗೆ ಆಗಲಿ, ಎನ್ನುವ ವರವು ರುದ್ರನದೆಶೆಯಿಂದ ಹೊಂದಲ್ಪಟ್ಟಿತು. ಆ ವರದಿಂದ ಪರಶುರಾಮನ ನಾಭಿದೇಶದಲ್ಲಿರತಕ್ಕ ಆ ಅತುಲಾಖ್ಯ ಅಸುರನು (ಕ್ರೂರವಾದ ಬಾಣವು ನನ್ನ ಹೊಟ್ಟೆಯನ್ನು ಕುರಿತು ಬರುತ್ತದೆ. ನೀನು ಹೊರಗೆಹೋಗು ಎನ್ನುವ ಪರಶುರಾಮನ ಮಾತನ್ನು ಕೇಳಿ) ಶರೀರದಿಂದ ಹೊರಟುಹೋದನು. ತತ್ಕ್ಷಣದಲ್ಲಿಯೇ ಪರಶುರಾಮನ ಬಾಣದಿಂದ ಭಸ್ಮೀಭೂತನು ಆದನು.

**ವಿಶೇಷಾರ್ಥ — (1) 'ತಸ್ಯ ನಾಭಿಪ್ರದೇಶೇ ತು ತಪಃ ಕೃತ್ವಾ ಸುದಾರುಣಂ । ತಿಷ್ಠತ್ಯನೇನ ಸದಾ ದೈತ್ಯಸ್ತಂ ಜ್ಞಾತ್ವಾ ರಾಘವೋ ಬಲೀ । ತಂ ತು ಭಸ್ಮೀಚಕಾರಾಥ'** ಪರಶುರಾಮನ ನಾಭಿಪ್ರದೇಶದಲ್ಲಿ ಅತಿಕಠಿಣವಾದ ತಪಸ್ಸನ್ನು ಮಾಡುತ್ತಾ ಅತುಲಾಖ್ಯ ಅಸುರನು ಇರುತ್ತಾನೆ. ರಾಮನು ಅವನನ್ನು ತಿಳಿದು ಭಸ್ಮೀಕರಿಸಿದನು, ಎಂದು ಪಾದ್ಮಪುರಾಣದಲ್ಲಿ ಹೇಳಿಯದೆ. (2) ಮೋಕ್ಷವಾಗಬೇಕೆನ್ನುವ ಇಚ್ಛೆಯಿಂದ ವಿಷ್ಣುತನುಪ್ರವೇಶಾಖ್ಯ ವರದ್ದೆಶೆಯಿಂದ ಪರಶುರಾಮನ ಉದರದಲ್ಲಿಯೇ ನಾಶವಾಗದೆ ಮೋಕ್ಷವೂ ಆಗದೆ ಹೋಗುವುದು ಎಂದು ತಿಳಿದು ಉಪಾಯದಿಂದ ಹೊರಡಿಸಲ್ಪಟ್ಟನು ॥೫೭॥

ಮೂ ॥ ಇತೀವ ರಾಮಾಯ ಸ ರಾಘವಃ ಶರಂ
ವಿಕರ್ಷಮಾಣೋ ವಿನಿಹತ್ಯ ಚಾಸುರಂ ॥
ತಪಸ್ತ್ವ(ಸ್ತ್ವ)ದೀಯಂ ಪ್ರವದನ್ಮುಮೋದ
ತದೀಯಮೇವ ಹ್ಯಭವತ್ಸಮಸ್ತಂ ॥ ೫೮ ॥

ಅ ॥ ಈ ಕಾರಣದಿಂದ ಅತುಲಾಖ್ಯ ಅಸುರನನ್ನು ಸಂಹರಿಸುವುದಕ್ಕಾಗಿ ಆ ರಾಮನು ಪರಶುರಾಮನಿಗೋಸ್ಕರವೇ ಎಂಬಂತೆ ಬಾಣವನ್ನು ಸೆಳೆಯುವವನಾಗಿ (ತಪಃಪ್ರಧಾನನಾದುದರಿಂದ ತಪೋಮಯನಾಮಕನಾದ ಅಥವಾ ಲೋಕವ್ಯಾಪ್ತನಾದ ಪ್ರಯುಕ್ತ ಲೋಕಮಯನಾಮಕನಾದ ಅತುಲಾಖ್ಯ ಅಸುರನನ್ನು ಸಂಹರಿಸಿ (ಅಸುರನನ್ನು ಮೋಹಿಸುವುದಕ್ಕಾಗಿ) ಓ ಭಾರ್ಗವ ಸಂಬಂಧಿಯಾದ ಅಥವಾ ನಿನ್ನ ಸಂಬಂಧಿಯಾದ ತಪಸ್ಸು (ನನ್ನಿಂದ ನಾಶ ಮಾಡಲ್ಪಟ್ಟಿತು) ಎಂದು ಹೇಳುತ್ತಾ ಸಂತೋಷಪಟ್ಟನು. (ಹಾಗಾದರೆ ಅತುಲಾಖ್ಯ ಅಸುರನನ್ನು ಸಂಹರಿಸಿ ಭಾರ್ಗವ ಸಂಬಂಧಿಯಾದ ತಪಸ್ಸು ನಾಶವಾಗಲ್ಪಟ್ಟಿತೆಂದು ಹೇಗೆ ಸಂತೋಷಪಟ್ಟನು ಎಂದರೆ —) ಎಲ್ಲಾ ಜಗತ್ತು ಪರಶುರಾಮನ ಸಂಬಂಧಿಯೇ ಆಯಿತು, ಆದಪ್ರಯುಕ್ತ ಜಗತ್ತಿನಲ್ಲಿರತಕ್ಕ ಅಸುರನೂ ಪರಶುರಾಮ ಸಂಬಂಧಿಯೇ 'ಮಯಿ ಸರ್ವಮಿದಂ ಪ್ರೋಕ್ತಂ' ಇತ್ಯಾದಿ ಪ್ರಮಾಣ ಪ್ರಸಿದ್ಧವು.

ವಿಶೇಷಾರ್ಥ (1) ಗ್ರಂಥಾಂತರದಲ್ಲಿ ಶ್ರೀ ರಾಮನು ಪರಶುರಾಮನ ತಪಸ್ಸೆಲ್ಲವನ್ನೂ ಸುಟ್ಟನು ಎಂದು ಪರಶುರಾಮನ ಪರಿಹಾಸವು ಮಾಡಲ್ಪಟ್ಟಿದೆ ಎಂದು ಕಥೆಯು ಇದೆ. ಅದರ ತಾತ್ಪರ್ಯವನ್ನು ಹೇಳಿದರು. ಅಸುರನನ್ನು ಸುಟ್ಟದರಿಂದ ಅವನ ತಪಸ್ಸಿಗೂ ದಾಹವಾಗೋಣ ಪರಶುರಾಮನಲ್ಲಿರತಕ್ಕ ತಪಸ್ಸೂ ಹಾಳಾಯಿತೆಂದೂ ಚೆನ್ನಾಗಿ ಹೇಳುತ್ತಾ ಸಂತೋಷಪಟ್ಟನು. (2) ಅಸುರನು ಮಾಡಿದ ತಪಸ್ಸು ಪರಶುರಾಮನ ತಪಸ್ಸು ಹೇಗೆ ಆಗುವುದೆಂದರೆ—ಚೇತನಾಚೇತನಾತ್ಮಕ ಸಮಸ್ತ ಜಗತ್ತು ಪರಶುರಾಮನ ಅಧೀನವಾದ ಪ್ರಯುಕ್ತ ಪರಶುರಾಮನ ಸಂಬಂಧಿಯೇ ಆಯಿತು ॥೫೮॥

ಮೂ ॥ ನಿರಂತರಾನಂದವಿಬೋಧಸಾರಃ
ಸ ಜಾನಮಾನೋಽಖಿಲಮಾದಿಪೂರುಷಃ ॥
ವದನ್ ಶೃಣೋತೀವ ವಿನೋದತೋ ಹರಿಃ
ಸ ಏಕ ಏವ ದ್ವಿತನುರ್ಮುಮೋದ ॥ ೪೯ ॥

ಅ ॥ ಭೇದರಹಿತಗಳಾದ (ಅಂದರೆ ಸ್ವರೂಪಭೂತಗಳಾದ) ಸುಖ-ಜ್ಞಾನಗಳಿಂದ ಶ್ರೇಷ್ಠನಾದ, ಎಲ್ಲಾ ಜಗತ್ತನ್ನೂ ತಿಳಿದಿರುವ ಆದಿಪುರುಷನಾದ ಶ್ರೀ ಹರಿಯು ಲೀಲೆಯಿಂದ (ಪರಶುರಾಮ ರೂಪದಿಂದ) ಹೇಳುವವನಂತೆಯೂ (ರಾಘವರೂಪದಿಂದ) ಕೇಳುವವನಂತೆಯೂ ಇದ್ದಾನೆ. ಹೀಗೆ ಹೇಳುವವನು ಕೇಳುವವನೆಂದು ಎರಡು ಸ್ವರೂಪವುಳ್ಳ ಒಬ್ಬನೇ ಆ ಶ್ರೀಹರಿಯು ಸಂತೋಷಪಟ್ಟನು ॥೪೯॥

ಹಾಗಾದರೆ, ಒಬ್ಬನೇ ಆದರೆ ಇತರರನ್ನು ಅನುಕರಿಸುವುದು ಏತಕ್ಕೆಂದರೆ — ಇತರರನ್ನು ಅನುಕರಿಸಲಿಕ್ಕೆ ಎರಡು ಕಾರಣಗಳನ್ನು ಹೇಳುತ್ತಾರೆ

ಮೂ ॥ ಸ ಚೇಷ್ಟಿತಂ ಚೈವ ನಿಜಾಶ್ರಯಸ್ಯ
ಜನಸ್ಯ ಸತ್ತತ್ತ್ವವಿಬೋಧಕಾರಣಂ ॥
ವಿಮೋಹಕಂ ಚಾನ್ಯತಮಸ್ಯ ಕುರ್ವಂ-
ಶ್ಚಿಕ್ರೀಡ ಏಕೋಽಪಿ ನರಾಂತರೇ ಯಥಾ ॥ ೫೦ ॥

ಅ ॥ ಆ ಶ್ರೀಹರಿಯು ತನ್ನನ್ನು ಆಶ್ರಯಿಸಿಕೊಂಡು ಇರತಕ್ಕ ಜನರ (ನಾನೂ ಶ್ರೀ ಹರಿಯು. ರಾಮನು ಹರಿಯು ಎನ್ನುವ) ಸಮೀಚೀನವಾದ ಜ್ಞಾನಕ್ಕೆ ಕಾರಣವಾದ (ಅಂದರೆ ಜ್ಞಾನವನ್ನು ಹುಟ್ಟಿಸತಕ್ಕ) ವ್ಯಾಪಾರವನ್ನು ಮಾಡುತ್ತಾ ಅತ್ಯಂತವಾಗಿ ಅಭಿಪ್ರಾಯ ಅಸುರರ ಸಮೂಹಕ್ಕೆ ಹರಿಯ ಅವತಾರಾದಿಗಳಿಗೆ ಭೇದಪ್ರತೀತಿಯನ್ನು ಹುಟ್ಟಿಸತಕ್ಕ (ಭೇದ ಒಬ್ಬನು ಗೆದ್ದನು, ಮತ್ತೊಬ್ಬನು ಪರಾಜಿತನಾದನು ಎಂದು ಅಜ್ಞಾನವನ್ನು ಹುಟ್ಟಿಸುವವನಾಗಿ ವ್ಯಾಪಾರ ವನ್ನು ಮಾಡುತ್ತಾ ಪರಶುರಾಮ-ರಾಮಾದಿರೂಪದಿಂದ ಒಬ್ಬನೇ ಆದಾಗ್ಯೂ ಇತರ ಪುರುಷರಲ್ಲಿ ಹೇಗೋ ಹಾಗೆಯೇ ಕ್ರೀಡಿಸಿದನು ॥ ೫೦ ॥

ಮೂ ॥ ತತಃ ಸ ಕಾರುಣ್ಯನಿಧಿರ್ನಿಜೇ ಜನೇ
ನಿತಾಂತಮೈಕ್ಯಂ ಸ್വಗತಂ ಪ್ರಕಾಶಯನ್ ॥
ದ್ವಿಧೇವ ಭೂತ್ವಾ ಭೃಗುವರ್ಯ ಆತ್ಮನಾ
ರಘೂತ್ತಮೇನೈಕ್ಯಮಗಾತ್ಸಮುಚ್ಚಂ ॥ ೫೧ ॥

ಅ ॥ ಜ್ಞಾನವನ್ನೂ ಅಜ್ಞಾನವನ್ನೂ ಹೊಂದಿಸಿಕೊಡತಕ್ಕ ಕ್ರೀಡೆಯಾದ ಮೇಲೆ ಕೃಪಾ ಸಮುದ್ರನಾದ ಆ ಶ್ರೀಹರಿಯು ಸ್ವಕೀಯ ಜನವಿಷಯದಲ್ಲಿ ಅತ್ಯಂತವಾಗಿ (ಅಂದರೆ ಇಂದಾ ರ್ಜುನರಂತೆ ವಿಶೇಷರಹಿತವಾದ) ಗುಣಾದಿಗಳಿಂದ ಐಕ್ಯವನ್ನು (ಧನುಸ್ಸನ್ನು ಕೊಟ್ಟಿನಪ್ರಯುಕ್ತ ಐಕ್ಯವು ತೋರಿಸಲ್ಪಟ್ಟಿತು.) ತನ್ನಲ್ಲಿರತಕ್ಕ ಅದೇ ಬಲವನ್ನು ಪ್ರಕಾಶಪಡಿಸುತ್ತಾ ಪರಶು ರಾಮನು ಆದಿಯಲ್ಲಿ ಎರಡು ರೂಪನಾಗಿಯೇ ಆಗಿದ್ದು ತನ್ನ ಸ್ವರೂಪಭೂತನಾದ ಶ್ರೀ ರಾಮ ನಿಂದ ಸರ್ವಜನಪ್ರತ್ಯಕ್ಷವಾಗಿ ಐಕ್ಯವನ್ನು ಹೊಂದಿದನು ॥ ೫೧ ॥

ಮೂ ॥ ಸಮೇತ್ಯ ಚೈಕ್ಯಂ ಜಗತೋಽಭಿಪಶ್ಯತಃ
ಪ್ರಣುದ್ಯ ಶಂಕಾಮಖಿಲಾಂ ಜನಸ್ಯ ॥
ಪ್ರದಾಯ ರಾಮಾಯ ಧನುರ್ವರಂ ತದಾ
ಜಗಾಮ ರಾಮಾನುಮತೋ ರಮಾಪತಿಃ ॥೬೨॥

ಅ ॥ ಸರ್ವಜನರೂ ನೋಡುತ್ತಿರುವಾಗಲೇ ಐಕ್ಯವನ್ನು ಹೊಂದಿ ಎಲ್ಲಾ ಭಕ್ತಜನರ ಪಾದುರ್ಭಾವಾದಿ ಭೇದಶಂಕೆಯನ್ನು ಪರಿಹರಿಸಿ ರಮಾಪತಿಯಾದ ಪರಶುರಾಮನು ರಾಮನಿಗೋಸ್ಕರ ಧನುಃಶ್ರೇಷ್ಠವನ್ನು ಕೊಟ್ಟು ಆಗ ರಾಮನಿಂದ ಸಮ್ಮತನಾಗಿ ಹೋದನು. ॥ ೬೨ ॥

ಮೂ ॥ ತತೋ ನೃಪೋತ್ಯರ್ಥಮುದಾಭಿಪೂರಿತಃ
ಸುತೈಃ ಸಮಸ್ತೈಃ ಸ ಪುರೀಮವಾಪಹ ॥
ರೇಮೇಽಥ ರಾಮೋಽಪಿ ರಮಾಸ್ವರೂಪಯಾ
ತಯೈವ ರಾಜಾತ್ಮಜಯಾ ಹಿ ಸೀತಯಾ ೬೩॥

ಅ ॥ ಆ ಮೇಲೆ ಅತ್ಯಂತವಾದ ಸಂತೋಷದಿಂದ ಪೂರ್ಣನಾದ ದಶರಥರಾಜನು ಎಲ್ಲಾ ಮಕ್ಕಳಿಂದ (ಕೂಡಿಕೊಂಡು) ತನ್ನ ಪಟ್ಟಣವನ್ನು ಹೊಂದಿದನು. ಪಟ್ಟಣಕ್ಕೆ ಪ್ರವೇಶಮಾಡಿದ ಮೇಲೆ ಜನಕರಾಜನ ಮಗಳಾದ ಲಕ್ಷ್ಮೀಸ್ವರೂಪಳಾದ ಆ ಸೀತಾದೇವಿಯಿಂದಲೇ ಕೂಡಿಕೊಂಡು ರಾಮನು ಕ್ರೀಡಿಸಿದನು. ॥ ೬೩ ॥

ಮೂ ॥ ಯಥಾ ಪುರಾ ಶ್ರೀರಮಣಃ ಶ್ರಿಯಾ ತಯಾ
ರತೋ ನಿಶಾಂತಂ ಹಿ ಪಯೋಬ್ಧಿಮಧ್ಯೇ ॥
ತಥಾ ತ್ವಯೋಧ್ಯಾಪುರ(ೀ)ಗೋ ರಘೂತ್ತಮೋ
ಪ್ಯವಾಸ ಕಾಲಂ ಸುಚಿರಂ ರತಸ್ತಯಾ ॥೬೪॥

ಅ ॥ ಹೇಗೆ ಮೊದಲು ಲಕ್ಷ್ಮೀಪತಿಯಾದ ಶ್ರೀ ನಾರಾಯಣನು ಸೀತಾಸ್ವರೂಪಳಾದ ಲಕ್ಷ್ಮೀದೇವಿಯಿಂದ ಸಮುದ್ರದ ಮಧ್ಯದಲ್ಲಿ ಅತ್ಯಂತವಾಗಿ ಕ್ರೀಡಿಸುತ್ತಾ ಇದ್ದಾನೋ, ಹಾಗೆಯೇ ಅಯೋಧ್ಯಾಪಟ್ಟಣದಲ್ಲಿರತಕ್ಕ ಶ್ರೀ ರಾಮನೂ ಕೂಡ ರಮಾಸ್ವರೂಪಳಾದ ಸೀತಾದೇವಿಯಿಂದ ಬಹುಕಾಲವಲ್ಲಿ ಕ್ರೀಡಿಸಿದವನಾಗಿ ವಾಸಮಾಡಿದನು. ॥೬೪॥

ಮೂ ॥ ಇಮಾನಿ ಕರ್ಮಾಣಿ ರಘೂತ್ತಮಸ್ಯ
ಹರೇರ್ವಿಚಿತ್ರಾಣ್ಯಪಿ ನಾದ್ಭುತಾನಿ ॥
ದುರಂತಶಕ್ತೇರಥ ಚಾಸ್ಯ ವೈಭವಂ
ಸ್ವಕೀಯ ಕರ್ತವ್ಯತಯಾನುವರ್ಣ್ಯತೇ ॥೬೫॥

ಅ ॥ ಈ ಯಾವ ಬ್ರಹ್ಮಾದಿಗಳಿಗೆ ಆಶ್ಚರ್ಯಕರಗಳಾದಾಗ್ಯೂ ಕೃತ್ಯಗಳು ರಾಮಾವತಾರನಾದ ಶ್ರೀ ಹರಿಗೆ ಅಪರಿಮಿತಶಕ್ತಿಯಿದ್ದಪ್ರಯುಕ್ತ ಆಶ್ಚರ್ಯಗಳಲ್ಲ. ಯದ್ಯಪಿ ಆಶ್ಚರ್ಯಗಳಲ್ಲ. ಆದಾಗ್ಯೂ ಶ್ರೀ ಹರಿಯ ಗುಣಕರ್ಮಸಾಮರ್ಥ್ಯವು ಉತ್ತಮ ಯಶಸ್ಸುಳ್ಳವನ ಗುಣಕರ್ಮಗಳನ್ನು ವರ್ಣನೆಮಾಡಬೇಕೆನ್ನುವ ವಿಧಿಯಿಂದ ಅನುವಾದವು ಮಾಡಲ್ಪಡುತ್ತದೆ. ॥೬೫॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ (ಕೃತೇ) ವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಶ್ರೀ ರಾಮಚರಿತೇ ಬಾಲಕಾಂಡಕಥಾನಿರೂಪಣಾ
(ರಾಮಾವತಾರೇ ಅಯೋಧ್ಯಾಪ್ರವೇಶೋ) ನಾಮ ಚತುರ್ಥೋಽಧ್ಯಾಯಃ ॥

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀ ರಾಮನ ಚರಿತ್ರೆಯಲ್ಲಿ
ಬಾಲಕಾಂಡಕಥಾನಿರೂಪಣ(ಶ್ರೀ ರಾಮಾವತಾರದಲ್ಲಿ ಅಯೋಧ್ಯಾ ಪ್ರವೇಶ)ವೆನ್ನುವ
ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥



|| ಶ್ರೀಃ ||

# ಐದನೇ ಅಧ್ಯಾಯವು

ಮೂ ||

ಓಂ ಇತ್ಥಂ ವಿಶ್ವೇರೇಸ್ಮಿನ್ನಿ(ನ್ನ)ಖಿಲಜಗದವಸ್ಥಾ ಪ್ಯ ಸೀತಾಸಹಾಯೇ
ಭೂಮಿಷ್ಠೇ ಸರ್ವಲೋಕಾಸ್ತು ತುಷುರನುದಿನಂ ವೃದ್ಧಭಕ್ತ್ಯಾನಿಕಾಂತಂ ||
ರಾಜಾ ರಾಜ್ಯಾಭಿಷೇಕೇ ಪ್ರಕೃತಿಜನವಚೋ ಮಾನಯನ್ನಾತ್ಮನೋರ್ಥ್ಯಂ
ದಧ್ರೇ ತನ್ಮಂಥರಾಯಾಃ ಶ್ರುತಿಪಥಮಗಮದ್ಭೂಮಿಗಾಯಾ ಅಲಕ್ಷ್ಮ್ಯಾಃ ||
||೧||

ಅ || ಎಲ್ಲಾ ಜನರೂ ಪೂರ್ವೋಕ್ತಪ್ರಕಾರವಾಗಿ (ಅಂದರೆ ಹೀಗೆ ರಘುಕುಲದಲ್ಲಿ ಹುಟ್ಟಿ, ತಾಟಕಿಯನ್ನು ಸಂಹರಿಸಿ, ವಿಶ್ವಾಮಿತ್ರಋಷಿಯ ಯಜ್ಞದ ಕಂಟಕವನ್ನು ಪರಿಹರಿಸಿ. ಅಹಲ್ಯಾದೇವಿಯ ಶಾಪವನ್ನು ವಿಮೋಚನೆಮಾಡಿ, ರುದ್ರಧನುಸ್ಸನ್ನು ಮುರಿದು, ಸೀತಾದೇವಿ ಯನ್ನು ಪಾಣಿಗ್ರಹಣಮಾಡಿಕೊಂಡು, ಲೋಕಮಯಾಖ್ಯರಾಕ್ಷಸನನ್ನು ಭಸ್ಮೀಕರಿಸಿ, ತನ್ನದಾದ ವೈಷ್ಣವಧನುಸ್ಸನ್ನು ಪರಶುರಾಮನಿಂದ ಹೊಂದಿ, ಅಯೋಧ್ಯಾಪಟ್ಟದಲ್ಲಿರತಕ್ಕ ಎಲ್ಲಾ ಜನರ ಮನಸ್ಸನ್ನು ರಂಜಿಸುತ್ತಾ ಆವಾಸಮಾಡುತ್ತಿರಲು) ಭೂಮಿಯಲ್ಲಿರತಕ್ಕ ಸೀತಾದೇವಿಗೆ ಸಹಾಯ ಭೂತನಾದ, ಈ ಸರ್ವಜಗತ್ತಿಗೆ ಸ್ವಾಮಿಯಾದ ರಾಮಾಖ್ಯನಾದ ಶ್ರೀ ಹರಿಯಲ್ಲಿ ಪ್ರತಿನಿತ್ಯವೂ ಅತ್ಯಂತವಾಗಿ ವೃದ್ಧರಲ್ಲಿ ಭಕ್ತಿನಿಮಿತ್ತವಾಗಿ ಜಗತ್ಕಂಟಕರಾದ ರಾಕ್ಷಸರನ್ನು ಸಂಹರಿಸಿ ಜಗತ್ತಿನ ಉದ್ಧಾರವನ್ನು ಮಾಡಿ ಸಂತೋಷಪಟ್ಟರು. ದಶರಥರಾಜನು ತನಗೆ ಅಪೇಕ್ಷಣೀಯವಾದ ಶ್ರೀ ರಾಮನ ಪಟ್ಟಾಭಿಷೇಕ ವಿಷಯದಲ್ಲಿ ಮಂತ್ರಿಗಳೂ ಇತರ ಜನರೂ ಕೂಡ ಹೇಳುವ ಮಾತನ್ನು ಬಹುಮಾನಿಸಿದವನಾಗಿ ಶ್ರೀ ರಾಮನಿಗೆ ಪಟ್ಟಾಭಿಷೇಕ ಮಾಡಲು ನಿರ್ಧರಿಸಿದನು. ಆ ಮಾತು ಪೂರ್ವ ಜನ್ಮದಲ್ಲಿ ದಾರಿದ್ರ್ಯಕ್ಕೆ ಅಭಿಮಾನಿಯಾದ, ಅಲಕ್ಷ್ಮೀಸ್ವರೂಪಳಾದ, ಜ್ಯೇಷ್ಠಾನಾಮಕಳಾದ, ಕಲಿಭಾರ್ಯೆಯಾದ, ಭೂಮಿಯನ್ನು ಹೊಂದಿರತಕ್ಕ ಕೈಕೇಯಿಯ ದಾಸಿಯಾದ ಮಂಥರೆಯ ಶ್ರವಣೇಂದ್ರಿಯದ ಮಾರ್ಗವನ್ನು ಹೊಂದಿತು. ಅಂದರೆ ಆ ಮಾತನ್ನು ಅವಳು ಕೇಳಿದಳು ||೧||

ಹಾಗಾದರೆ ಅಸುರಶ್ರೇಷ್ಠನಾದ ಕಲಿಯ ಹೆಂಡತಿಗೆ ದಾಸೀತ್ವವು ಏಕೆ ಪ್ರಾಪ್ತವಾಯಿ ತೆಂದರೆ—ಅಥವಾ ಅಲಕ್ಷ್ಮೀಯೆಂದರೆ ಯಾರು? ಏಕೆ ಭೂಮಿಗೆ ಬಂದಳು ಎಂದರೆ—

ಮೂ ||

ಪೂರ್ವಂ ಕ್ಷೀರಾಬ್ಧಿಜಾತಾ ಕಥಮಪಿ ತಪಸೈವಾಪ್ಸರಸ್ತ್ವಂ ಪ್ರಯಾತಾ
ತಾಂ ನೇತುಂ ತತ್ರ ಮೋಹಂ ಕಮಲಜನಿರುವಾಚಾಲು ರಾಮಾಭಿಷೇಕಂ ||
ಭೂತ್ವಾ ದಾಸೀ ವಿಲುಂಪ ಸ್ವಗತಿಮಪಿ ತತಃ ಕರ್ಮಣಾ ಪ್ರಾಪ್ಸ್ಯಸೇತ್ಥಂ
ಸೇತ್ಯುಕ್ತಾ ಮಂಥರಾಸೀತ್ತದನು ಕೃತವತ್ಯೇವ ಚೈತತ್ಪ್ರಕರ್ಮ ||೨||

ಅ || ಮಂಥರೆಯು ದೇವಾಸುರರು ಸಮುದ್ರವನ್ನು ಮಥಿಸುವ ಕಾಲದಲ್ಲಿ ಕ್ಷೀರ ಸಮುದ್ರದಿಂದ ಹುಟ್ಟಿದಳು. ಆ ಮೇಲೆ ಯಾವುದೋ ಪ್ರಯಾಸದಿಂದ ತಪಸ್ಸಿನಿಂದಲೇ (ಸ್ವರೂಪ ಯೋಗ್ಯತೆಯಿಂದ ಅಲ್ಲ.) ಅಪ್ಸರಃ ಸ್ತ್ರೀತ್ವವನ್ನು ಹೊಂದಿದಳು. (ಯಾವ ಕಾರಣದಿಂದ ಹೀಗೆ

ಸ್ವರೂಪದಿಂದ ದುಷ್ಟಳೋ) ಆ ಕಾರಣದಿಂದ ಲಕ್ಷ್ಮಿಗೆ ವಿರೋಧಿನಿಯಾದ ಜ್ಯೇಷ್ಠಾನಾಮಕಳಾದ ಕಲಿಭಾರ್ಯೆಯನ್ನು ಶೀಘ್ರದಲ್ಲಿ ಅಂಧಂತಮಸ್ಸನ್ನು ಕಳುಹಿಸಿಕೊಡುವುದಕ್ಕಾಗಿ ಕಮಲದಿಂದ ಹುಟ್ಟಿದ ಬ್ರಹ್ಮನು ನೀನು ಕೈಕೇಯಿಯ ದಾಸಿಯಾಗಿ ಶ್ರೀ ರಾಮನ ಪಟ್ಟಾಭಿಷೇಕವನ್ನು ಶೀಘ್ರದಲ್ಲಿ ನಾಶಪಡಿಸು. ನಿನಗೆ ಯೋಗ್ಯವಾದ ಗತಿಯನ್ನೂ (ಅಂಧಂತಮಸ್ಸನ್ನು) ರಾಮರಾಜ್ಯಾಭಿಷೇಕವಿನಾಶನರೂಪವಾದ ಕರ್ಮದಿಂದ ಹೊಂದುವಿ. ಈ ಪ್ರಕಾರ ಹೇಳಿದನು. (ಅಂದರೆ ಶಾಪವನ್ನು ಕೊಟ್ಟನು. ಆದಕಾರಣ ಅವಳಿಗೆ ಯೋಗ್ಯವಾದುದು ಅಂಧಂತಮಸ್ಸೇ). ಆ ಅಲಕ್ಷ್ಮಿಯು ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟವಳಾಗಿ ಭೂಮಿಯಲ್ಲಿ ಮಂಥರಾನಾಮಕಳಾದ ದಾಸಿಯಾದಳು. ಆ ಜನ್ಮವುಗಿದ ಮೇಲೆಯೇ ರಾಮನಿಗೆ ರಾಜ್ಯಾಭಿಷೇಕನಾಶನರೂಪವಾದ ಕುತ್ಸಿತ ಕರ್ಮವನ್ನು ಮಾಡಿರುತ್ತಾಳೆ.

**ವಿಶೇಷಾಂಶ** – (1) 'ಅಪ್ಸರಃ' ಸ್ತ್ರೀಜನ್ಮದಲ್ಲಿಯೂ ತಮ್ಮ ಸ್ವಭಾವಭೂತಗಳಾದ ದುಃಶೀಲಾದಿಗಳನ್ನು ಬಿಡದಿರುವುದರಿಂದ 'ಕಥಮಪ್ಯಪ್ಸರಸ್ತ್ವಂ' ಎಂದು ಹೇಳಿದ್ದು (2) ಮಂಥರೆಯ ಕುತ್ಸಿತಕರ್ಮಗಳ ಕೃತಿಯಿಂದ ತನ್ನ ಪುಣ್ಯಗಳ ಲೋಪವಾಗುತ್ತದೆಂದು ಸೂಚಿಸುವುದಕ್ಕಾಗಿ ಒಂದು ವರ್ಣಕ್ಕೆ ಲೋಪವನ್ನು ಮಾಡಿರುತ್ತಾರೆ. (3) **'ನ ನಾ ಏಕೆ ನಾಕ್ಷರೇಣ ಛಂದಾಂಸಿ ವಿಯಂತಿ'** ಎನ್ನುವ ವಚನದಿಶೆಯಿಂದ ತಾನು ಮಾಡಿದ ಗ್ರಂಥಕ್ಕೆ ಛಂದಃಸಾಮ್ಯವನ್ನು ತೋರಿಸುವುದಕ್ಕಾಗಿ ಒಂದು ಅಕ್ಷರವನ್ನು ಲೋಪಮಾಡಿದ್ದಾರೆ. (4)ಅಥವಾ ಹದಿನಾಲ್ಕು ವರ್ಷವಾದ ಮೇಲೆ ಶ್ರೀ ರಾಮನಿಗೆ ಪುನಃ ರಾಜ್ಯವು ಪ್ರಾಪ್ತಿಯಾಗುವುದರಿಂದ ಮಂಥರೆಯು ಮಾಡಿದ ಕುತ್ಸಿತ ಕರ್ಮವು ನ್ಯೂನವಾಗಿದೆ ಎಂದು ಸೂಚಿಸುವುದಕ್ಕಾಗಿ ಒಂದು ವರ್ಣಕ್ಕೆ ಲೋಪಮಾಡಿರುತ್ತಾರೆ. ಇಲ್ಲದಿದ್ದರೆ 'ತದನು ಚ ಕೃತವತ್ಯೇವ' ಎಂದೇ ಹೇಳುತ್ತಿದ್ದರು. ॥೨॥

ಆ ಕುತ್ಸಿತಕರ್ಮಕರಣಪ್ರಕಾರವನ್ನು ಹೇಳುತ್ತಾರೆ—

**ಮೂ** ॥

ತದ್ವಾಕ್ಯಾತ್ಕೈಕಯೀಸಾ ಪತಿಗವರಬಲಾದಾಜಹಾರ್ಯೈನ ರಾಜ್ಯಂ
ರಾಮಸ್ತದ್ಗೌರವೇಣ ತ್ರಿದಶಮುನಿಕೃತೇರಣ್ಯಮೇವಾವಿವೇಶ ॥
ಸೀತಾಯುಕ್ತೋಽನುಜೇನ ಪ್ರತಿದಿನಸವಿವೃದ್ಧೋರುಭಕ್ತ್ಯಾ ಸಮೇತಃ
ಸಂಸ್ಥಾಪ್ಯಾಶೇಷಜಂತೂನ್ಸ್ವವಿರಹಶುಚಾ ತ್ಯಕ್ತಸರ್ವೇಷಣಾರ್ಥಾನ್ ॥
॥೩॥

ಅ ॥ ಆ ಮಂಥರೆಯ ವಾಕ್ಯದಿಶೆಯಿಂದ (ಅಂದರೆ, ಭರತನಿಗೆ ರಾಜ್ಯವನ್ನೂ, ರಾಮನಿಗೆ ವನವಾಸವನ್ನೂ ಕೂಡ ಬೇಡಿಕೊಳ್ಳು ಎನ್ನುವ ವಾಕ್ಯದಿಶೆಯಿಂದ) ಭರತನ ತಾಯಿಯಾದ ಕೈಕೇಯಿಯು ಗಂಡನಲ್ಲಿರತಕ್ಕ ವರದ ಸಾಮರ್ಥ್ಯದಿಶೆಯಿಂದ (ಭರತನಿಗೆ ರಾಜ್ಯವನ್ನೂ ಶ್ರೀ ರಾಮನಿಗೆ ಅರಣ್ಯವಾಸವನ್ನೂ ಬೇಡಿದಳು). (ರಾಮನಿಗೋಸ್ಕರ ಕೊಡಲ್ಪಡತಕ್ಕ) ರಾಜ್ಯವನ್ನು (ಭರತನಿಗೋಸ್ಕರ) ಅಪಹರಿಸಿದಳು. ಶ್ರೀ ರಾಮನು ಆ ತಂದೆತಾಯಿಗಳಲ್ಲಿ ಗೌರವನಿಮಿತ್ತದಿಂದ (ಇದು ನಿಮಿತ್ತಮಾತ್ರವು, ಅರಣ್ಯವನ್ನು ಪ್ರವೇಶಮಾಡಲಿಕ್ಕೆ ಮುಖ್ಯ ಪ್ರಯೋಜನವು ಬೇರೆಯೇ ಇದೆ ಎನ್ನುತ್ತಾರೆ), ದೇವತೆಗಳು ಮತ್ತು ಮುನಿಗಳು ಇವರಿಗೋಸ್ಕರ (ಅಂದರೆ ಅವರ ಕಾರ್ಯವನ್ನು ಸಾಧಿಸುವದಕ್ಕಾಗಿಯೇ) ಸೀತಾದೇವಿಯಿಂದ ಕೂಡಿದವನಾಗಿ ಪ್ರತಿದಿವಸದಲ್ಲಿಯೂ ಚೆನ್ನಾಗಿ ತಾರತಮ್ಯಜ್ಞಾನದಿಂದ ವಿಶೇಷವಾಗಿ ಅಭಿವೃದ್ಧವಾದ ಸರ್ವೋತ್ಕೃಷ್ಟವಾದ

ಶ್ರೀ ಹರಿಯು ಭಕ್ತಿಯಿಂದ ಕೂಡಿದ ತಮ್ಮನಾದ ಲಕ್ಷ್ಮಣನಿಂದ ಕೂಡಿದವನಾಗಿ(ಅಥವಾ ಶ್ವೇತ ದ್ವೀಪದಲ್ಲಿ ತನ್ನ ದೃಷ್ಟಿಗೋಚರವಾದ ಭಗವನ್ಮೂರ್ತಿಗೆ ಶಯ್ಯಾಸ್ಥಾನನಾಗಿ ಯಾವಾಗಲೂ ಸೇವಿಸುವಾಗ) ಚೆನ್ನಾಗಿ ಅಭಿವೃದ್ಧವಾದ ಉತ್ಕೃಷ್ಟವಾದ ಭಕ್ತಿರೂಪಕಾರಣದಿಂದ ತನಗೆ ಅನುಕೂಲನಾಗಿಯೂ ತನ್ನ ಅನಂತರದಲ್ಲಿಯೂ ಹುಟ್ಟಿರತಕ್ಕ ಲಕ್ಷ್ಮಣನಿಂದ ಕೂಡಿದವನಾಗಿ ಪ್ರತಿನಿತ್ಯವೂ ಚೆನ್ನಾಗಿ ಅಭಿವೃದ್ಧವಾದ ಉತ್ಕೃಷ್ಟವಾದ ಭಕ್ತಿಯಿಂದ ತನ್ನ ವಿಯೋಗದಿಂದುಂಟಾದ ಶೋಕದಿಂದ ಬಿಡಲ್ಪಟ್ಟ ಎಲ್ಲಾ ಪ್ರಕಾರದಿಂದಲೂ ಇಚ್ಛೆಯುಳ್ಳ, ವಿಷಯಗಳುಳ್ಳ ಆ ಎಲ್ಲಾ ಜಂತುಗಳನ್ನು (ಅಂದರೆ ಒಟ್ಟಿಗೆ ಬಂದ ಪಶುಪಕ್ಷಿ ಮೊದಲಾದ ಎಲ್ಲಾ ಪ್ರಾಣಿಗಳನ್ನು) ಸ್ಥಾಪಿಸಿ ಅರಣ್ಯವನ್ನೇ ಪ್ರವೇಶಮಾಡಿದನು.

**ವಿಶೇಷಾಂಶ** — ದಶರಥರಾಜನು ದೇವತೆಗಳಿಗೆ ಸಹಾಯಕನಾಗಿ ದೈತ್ಯರ ಹತ್ತಿರ ಯುದ್ಧ ಮಾಡುವ ಸಮಯದಲ್ಲಿ ರಥದ ಚಕ್ರದ ಕೀಲು ಬಿದ್ದುಹೋಗುತ್ತಿರಲು ಆ ಕೀಲಿನ ಸ್ಥಾನಕ್ಕೆ ತನ್ನ ಕೈಯನ್ನು ಕೈಕೇಯಿಯು ಕೊಡೋಣವರಿಂದ ಪ್ರೀತನಾದ ದಶರಥರಾಜನು ನಿನ್ನ ಇಷ್ಟವನ್ನು ಕೊಡುತ್ತೇನೆನ್ನುವ ವರವನ್ನು ಕೊಟ್ಟನು, ಎನ್ನುವ ರಾಮಾಯಣ ಕಥೆಯನ್ನು ಸೂಚಿಸುವುದಕ್ಕಾಗಿ 'ಪತಿಗವರಬಲಾತ್' ಎಂದು ಹೇಳಿದ್ದು. ॥೩॥

ಅಶೇಷಜಂತುಗಳನ್ನು ಬಿಡಿಸಿ ಹೇಳುತ್ತಾರೆ—

ಮೂ ॥ ವೃಕ್ಷಾನ್ವೃಕ್ಷ್ಯೇಭ (ಶ್ವಾದಿ) ಕೀಟಾನ್ನಿತರನುಥ
ಸಖೀನ್ಮಾತೃಪೂರ್ವಾನ್ವಿಸೃಜ್ಯ
ಪ್ರೋತ್ಥಾಂ ಗಂಗಾಂ ಸ್ವಪಾದಾತ್ಸ್ವರ ಇವ ಚ
ಗುಹೇನಾರ್ಚಿತಃ ಸೋಽಥ ತೀರ್ತ್ವಾ ।
ದೇವಾರ್ಚ್ಯಸ್ಯಾಪಿ ಪುತ್ರಾದ್ವೃಷಿಗಣಸಹಿತಾತ್
ಪ್ರಾಪ್ಯ ಪೂಜಾಂ ಪ್ರಯಾತಃ
ಶೈಲೇಶಂ ಚಿತ್ರಕೂಟಂ
ಕತಿಪಯದಿವಸಾ (ನಾ) ನ್ಯತ್ರ ಮೋದನ್ನುವಾಸ ॥೪॥

ಅ ॥ ವೃಕ್ಷ-ಜೀವರನ್ನೂ, ಪಕ್ಷಿಗಳೂ, ಆನೆಗಳೂ, ಕೀಟಗಳೂ, ಇವುಗಳನ್ನೂ, ತಂದೆಯನ್ನೂ, ಆ ಮೇಲೆ ಸಖಿಯರನ್ನೂ, ತಾಯಿಯೇ ಮೊದಲಾದವರನ್ನೂ ಬಿಟ್ಟು (ಅರಣ್ಯವನ್ನು ಪ್ರವೇಶಮಾಡಿದನು.) ಅಶೇಷಜಂತುಗಳನ್ನು ವಾಪಸು ಕಳುಹಿಸಿದ ಮೇಲೆ ಸ್ಕಂದನಿಂದ (ಷಣ್ಮುಖನಿಂದ) ಗುರುವೆನಿಸಿದ ಗುಹನಾಮಕ ನಾವಿಕನಿಂದಲೂ ಪೂಜಿಸಿಕೊಳ್ಳಲ್ಪಟ್ಟ ಶ್ರೀರಾಮನು ತನ್ನ ಪಾದನಖದಿಂದ ಹುಟ್ಟಿದ ಭಾಗೀರಥಿಯನ್ನು ಗುಹನಾಮಕ ನಾವಿಕನಿಂದ (ಪೂಜೆಯನ್ನು ಸ್ವೀಕರಿಸಿ) ದಾಟಿಕೊಂಡು ಆ ಮೇಲೆ ಋಷಿಗಳ ಸಮೂಹದಿಂದ ಕೂಡಿದ, ದೇವತೆಗಳಿಗೆ ಪೂಜ್ಯನಾದ ಬೃಹಸ್ಪತಿಯ ಮಗನಾದ ಭರದ್ವಾಜನಿಂದಲೂ, ಪೂಜೆಯನ್ನು ಗಂಗಾ ಯಮುನಾ ಸಂಗಮದಲ್ಲಿ ಹೊಂದಿ (ಪ್ರಯಾಗ ಕ್ಷೇತ್ರಕ್ಕೆ ಹೋಗಿ ಪ್ರಯಾಗ ಕ್ಷೇತ್ರದಿಂದ ನೈಋತ್ಯದಿಕ್ಕಿನಲ್ಲಿರತಕ್ಕ ಚಿತ್ರಕೂಟವೆಂಬ ಪರ್ವತ ಶ್ರೇಷ್ಠವನ್ನು ಹೊಂದಿದವನಾಗಿ, ಈ ಚಿತ್ರಕೂಟಪರ್ವತದಲ್ಲಿ ಕೆಲವು ದಿವಸಗಳಲ್ಲಿ ಸಂತೋಷಪಡುತ್ತಾ ಆವಾಸಮಾಡಿದನು.

**ವಿಶೇಷಾಂಶ— ಗುಹೋ ನಾಮ ನಿಷಾದಾನಾಂ ರಾಮಸ್ಯ ದಯಿತಃ ಸಖಾ । ಧಾರ್ಮಿಕಸ್ತಸ್ಯ ಬಂಧುಶ್ಚ ಗುಹೋ ನಾಮ ಮಹಾಬಲಃ ॥** ಎಂದು ರಾಮಾಯಣ ವಚನ ದಿಂದಲೂ, **ಗಚ್ಛನ್ನಾಪ ತ್ರಿಪಥಗಾಂ ಗಂಗಾಂ ರಾಮಸ್ತ್ರಯಿಧಾಮಿನ । ಪ್ರಣನಾಮ ಪ್ರಭುಂ ಪ್ರಾಪ್ಯ ನಿಷಾದಾಧಿಪತಿರ್ಗಹಃ ।** ಎಂದು ಸಂಗ್ರಹ ರಾಮಾಯಣ ವಚನದಿಂದಲೂ ಈ ಅರ್ಥವು ತಿಳಿಯತಕ್ಕದು ॥೪॥

**ಮೂ ॥ ಏತಸ್ಮಿನ್ನೇವ ಕಾಲೇ ದಶರಥನೃಪತಿಃ ಸ್ವರ್ಗತೋಽಭೂದ್ವಿಯೋಗಾ**
**ದ್ರಾಮಸ್ಯೈವಾಥ ಪುತ್ರೌ ವಿಧಿಸುತಸಹಿತೈರ್ಮಂತ್ರಿಭಿಃ ಕೇಕಯೇಭ್ಯಃ ॥**
**ಆನೀತೌ ತಸ್ಯ ಕೃತ್ವಾ ಶ್ರುತಿಗಣವಿಹಿತ ಪ್ರೇತಕಾರ್ಯಾಣಿ ಸದ್ಯಃ**
**ಶೋಚಂತೌ ರಾಮಮಾರ್ಗಂ ಪುರಜನಸಹಿತೌ ಜಗ್ಮತುರ್ಮಾತೃಭಿಶ್ಚ ॥೫॥**

ಅ ॥ ಚಿತ್ರಕೂಟಪರ್ವತದಲ್ಲಿ ಆವಾಸಮಾಡಿಕೊಂಡು ಇರುವ ಕಾಲದಲ್ಲಿಯೇ ದಶರಥ ರಾಜನು ಶ್ರೀ ರಾಮನ ವಿಯೋಗದಿಂದಲೇ ಪರಲೋಕವನ್ನು ಹೊಂದಿದವನು ಆದನು. (ಅಂದರೆ ಮೃತನಾದನು.) ಮರಣಾನಂತರದಲ್ಲಿ ವಸಿಷ್ಠನಿಂದ ಸಹಿತರಾದ ಭರತ ಶತ್ರುಘ್ನರು ಮಂತ್ರಿ ಗಳಿಂದ ಕೇಕಯ ದೇಶಗಳ ದೆಶೆಯಿಂದ (ಅಯೋಧ್ಯಾ ಪಟ್ಟಣಕ್ಕೆ) ತರಲ್ಪಟ್ಟರು. (ಬ್ರಾಹ್ಮಣ ಶಾಪದರೆಯಿಂದ ದಶರಥರಾಜನಿಗೆ ಮಕ್ಕಳು ಹತ್ತಿರ ಇಲ್ಲದಿರುವಾಗಲೇ ಮರಣವಾಯಿತು.) ಆ ತಂದೆಗೆ ಶ್ರುತಿಗಳ ಸಮೂಹಗಳಲ್ಲಿ ವಿಹಿತಗಳಾದ ಪ್ರೇತಸಂಸ್ಕಾರ ಕರ್ಮಗಳನ್ನು ಮಾಡಿ ಪ್ರೇತಕಾರ್ಯಸಮಾಪ್ತ್ಯನಂತರದಲ್ಲಿಯೇ ದುಃಖಿತರಾದ ಭರತಶತ್ರುಘ್ನರು ಪಟ್ಟಣದಲ್ಲಿರತಕ್ಕ ಜನರಿಂದ ಕೂಡಿದವರಾಗಿ ತಾಯಂದಿರಿಂದಲೂ ಕೂಡಿ ಶ್ರೀರಾಮನ ಮಾರ್ಗವನ್ನೇ ಹೊಂದಿದರು.॥

**ವಿಶೇಷಾಂಶ—** ಕೈಕೇಯಿಯ ಮೇಲೆ ಕೋಪವಿದ್ದ ಪ್ರಯುಕ್ತ ಒಟ್ಟಿಗೆ ಬಾ ಎಂದು ಹೇಳ ದೇನೇ ಭರತನು ಬಂದಿದ್ದಾನೆ. ಎಂದು ಸೂಚಿಸುವುದಕ್ಕಾಗಿ 'ಮಾತೃಭಿಶ್ಚ' ಎಂದೇ ಹೇಳಿದ್ದು ॥೫॥

**ಮೂ ॥ ಧಿಕ್ಕುರ್ವಂತೌ ನಿತಾಂತಂ ಸಕಲದುರಿತಗಾಂ**
**ಮಂಥರಾಂ ಕೈಕಯೀಂ ಚ**
**ಪ್ರಾಪೌ ರಾಮಸ್ಯ ಪಾದೌ ಮುನಿಗಣಸಹಿತೌ**
**ತತ್ರ ಚೋವಾಚ ನತ್ವಾ ॥**
**ರಾಮಂ ರಾಜೀವನೇತ್ರಂ ಭರತ ಇಹ ಪುನಃ**
**ಪ್ರೀತಯೇಽಸ್ಮಾಕಮಾಶ**
**ಪ್ರಾಪ್ಯಾಶು ಸ್ವಾಮಯೋಧ್ಯಾಂ ಅನರಜಸಹಿತಃ**
**ಪಾಲಯೇನಾಂ ಧರಿತ್ರೀಂ ॥೬॥**

ಅ ॥ ವಿಷ್ಣು-ವೈಷ್ಣವದ್ವೇಷಾದಿ ಸರ್ವ ಪಾಪಗಳಿಗೆ ಆಶ್ರಯಭೂತಳಾದ ಮಂಥರೆ ಯನ್ನೂ ಅತ್ಯಂತವಾಗಿ ಧಿಕ್ಕಾರಮಾಡತಕ್ಕ, ಸರ್ವದೋಷರೂಪಳಾದ ನಿಕೃತ್ಯಾಖ್ಯ ಅಸುರಿಗೆ ಆಶ್ರಯಿಭೂತಳಾದ ಕೈಕೇಯಿಯನ್ನೂ ಕೂಡ ತಿರಸ್ಕಾರ ಮಾಡತಕ್ಕ ಭರತ ಶತ್ರುಘ್ನರು ಶ್ರೀ ರಾಮನ ಪಾದಗಳನ್ನು ಹೊಂದಿದರು. ಚಿತ್ರಕೂಟಪರ್ವತದಲ್ಲಿ ಭರತನು ಮುನಿಗಳ

ಸಮೂಹಗಳಿಂದ ಕೂಡಿದವನಾಗಿ ಕಮಲದಳದಂತೆ ಕಣ್ಣುಗಳುಳ್ಳ ಶ್ರೀ ರಾಮನನ್ನು ನಮಸ್ಕರಿಸಿ ಹೇಳಿದನು. ತಮ್ಮನಿಂದ ಕೂಡಿದ ಸ್ವಾಮಿಯಾದ ಶ್ರೀ ರಾಮನೇ! ಈ ಅರಣ್ಯದಿಂದ ಪುನಃ ಹಿಂತಿರುಗಿ, ನಿನ್ನದಾದ ಅಯೋಧ್ಯಾ ಪಟ್ಟಣವನ್ನು ಶೀಘ್ರದಲ್ಲಿ (ವಿಚಾರ ಮಾಡದೆ) ಹೊಂದಿ, ನಮ್ಮ ಪ್ರೀತಿಗಾಗಿ ಈ ಭೂಮಿಯನ್ನು ರಕ್ಷಿಸು ॥೬॥

ಮೂ ॥

**ಇತ್ಯುಕ್ತಃ ಕರ್ತುಮೀಶಃ ಸಕಲಸುರಗಣಾಪ್ಯಾಯನಂ ರಾಮದೇವಃ**
**ಸತ್ಯಾಂ ಕರ್ತುಂ ಚ ವಾಣೀಮವದದತಿತರಾಂ ನೇತಿ ಸದ್ಭಕ್ತಿನಮ್ರಂ ॥**
**ಭೂಯೋ ಭೂಯೋಽರ್ಥಯಂತಂ ದ್ವಿಗುಣಿತಶರದಾಂ ಸಪ್ತಕೇತ್ವಭ್ಯತೀತೇ**
**ಕರ್ತ್ರೈ ತತ್ತೆ ವಚೋಽಹಂ ಸ ದೃಢಮೃತಮಿದಂ ಮೇ ವಚೋ ನಾತ್ರ ಶಂಕಾ ॥೭॥**

ಅ ॥ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಶ್ರೀ ರಾಮಚಂದ್ರನ ಎಲ್ಲಾ ದೇವತೆಗಳ ಸಮೂಹಕ್ಕೆ ರಾಕ್ಷಸರಿಂದ ಉಂಟಾಗತಕ್ಕ ಬಾಧೆಯನ್ನು ನಿವಾರಣೆ ಮಾಡಿ, ದೇವತೆಗಳನ್ನು ರಕ್ಷಿಸುವುದಕ್ಕೆ ಸಮರ್ಥನಾದ ಪ್ರಯುಕ್ತ (ದೇವತೆಗಳನ್ನು ಕುರಿತು ರಾಕ್ಷಸರನ್ನು ಸಂಹರಿಸುತ್ತೇನೆನ್ನುವ ತನ್ನ) ಮಾತನ್ನು ಸತ್ಯವನ್ನಾಗಿ ಮಾಡಲಿಕ್ಕೆ ಅಥವಾ ದೇವತೆಗಳನ್ನು ರಕ್ಷಣೆ ಮಾಡುವುದಕ್ಕಾಗಿ ವನವಾಸವನ್ನು ಮಾಡುತ್ತೇನೆನ್ನುವ ತನ್ನ ಪ್ರತಿಜ್ಞಾರೂಪವಾದ ಮಾತನ್ನು ಸತ್ಯವನ್ನಾಗಿ ಮಾಡಲಿಕ್ಕೆ ಅತ್ಯಂತವಾಗಿ ಸಮೀಚೀನವಾದ ಭಕ್ತಿಯಿಂದ ನಮ್ರಭೂತನಾದ ಭರತನನ್ನು ಕುರಿತು ಅಯೋಧ್ಯಾ ಪಟ್ಟಣಕ್ಕೆ ಬರೋಣವು ಆಗಲಾರದು ಎಂದು ಹೇಳಿದನು. ಮತ್ತು ಮತ್ತೂ ಪ್ರಾರ್ಥಿಸತಕ್ಕ ಭರತನನ್ನು ಕುರಿತು ಹೇಳಿದನು. ಏಳೆರಡು ಸಂವತ್ಸರಗಳು (ಅಂದರೆ ಹದಿನಾಲ್ಕು ಸಂವತ್ಸರಗಳು) ದಾಟಲು ನಾನು ನಿನ್ನ ಈ ಮಾತನ್ನು (ಅಂದರೆ ಪಟ್ಟಣಕ್ಕೆ ಬರಬೇಕೆನ್ನುವ ಪ್ರಾರ್ಥನಾರೂಪವಾದ ಮಾತನ್ನು ನಡೆಯಿಸತಕ್ಕವನು ಆಗುತ್ತೇನೆ. ಎನ್ನುವ ನನ್ನ ಮಾತು ಅತಿ ದೃಢ ಹೇಗೆ ಆದೀತೋ ಹಾಗೆ ನಿಶ್ಚಿತವಾಗಿದೆ. ಈ ವಚನವು ಸತ್ಯವು ಎನ್ನುವ ವಿಷಯದಲ್ಲಿ ನಿನಗೆ ಸಂಶಯವು ಬೇಡ ॥೭॥

ಮೂ ॥

**ಶ್ರುತ್ವೈತದ್ರಾಮವಾಕ್ಯಂ ಹುತಭುಜಿ ಪತನೇ ಸ ಪ್ರತಿಜ್ಞಾಂ ಚ ಕೃತ್ವಾ**
**ರಾಮೋಕ್ತಸ್ಯಾನ್ಯಥಾತ್ವೇ ನ ತ ಪುರಮಭಿವೇಕ್ಷ್ಯೇಽಹಮಿತ್ಯೇವ ತಾವತ್ ॥**
**ಕೃತ್ವಾನ್ಯಾಂ ಸಪ್ರತಿಜ್ಞಾಮವಸದಥ ಬಹಿರ್ಗ್ರಾಮಕೇ ನಂದಿನಾಮ್ನಿ**
**ಶ್ರೀಶಸ್ಯೈನಾಸ್ಯ ಕೃತ್ವಾ ಶಿರಸಿ ಪರಮಕಂ ಸೌರಟಂ ಪಾದಪೀಠಂ ॥೮॥**

ಅ ॥ ಆ ಭರತನು ಪೂರ್ವೋಕ್ತವಾದ ರಾಮನ ವಾಕ್ಯವನ್ನು ಕೇಳಿ, ರಾಮನು ಹೇಳಿದ ಮಾತಿಗೆ ವೈಪರೀತ್ಯವಾದರೆ ಅಗ್ನಿಪ್ರವೇಶವಿಷಯದಲ್ಲಿ ಪ್ರತಿಜ್ಞೆಯನ್ನು ಮಾಡಿ, ಶ್ರೀ ರಾಮನ. ಅಯೋಧ್ಯಾಪಟ್ಟಣಕ್ಕೆ ಬರುವ ತನಕ ನಾನು ಅಯೋಧ್ಯಾಪಟ್ಟಣವನ್ನು ಸರ್ವಥಾ ಪ್ರವೇಶ ಮಾಡಲಾರನು ಎಂಬೀ ಇತರವಾದ 'ಅಧಃ ಶಯನ, ಬ್ರಹ್ಮಚರ್ಯ, ಸಕೃದ್ಭೋಜನ, ಜಟಾ ವಲ್ಕಲ ಧಾರಣ' ಮೊದಲಾದ ಪ್ರತಿಜ್ಞೆಗಳಿಂದ ಸಹಿತವಾದ ಪ್ರತಿಜ್ಞೆಯನ್ನು ಮಾಡಿ, ಎರಡು ಪ್ರತಿಜ್ಞೆಗಳನ್ನು ಮಾಡಿದ ಮೇಲೆ ಶ್ರೀಪತಿಯಾದ ಶ್ರೀ ರಾಮನ ಉತ್ತಮವಾದ, ಸುವರ್ಣಾತ್ಮಕ

ವಾದ ಎರಡು ಪಾದುಕೆಗಳನ್ನು ಶಿರಸ್ಸಿನಲ್ಲಿ ಇಟ್ಟುಕೊಂಡು ಅಯೋಧ್ಯಾಪಟ್ಟಣದ ಹೊರಗೆ ಇರತಕ್ಕ (ಅಭೀರಾದಿ ನೀಚಜನರಿಂದ ಸೇವಿಸಿಕೊಳ್ಳಲ್ಪಡುವ ಕುತ್ಸಿತವಾದ) ನಂದಿ ಎನ್ನುವ ಗ್ರಾಮದಲ್ಲಿ ಆವಾಸಮಾಡಿದನು ॥೮॥

ಮೂ ॥ ಸಮಸ್ತಪೌರಾನುಗತೇಽನುಜೇ ಗತೇ
ಸ ಚಿತ್ರಕೂಟೇ ಭಗವಾನುವಾಸ ಹ ॥
ಅಥಾಜಗಾಮೇಂದ್ರಸುತೋಽಪಿ ವಾಯಸೋ
ಮಹಾಸುರೇಣಾತ್ಮಗತೇನ ಚೋದಿತಃ ॥೯

ಅ ॥ ಅಯೋಧ್ಯಾಪಟ್ಟಣದಲ್ಲಿರತಕ್ಕ ಎಲ್ಲಾ ಜನರಿಂದಲೂ ಹಿಂಬಾಲಿಸಿಕೊಳ್ಳಲ್ಪಟ್ಟ ತಮ್ಮನಾದ ಭರತನು ಹೋಗುತ್ತಿರಲು, ಆ ಶ್ರೀರಾಮನು ಚಿತ್ರಕೂಟ ಪರ್ವತದಲ್ಲಿ ಆವಾಸ ಮಾಡಿದನು. ಆ ಮೇಲೆ ತನ್ನಲ್ಲಿ ಪ್ರವಿಷ್ಟನಾದ ಶ್ರೇಷ್ಠ ಅಸುರನಿಂದ ಪ್ರೇರಿಸಿಕೊಳ್ಳಲ್ಪಟ್ಟ ಇಂದ್ರನ ಪುತ್ರನಾದ ಜಯಂತನು ಕಾಗೆಯಾಗಿ ಬಂದನು.

**ವಿಶೇಷಾಂಶ** — (1) ಇಂದ್ರನ ಪುತ್ರನಾದ ಜಯಂತನಿಗೆ ಕಾಗೆಯ ಜನ್ಮವು ನಿಂದಿತವು ಎಂದು ಸೂಚಿಸುವುದಕ್ಕಾಗಿ ಅಪಿ ಪದವು. (2) ಪಕ್ಷಿಗಳಲ್ಲಿ ಬಹುಕಾಲ ಬದುಕಿಕೊಂಡು ಇರುವ ಪ್ರಯುಕ್ತವೂ, ಹೆಚ್ಚು ಬಲಿ ಹಾಕಿದ ಅನ್ನವು ಸಿಗುವುದರಿಂದಲೂ ಜಯಂತನು ಕಾಗೆಯ ಜನ್ಮವನ್ನು ಪ್ರಾರ್ಥಿಸಿರುವನು ॥೯॥

ಮೂ ॥ ಸ ಚಾ (ಅ) ಸುರಾವೇಶವಶಾದ್ವಿಮಾಸ್ತನೇ
ಯದಾಽವ್ಯಥಾತ್ತುಂಡಮುಖಾಭಿವೀಕ್ಷಿತಃ ॥
ಜನಾರ್ದನೇನಾಶು ತೃಣೇ ಪ್ರಯೋಜಿತೇ
ಚಚಾರ ತೇನ ಜ್ವಲತಾನುಯಾತಃ ॥೧೦॥

ಅ ॥ ಆ ಕಾಗೆಯ ಸ್ವರೂಪಿಯಾದ ಜಯಂತನು ಅಸುರನ ಆವೇಶವಶದಿಂದ ಯಾವಾಗ ಸೀತಾದೇವಿಯ ಕುಚದ ಮೇಲೆ ಕೊಕ್ಕನ್ನು ಇಟ್ಟನೋ. ಆಗ ಶ್ರೀ ರಾಮನಿಂದ ಕಾಣಿಸಿಕೊಳ್ಳಲ್ಪಟ್ಟವನು ಆದನು. ಶ್ರೀ ರಾಮನಿಂದ ಶೀಘ್ರದಲ್ಲಿ ಹುಲ್ಲು ಬಿಸಾಡಲ್ಪಡುತ್ತಿರಲು ಅಗ್ನಿಯಂತೆ ಪ್ರಕಾಶಿಸುತ್ತಿರುವ ಹುಲ್ಲಿನಿಂದ ಹಿಂಬಾಲಿಸಿಕೊಳ್ಳಲ್ಪಟ್ಟವನಾಗಿ (ಲೋಕಾಂತರಗಳಲ್ಲಿಯೂ) ಸಂಚರಿಸಿದನು ॥೧೦॥

ಮೂ ॥ ಸ್ವಯಂಭುಶರ್ವೇಂದ್ರಮುಖಾನ್ಸುರೇಶ್ವರಾನ್
ಜಿಜೀವಿಷುಸ್ತಾಞ್ಛರಣಂ ಗತೋಽಪಿ ॥
ಬಹಿಷ್ಕೃತಸ್ತೈರ್ಹರಿಭಕ್ತಿಭಾವತೋ
ಹ್ಯಲಂಘ್ಯಶಕ್ತ್ಯೇ ಪರಮಸ್ಯ ಚಾಕ್ಷಮೈಃ ॥೧೧॥

ಅ ॥ ಹರಿಭಕ್ತ್ಯಾದಿ ಸದ್ಗುಣಗಳಿಂದ ಪ್ರಸಿದ್ಧರಾದ ಬ್ರಹ್ಮ, ರುದ್ರ, ಇಂದ್ರನೇ ಮೊದಲಾಗಿವುಳ್ಳ ದೇವಶ್ರೇಷ್ಠರನ್ನು ಕಾಗೆರೂಪಿಯಾದ ಜಯಂತನು ಬದುಕಬೇಕೆಂಬ ಇಚ್ಛೆಯುಳ್ಳವನಾಗಿ

ರಕ್ಷಕರನ್ನಾಗಿ ಹೊಂದಿದರೂ ಶ್ರೀ ಹರಿಯಲ್ಲಿ ಭಕ್ತಿಯು ಇದ್ದ ಪ್ರಯುಕ್ತ ಸರ್ವೋತ್ತಮನಾದ ಶ್ರೀರಾಮನನ್ನು ಅತಿಕ್ರಮಿಸದೆ ಇರುವ, ಶಕ್ತಿಯಿಂದ ಅಸಮರ್ಥರಾದ ಆ ಬ್ರಹ್ಮಾದಿ ದೇವತೆಗಳಿಂದ ಪರಿತ್ಯಕ್ತನು ॥೧೧॥

ಮೂ ॥ ಪುನಃ ಪ್ರಯಾತಃ ಶರಣಂ ರಘೂತ್ತಮಂ
ವಿಸರ್ಜಿತಸ್ತೇನ ನಿಹತ್ಯ ಚಾಸುರಂ ॥
ತದಕ್ಷಿಗಂ ಸಾಕ್ಷಿಕ (ಗ) ಮುಕ್ತ್ಯವಧ್ಯಂ
ಪ್ರಸಾದತಶ್ಚಂದ್ರವಿಭೂಷಣಸ್ಯ ೧೨॥

ಅ ॥ ಮತ್ತು ಕಾಗೆರೂಪಿಯಾದ ಜಯಂತನು ಶ್ರೀ ರಾಮನನ್ನು ರಕ್ಷಕನನ್ನಾಗಿ ಹೊಂದಿದನು. ಆ ತೃಣದಿಂದ ಅಥವಾ ರಾಮನಿಂದ ಚಂದ್ರನಿಗೆ ಅಲಂಕಾರಭೂತನಾದ ರುದ್ರನ ವರರೂಪವಾದ ಪ್ರಸಾದದೆಸೆಯಿಂದ ಸಂಹರಿಸಿಕೊಳ್ಳಲ್ಪಡಲಿಕ್ಕೆ ಅಶಕ್ಯನಾದಾಗ್ಯೂ (ಅಂದರೆ ಕಾಗೆಗಳಿಗೆ ಎರಡುಕಣ್ಣುಗಳಗೋಳಕಗಳಲ್ಲಿರತಕ್ಕ ಚಕ್ಷುರಿಂದ್ರಿಯದ ಅಂಶದ್ವಯ ಸಾಹಿತ್ಯವು ಇರುವ ತನಕ ಆ ಇಂದ್ರಿಯದಲ್ಲಿದ್ದವನಿಗೆ ಸಂಹಾರವು ಆಗಬಾರದು. ಎನ್ನುವ ರುದ್ರನ ವರಪ್ರಸಾದದಿಂದ ವಧಾನರ್ಹನಾದಾಗ್ಯೂ) ಆ ಅಕ್ಷಿರೂಪವಾದ ಇಂದ್ರಿಯದಲ್ಲಿರತಕ್ಕ ಕುರಂಗನಾಮಕ ಅಸುರನನ್ನು ಒಂದು ಗೋಳಕದ ಒಳಗೆ ಇರತಕ್ಕ ಇಂದ್ರಿಯಾಂಶದಿಂದ ಕೂಡಿದವನನ್ನಾಗಿ ಸಂಹರಿಸಿ, ಕಾಗೆರೂಪಿಯಾದ ಜಯಂತನು ಬಿಡಲ್ಪಟ್ಟನು.

ವಿಶೇಷಾಂಶ — (1) ಒಂದು ಇಂದ್ರಿಯ ನಾಶದಿಂದ ಅವಧ್ಯತ್ವ ವರವು ಹೋಗುತ್ತಿರಲು ವಧಾರ್ಹನಾದಾಗ್ಯೂ, ಆ ಅಸುರನಿಗೆ ತನ್ನಷ್ಟಕ್ಕೇನೇ ಸಂಸಾರವು ಕೂಡಿರುವುದರಿಂದ ಸಂಹಾರಕನೊಬ್ಬನು ಯಾರೊಬ್ಬನಿಂದ ಸಂಹಾರವನ್ನು ಮಾಡಬೇಕಾದುದರಿಂದ ವರವನ್ನು ವ್ಯರ್ಥೀಕರಿಸುವುದಕ್ಕಾಗಿ ಇಂದ್ರಿಯ ನಾಶವು. ಸಾಧನವು ಇಲ್ಲದಿರುವುದರಿಂದ, ಸಂಸಾರವು ಕೂಡದಿರುವ ಪ್ರಯುಕ್ತ ಶ್ರೀ ರಾಮನಿಗೆ ಅಪರಾಧ ಮಾಡಿದ ಕಾಗೆಯ ರೂಪಿಯಾದ ಜಯಂತನಿಗೆ ಸಂಹಾರವು. ಹೀಗೆ ವರವನ್ನು ರಾಮನೇ ಮಾಡಿರುವನು. (2) ಬಲವನ್ನು ಇಚ್ಛಿಸಿ ಅಸುರನಿಗೆ ತನ್ನ ಕಣ್ಣಿನಲ್ಲಿ ಅವಕಾಶವನ್ನು ಕೊಟ್ಟ ದೋಷದಿಂದಲೂ, ಶ್ರೀ ರಾಮನಿಗೆ ಅಪರಾಧ ಮಾಡಿದ ದೇಹಾಭಿಮಾನಿತ್ವರೂಪವಾದ ಅಲ್ಪದೋಷದಿಂದಲೂ ಒಂದೇ ಕಣ್ಣುಳ್ಳವನನ್ನಾಗಿ ಮಾಡಿ ದೈತ್ಯನ ಆವೇಶಬಲದಿಂದಲೇ ಸೀತಾದೇವಿಯ ಕುಚದಲ್ಲಿ ಕೊಕ್ಕನ್ನು ಇಟ್ಟ ಜಯಂತನಿಗೆ ಲಕ್ಷ್ಮೀಸ್ವರೂಪಳಾದ ಸೀತಾದೇವಿಯಲ್ಲಿ ಅನುರಾಗವಿಲ್ಲದಿರುವುದರಿಂದ ಪ್ರಬಲವಾದ ಅಪರಾಧವಿಲ್ಲದಿರುವ ಪ್ರಯುಕ್ತ ಜಯಂತನು ಜೀವಿಸುತ್ತಿರುವಾಗಲೇ ಬಾಧಿಸಲ್ಪಟ್ಟನು॥೧೨॥

ಹಾಗಾದರೆ ಅಪರಾಧಿಯನ್ನು ಸಂಹರಿಸುವುದು ಯೋಗ್ಯವೆ? ಎಲ್ಲಾ ಕಾಗೆಗಳ ಅಕ್ಷಿನಾಶವನ್ನು ಏಕೆ ಮಾಡಿದನು? ಎಂದರೆ—

ಮೂ ॥ ಸ ವಾಯುಸಾನಾಮಸ ರೋಽಖಿಲಾನಾಂ
ಪರಾದಮೋಕಸ್ಯ ಬಭೂವ ಚಾಕ್ಷಿಗಃ ॥
ನಿಪಾತಿತೋಽಸೌ ಸಹ ವಾಯುಸಾಕ್ಷಿಭಿಃ
ತೃಣೇನ ರಾಮಸ್ಯ ಬಭೂವ ಭಸ್ಮಸಾತ್ ॥೧೪॥

ಅ ॥ ಆ ಕುರಂಗನಾಮಕ ದೈತ್ಯನು ರುದ್ರನ ವರದಿಂದ ಎಲ್ಲಾ ಕಾಗೆಗಳ ಕಣ್ಣಿನಲ್ಲಿರತಕ್ಕವನೂ ಆದನು. ರಾಮಸಂಬಂಧಿಯಾದ ತೃಣದಿಂದ ಕಾಗೆಗಳ ಅಕ್ಷಿಗಳಿಂದ ಕೂಡಿಕೊಂಡು ಈ ಅಸುರನು ಬೀಳಿಸಿಕೊಳ್ಳಲ್ಪಟ್ಟನು. ಶ್ರೀ ರಾಮನ ತೃಣದಿಂದ ಭಸ್ಮಾಧೀನನು ಆದನು.

**ವಿಶೇಷಾಂಶ** – 'ರಾಮಸ್ಯ ತೃಣೇನ' ಎಂದು ಹೇಳಿರುವದರಿಂದ ರಾಮನಿಂದ ಅಭಿಮಂತ್ರಿತವಾದ ಮಂತ್ರದ ಸಾಮರ್ಥ್ಯದಿಂದ ಒಂದೇ ತೃಣವು ಅನಂತವಾಗಿ ಈಗ ಇರತಕ್ಕ ಎಲ್ಲಾ ಕಾಗೆಗಳ ನಯನಗಳಿಂದ ಕೂಡಿ ಅಲ್ಲಿ ಅಲ್ಲಿಗೆ ಹೋದ ಎಲ್ಲಾ ದೈತ್ಯಾಂಶರನ್ನೂ ಭಸ್ಮೀಕರಿಸಿದನು. ಎಂದು ಸೂಚಿಸಿದರು. ಮುಂದಿನ ಕಾಗೆಗಳಿಗೆ ಶ್ರೀ ರಾಮನ ಸಂಕಲ್ಪಬಲದಿಂದ ಹುಟ್ಟಿದ ಲಾಗಾಯ್ತು ಒಂದೇ ಕಣ್ಣು. ಆದುದರಿಂದಲೇ ಇಲ್ಲಿ ಕಾಗೆಗಳ ಕಣ್ಣುಗಳಿಂದ ಕೂಡಿಕೊಂಡು ಭಸ್ಮಾಧೀನನಾದನು. ಮುಂದಿನ ಕಾಗೆಗಳನ್ನು ಒಂದು ಕಣ್ಣುಗಳುವುಗಳನ್ನಾಗಿಯೇ ಸೃಷ್ಟಿಮಾಡುವುದು; ಅವುಗಳ ಕಣ್ಣುಗಳನ್ನು ಭಸ್ಮೀಕರಿಸುವುದಿಲ್ಲ. ಕಾಗೆಗಳು ಎಷ್ಟರ ವರೇಗೆ ಎರಡು ಕಣ್ಣುಗಳುಳ್ಳವಗಳಾಗಿ ಇರುತ್ತಾವೋ, ಅಷ್ಟರ ವರೇಗೆ ಆ ಕಾಗೆಗಳ ಕಣ್ಣಿನಲ್ಲಿರತಕ್ಕ ನಿನಗೆ ಮರಣವು ಆಗಬಾರದು. ಎಂದು ರುದ್ರನು ವರವನ್ನು ಕೊಟ್ಟಿದ್ದರಿಂದ ಒಂದು ಕಣ್ಣು ನಾಶವಾದಾಗ್ಯೂ ವೈಯರ್ಥ್ಯವು ಕೂಡುವುದರಿಂದ ಕಾಗೆಗಳಲ್ಲಿ ದಯಾಶೀಲನಾದ ಶ್ರೀ ರಾಮನು ಒಂದೇ ಕಣ್ಣಿಗೆ ಭಂಗವನ್ನುಂಟುಮಾಡಿರುವನು ॥೧೩॥

ಹಾಗಾದರೆ ನಯನದಲ್ಲಿರತಕ್ಕ ದೈತ್ಯನನ್ನು ಸಂಹರಿಸಬೇಕು. ಕಾಗೆಗಳದ್ದು ಏನು ಅಪರಾಧವಿದೆ ಎಂದರೆ-ಅಥವಾ ಅಪರಾಧವಿಲ್ಲದಿರುವ ಕಾಗೆಗಳ ಒಂದು ಕಣ್ಣನ್ನು ಭಂಗಮಾಡಿದರೆ ವೈಷಮ್ಯ ನೈರ್ಘೃಣ್ಯಗಳು ಬರುವವು ಎಂದರೆ –

ಮೂ ॥ ದದುರ್ಹಿ ತಸ್ಮೈ ವಿವರಂ ಬಲಾರ್ಥಿನೋ
ಯದ್ವಾಯಸಾಸ್ತೇನ ತ ಕ್ಷಿಪಾತನಂ ॥
ಕೃತಂ ರಮೇಶೇನ ತದೈ(ದೇ)ಕನೇತ್ರಾ
ಬಭೂವುರನ್ಯೇಽಪಿ ಚ (ತು) ವಾಯಸಾಸ್ತ(ಸ್ಸ)ದಾ ॥೧೪॥

ಅ ॥ ಯಾವಕಾರಣದಿಂದ ಕಾಗೆಗಳು ಬಲವನ್ನು ಇಚ್ಛಿಸತಕ್ಕವುಗಳಾಗಿ ರುದ್ರನ ಪ್ರಸಾದದಿಂದಲೇ ಎಲ್ಲಾ ಕಾಗೆಗಳ ಕಣ್ಣುಗಳಲ್ಲಿ ಪ್ರವೇಶಮಾಡತಕ್ಕ ಆ ಕುರಂಗಾಸುರನಿಗೋಸ್ಕರ ಸ್ಥಾನವನ್ನು ಕೊಟ್ಟವೋ ಆ ಕಾರಣದಿಂದ ಆ ವಾಯಸಗಳ ನೇತ್ರಭಂಗವು ಲಕ್ಷ್ಮೀಪತಿಯಾದ ಶ್ರೀ ರಾಮನಿಂದ ಮಾಡಲ್ಪಟ್ಟಿದೆ. ಆ ದಿನವನ್ನಾರಂಭಿಸಿ ಬೇರೆ ಕಾಗೆಗಳೂ ಕೂಡ ಯಾವಾಗಲೂ ಕೂಡ ಒಂದು ಕಣ್ಣುಗಳುಳ್ಳವುಗಳು ಆದವು. ಅಂದರೆ—ಒಂದು ಕಾಗೆಯ ಕಣ್ಣು ಬಿದ್ದಕೂಡಲೇ ಎಲ್ಲಾ ಕಾಗೆಗಳಿಗೂ ಒಂದೇ ಕಣ್ಣು ಆಯಿತು.

**ವಿಶೇಷಾಂಶ** (—) ಪ್ರಬಲನಾದ ಅಸುರನು ನಮ್ಮ ಚಕ್ಷುಸ್ಸನ್ನು ಪ್ರವೇಶಮಾಡಿ ಇರುತ್ತಿರಲು ನಮಗೆ ಬಲವು ಜಾಸ್ತಿಯಾಗುತ್ತದೆ. ಆದಕಾರಣ ಕಾಗೆಗಳಿಗೂ ಅಲ್ಪದೋಷವಿದೆ. ಆದುದರಿಂದ ಕಾಗೆಗಳಿಗೆ ಕೇವಲ ಕಣ್ಣಿಗೆ ನಾಶವು ಸರ್ವಥಾ ನಾಶವಲ್ಲ. (2) ಎರಡು ಗೋಳಕಗಳಲ್ಲಿಯೂ ಒಂದೇ ಇಂದ್ರಿಯವು ಇಬ್ಬರು ಹೆಂಡಂದಿರ ಒಬ್ಬ ಗಂಡನಂತೆ ಕಾರ್ಯವನ್ನು ಅನುಸರಿಸಿ ಶ್ರೀ ರಾಮನ ಕೃಪೆಯಿಂದ ಅತ್ತಿತ್ತ ಓಡುತ್ತದೆ. ಆದ ಕಾರಣ ಏಕ ನೇತ್ರತ್ವವು ಒಂದು ಗೋಳಕಕ್ಕೂ ನಾಶವಲ್ಲ. ಗೋಳಕದ ಒಳಗೆ ತೃಣಾಸ್ತ್ರಪ್ರವೇಶವಾದಾಗ

ಕಾಗೆಗಳು ಎರಡು ಗೋಳಕದಿಂದಲೂ ನೋಡಲಿ ಎನ್ನುವ ದಯೆಯಿಂದ ಆ ಗೋಳಕಕ್ಕೆ ನಾಶವಿಲ್ಲದಿರುವುದು ಎಂದು ತಿಳಿಯತಕ್ಕದ್ದು. ॥೧೪॥

ಹಾಗಾದರೆ, ಆಗ ಇರತಕ್ಕ ಕಾಗೆಗಳು ವಿವರವನ್ನು ಕೊಟ್ಟ ಅಪರಾಧದಿಂದ ಒಂದೇ ಕಣ್ಣುಳ್ಳವುಗಳಾಗಲಿ. ಮುಂದೆ ಹುಟ್ಟತಕ್ಕ ಕಾಗೆಗಳಿಗೆ ಒಂದು ಕಣ್ಣು ಆಗಲಿಕ್ಕೆ ಏನುಕಾರಣವು? ಎಂದರೆ—

ಮೂ ॥ ಭವಿಷ್ಯಕಾಪನಪ್ಯಥ ಯಾವದೇತ
ದ್ವಿನೇತ್ರತಾ ಕಾಕಕುಲೋದ್ಭವಾನಾಂ ॥
ಕಾವತ್ತ್ರದಕ್ಷ್ಣೈಸ್ಯ ಕುರಂಗನಾಮ್ನಃ
ಶಿವೇನ ದತ್ತಂ ದಿತಿಜಸ್ಯ ಚಾಕ್ಷ್ಣಯಂ ॥೧೫॥

ಅ ॥ ವರ್ತಮಾನ ಕಾಲಾನಂತರದಲ್ಲಿ ಉತ್ಪತ್ತಿಯನ್ನು ಹೊಂದುವ, ಈಗ ಇರತಕ್ಕ ಕಾಗೆಗಳ ಕುಲದಲ್ಲಿ ಉತ್ಪತ್ತಿಯುಳ್ಳ ಕಾಗೆಗಳಿಗೆ ಎರಡು ಕಣ್ಣುಗಳುಳ್ಳತನವು ಎಷ್ಟರ ವರೆಗೆ ಇರುತ್ತದೋ ಅಷ್ಟರ ವರೆಗೆ ಕಾಗೆಗಳ ಕಣ್ಣಿನಲ್ಲಿರತಕ್ಕ ಕುರಂಗನೆಂದು ಹೆಸರುಳ್ಳ ದೈತ್ಯನಿಗೆ ಅವಧ್ಯತ್ವರೂಪ ವರವು ಕೊಡಲ್ಪಟ್ಟಿದೆ. ಅಥವಾ ಅಷ್ಟರ ವರೆಗೆ ಕ್ಷಯ ರಹಿತವಾದ ಕಾಗೆಗಳ ಕಣ್ಣು ಈ ಕುರಂಗ ನಾಮಕನಾದ ದೈತ್ಯನಿಗೆ ರುದ್ರನಿಂದ ಸ್ಥಾನವಾಗಿ ಕೊಡಲ್ಪಟ್ಟಿದೆ.

**ವಿಶೇಷಾಂಶ—** (1) ಹಾಗಾದರೆ ಕಲ್ಪಾಂತರದಲ್ಲಿ ಹುಟ್ಟತಕ್ಕ ಕಾಗೆಗಳಿಗೂ ಒಂದೇ ಕಣ್ಣು ಇರಬೇಕಾಗುವುದರಿಂದ ಬ್ರಹ್ಮನ ದಿನಾಂತರದಲ್ಲಿ ಉಂಟಾಗತಕ್ಕ ರಾಮಕಥೆಯಲ್ಲಿ ಕಾಕಾಸುರನ ಸಂಹಾರ ಕಥೆಯು ಇಲ್ಲದೆ ಹೋಗಬೇಕಾಗುವುದು ಎಂದರೆ 'ಕಾಕಕುಲೋದ್ಭವಾನಾಂ' ಎಂದು ಹೇಳಿರುವರು ಆದರೆ, ಈಗ ಇರತಕ್ಕ ಕಾಗೆಗಳ ಕುಲವು ಎಲ್ಲಾ ದೈನಂದಿನ ಕಲ್ಪಾವಸಾನದಲ್ಲಿ ನಾಶವಾಗುತ್ತದೆ. ಆದುದರಿಂದ ತನ್ನಿಮಿತ್ತಕವಾದ ವರವೂ ಕೂಡ ನಾಶ ಹೊಂದುತ್ತದೆ. ಕಲ್ಪಾಂತರದಲ್ಲಿ ಆದರೂ **'ಧಾತಾ ಯಥಾ ಪೂರ್ವಮಕಲ್ಪಯತ್,** ಎನ್ನುವ ಶ್ರುತಿಯು ದೆಸೆಯಿಂದ ಆಗ ಇರತಕ್ಕ ಬ್ರಹ್ಮನು ಎರಡು ಕಣ್ಣುಗಳುಳ್ಳ ಕಾಗೆಗಳನ್ನೇ ಸೃಷ್ಟಿಸುವನು. ಪುನಃ ದೈತ್ಯನು ವರವನ್ನು ಹೊಂದುತ್ತಿರಲು ಆಗ ಅವತರಿಸಿರುವ ರಾಮನೂ ಆ ದೈತ್ಯನ ಕಣ್ಣನ್ನು ನಾಶಪಡಿಸುತ್ತಾನೆ. ಆದುದರಿಂದ ದೈನಂದಿನ ರಾಮಕಥೆಯಲ್ಲಿ ಕಾಕೋದ್ಧಕ್ಕೆ ಅವಕಾಶವಿಲ್ಲ. (2) ಮತ್ತು ಅತಿ ಸಮರ್ಥರಾದ ರಾಮಚಂದ್ರ ದೇವರೂ ತನ್ನ ಪ್ರಿಯನಾದ ವಿಭೀಷಣನಿಗೋಸ್ಕರ **'ಯಾವತ್ತಿಷ್ಠತಿ ಮೇದಿನೀ ತಾವಜ್ಜೀವ ವಿಭೀಷಣ'** ಎಂದು ವರವನ್ನು ಕೊಟ್ಟರೂ ಆ ಕಲ್ಪಪರ್ಯಂತವಿರತಕ್ಕ ಭೂಮಿಯನ್ನೇ ಉಪಾಧಿಯನ್ನಾಗಿಮಾಡುತ್ತದೆ. ಕಲ್ಪಾಂತರದಲ್ಲಿರತಕ್ಕ ಭೂಮಿಯನ್ನು ಉಪಾಧಿಯನ್ನಾಗಿ ಮಾಡುವುದಿಲ್ಲ ಆಗ ಕಾಗೆಯ ಕಥೆಯನ್ನು ಏನುಹೇಳಬೇಕು? ಅಂದರೆ ತುಚ್ಛವಾದ ಕಾಮ್ಯರಾದ ತಪಸ್ವಿಗೋಸ್ಕರ ಸ್ವಯಂ ತುಚ್ಛನಾದ ದೈತ್ಯನಿಗೋಸ್ಕರ ರುದ್ರನುಕೊಟ್ಟ ವರವು ಈ ಕಲ್ಪಪರ್ಯಂತವಾಗಿಯೇ ಎನ್ನುವುದು ಸುತರಾಂ ಸಿದ್ಧವಾಗುತ್ತದೆ. ॥೧೫॥

ಮೂ ॥ ಅತಃ ಪುನರ್ಭಾವಮಮುಷ್ಯ ಹಿನ್ಸನ್
ಭವಿಷ್ಯತಶ್ಚೈಕದೃಶಶ್ಚಕಾರ ॥
ಸ ವಾಯಸಾನ್ರಾಘವ ಆದಿಪೂರುಷಃ
ತತೋ ಯಯೌ ಶಕ್ರಸುತಸ್ತದಾಜ್ಞಯಾ ॥೧೬॥

ಅ ॥ ವರಸಾಮರ್ಥ್ಯದ್ದೆಸೆಯಿಂದ ಈ ದೈತ್ಯನಿಗೆ ಒಂದಾವರ್ತಿ ನಾಶಹೊಂದಿದವನಿಗೂ ಪುನಃ ಉತ್ಪತ್ತಿಯನ್ನು, ಅಥವಾ ಮುಂದಿನ ಕಾಗೆಗಳಿಗೆ ಆದರೂ ಅಪರಾಧಿಗಳಾದ ಕಾಗೆಗಳ ಕುಲದಲ್ಲಿಯೇ ಹುಟ್ಟುವಿಕೆಯನ್ನಾಗಲೀ (ವರದ ಮಹಿಮೆಯಿಂದ ಮುಂದೆ ಹುಟ್ಟತಕ್ಕ ಕಾಗೆಗಳಿಗೂ ವಿವರವನ್ನು ಕೊಡುವ ವಿಷಯದಲ್ಲಿ ಬುದ್ಧಿಯು ಹುಟ್ಟುವುದೆಂದು ಅಪರಾಧವು.) ಪರಿಹರಿಸತಕ್ಕ ಆದಿಪುರುಷನಾದ ಆ ಶ್ರೀ ರಾಮನು ಮುಂದೆ ಹುಟ್ಟತಕ್ಕ ಕಾಗೆಗಳನ್ನು ಒಂದು ಕಣ್ಣುಗಳುಳ್ಳವುಗಳನ್ನಾಗಿ ಮಾಡಿದನು. ಆ ಮೇಲೆ ದೇವೇಂದ್ರನ ಮಗನಾದ ಜಯಂತನು ಶ್ರೀ ರಾಮನ ಆಜ್ಞೆಯಿಂದ ಹೋದನು. ॥೧೬॥

ಅಯೋಧ್ಯಾಕಾಂಡದ ಕಥೆಯನ್ನು ಸಂಕ್ಷೇಪದಿಂದ ಹೇಳಿ ಅರಣ್ಯಕಾಂಡ ಕಥೆಯನ್ನು ಆರಂಭಿಸುತ್ತಾರೆ.

ಮೂ ॥ ರಾಮೋಽಥ ದಂಡಕವನಂ ಮುನಿವರ್ಯನೀತೋ
ಲೋಕಾನೇಕತ ಉದಾರಬಲೈರ್ನಿರಸ್ತಾನ್ ॥
ಶುತ್ವಾ ಖರಪ್ರಭೃತಿಭಿರ್ವರತೋ ಹರಸ್ಯ
ಸರ್ವೈರವಧ್ಯತನುಭಿಃ ಪ್ರಯಯೌ ಸಭಾರ್ಯಃ ॥೧೭॥

ಅ ॥ ಕುರಂಗನನ್ನು ಸಂಹರಿಸಿದಮೇಲೆ ದಂಡಕಾರಣ್ಯದಲ್ಲಿದ್ದ ಮುನಿಶ್ರೇಷ್ಠರಿಂದ ಹೊಂದಲ್ಪಟ್ಟ ಶ್ರೀ ರಾಮನು ಅನೇಕಜನರನ್ನು ರುದ್ರನ ವರದ್ದೆಸೆಯಿಂದ ಎಲ್ಲರಿಂದಲೂ ಸಂಹರಿಸಿಕೊಳ್ಳಲ್ಪಡದಿರುವ, ಉತ್ಕೃಷ್ಟವಾದ ಬಲವುಳ್ಳ ಖರನೇ ಮೊದಲಾಗಿವುಳ್ಳವರಿಂದ ಬಾಧಿತರನ್ನಾಗಿ ಕೇಳಿ ಹೆಂಡತಿಯಿಂದ ಕೂಡಿದವನಾಗಿ ಹೋದನು. ॥೧೭॥

ಮೂ ॥ ಆಸೀಚ್ಚ ತತ್ರ ಶರಭಂಗ ಇತಿ ಸ್ಮ ಜೀರ್ಣೋ
ಲೋಕಂ ಹರೇರ್ಜಿಗಮಿಷುರ್ಮುನಿರುಗ್ರತೇಜಾಃ ॥
ತೇನಾದರೋಽಪಹೃತಸಾರ್ಘ್ಯಸಪರ್ಯಯಾ ಸ
ಪ್ರೀತೋ ದದೌ ನಿಜಪದಂ ಪರಮಂ ರಮೇಶಃ ॥೧೮॥

ಅ ॥ ಆ ದಂಡಕಾರಣ್ಯದಲ್ಲಿ ಶ್ರೀ ಹರಿಯ ಲೋಕವನ್ನು ಹೊಂದಲಿಕ್ಕೆ ಇಚ್ಛಿಸತಕ್ಕ ಮುದಿತನದಿಂದ ಕರ್ಮವನ್ನು ಮಾಡಲಿಕ್ಕೆ ಅಶಕ್ತನಾದ, ಕ್ರೂರವಾದ ತೇಜಸ್ಸುಳ್ಳ ಶರಭಂಗನೆನ್ನುವ ಮುನಿಯು ಇರುತ್ತಿದ್ದನು. ಆ ಶರಭಂಗ ಮುನಿಯಿಂದ ಪ್ರೀತಿಯಿಂದ ತರಲ್ಪಟ್ಟ ಅರ್ಘ್ಯಾದ್ಯುಪಚಾರಗಳಿಂದ ಸಹಿತವಾದ ಪೂಜೆಯಿಂದ ಸಂತುಷ್ಟನಾದ ಆ ಲಕ್ಷ್ಮೀಪತಿಯಾದ ಶ್ರೀ ಹರಿಯು ಉತ್ತಮವಾದ ತನ್ನ ಸ್ಥಾನವನ್ನು ಕೊಟ್ಟನು. ॥೧೮॥

ಹಾಗಾದರೆ ತಿಳಿದ ಮುನಿಯು ಆತ್ಮಘಾತವನ್ನು ಹೇಗೆ ಮಾಡಿಕೊಂಡನು? ಆತ್ಮಘಾತವನ್ನು ಮಾಡಿಕೊಂಡವನಿಗೆ ಶ್ರೀ ರಾಮನು ತನ್ನ ಸ್ಥಾನವನ್ನು ಹೇಗೆ ಕೊಟ್ಟನು? ಎಂದರೆ—

ಮೂ ॥ ಧರ್ಮೋ ಯತೋಽಸ್ಯ ವಸಗಸ್ಯ ನಿತಾಂತಶಕ್ತ್ಯಾ
ಹ್ರಾಸೇ ಸ್ವಧರ್ಮಕರಣಸ್ಯ ಹುತಾಶನಾದೌ ॥
ದೇಹಾತ್ಯಯಃ ಸತತ ಏವ ತನುಂ ನಿಜಾಗ್ನೌ
ಸಂತ್ಯಜ್ಯ ರಾಮ ಪುರತಃ ಪ್ರಯಯೌ ರಮೋ (ಪರೇ) ಶಂ ॥೧೯॥

ಅ ॥ ಯಾವ ಕಾರಣದೆಸೆಯಿಂದ ಅರಣ್ಯದಲ್ಲಿರತಕ್ಕ ಈ ಶರಭಂಗ ಮುನಿಗೆ ಈ ಎಲ್ಲಾ ತಮ್ಮ ತಮ್ಮ ಆಶ್ರಮಗಳಿಗೆ ಯೋಗ್ಯವಾದ ಧರ್ಮವನ್ನೇ ಆಚರಿಸುವ ವಿಷಯದಲ್ಲಿ ಸರ್ವ ಪ್ರಕಾರದಿಂದಲೂ ಶಕ್ತಿಯು ನಾಶವಾಗೋಣ ಅಗ್ನಿ-ನೀರು ಇತ್ಯಾದಿಗಳಲ್ಲಿ ದೇಹ ಪರಿತ್ಯಾಗವು ನಿತ್ಯವಾದ ಧರ್ಮವೋ, ಅದಕಾರಣ ವಾನಪ್ರಸ್ಥಾಶ್ರಮದಲ್ಲಿರತಕ್ಕ ಈ ಶರಭಂಗನಿಗೆ ಧರ್ಮವೇ. ಆದುದರಿಂದಲೇ ಆಹಿತವಾದ ಅಗ್ನಿಯಲ್ಲಿ ಶ್ರೀ ರಾಮನ ಮುಂಭಾಗದಲ್ಲಿ ಶರೀರವನ್ನು ಬಿಟ್ಟು (ಅಂದರೆ ಪರಿಸ್ಮರಣಪೂರ್ವಕವಾಗಿ ಸಮೀಚೀನ ಜ್ಞಾನದಿಂದ ಬಿಟ್ಟು) ಲಕ್ಷ್ಮೀಪತಿಯಾದ ಶ್ರೀ ಹರಿಯನ್ನು ಹೊಂದಿದನು. ॥೧೯॥

ಮೂ ॥ ರಾಮೋಽಪಿ ತತ್ರ ದದೃಶೇ ಧ ದಸ್ಯ ಶಾಪಾತ್
ಗಂಧರ್ವಮುರ್ವಶಿರತೇರಥ ಯಾತುಧಾನಿಂ ॥
ಪ್ರಾಪ್ತಂ ದಶಾಂ ಸಪದಿ ತುಂಬುರುನಾಮಧೇಯಂ
ನಾಮ್ನಾ ವಿರಾಧಮಪಿ ಶರ್ವವರಾದವಧ್ಯಂ ॥೨೦॥

ಅ ॥ ಶ್ರೀ ರಾಮನೂ ಕೂಡ ಆ ದಂಡಕಾರಣ್ಯದಲ್ಲಿ ಊರ್ವಶಿಯ ರಮಣನಿಮಿತ್ತವಾಗಿ ಕುಬೇರನ ಶಾಪದೆಸೆಯಿಂದ ಶೀಘ್ರದಲ್ಲಿ ರಾಕ್ಷಸಸಂಬಂಧಿಯಾದ ಅವಸ್ಥೆಯನ್ನು ಹೊಂದಿದ (ಮೊದಲು) ತುಂಬುರು ಎಂದು ಹೆಸರುಳ್ಳ ಗಂಧರ್ವನನ್ನೂ, (ಈಗ)ರುದ್ರನ ವರದಿಂದ ಸಂಹರಿಸಿ ಕೊಳ್ಳಲ್ಪಡದಿರುವ ನಾಮದಿಂದ ವಿರಾಧನನ್ನೂ ಕೂಡ ಕಂಡನು ॥೨೦॥

ಮೂ ॥ ಭಙ್ಕ್ತ್ವಾಸ್ಯ ಬಾಹುಯುಗಲಂ ವಿಲಗಂ ಚಕಾರ
ಸಮ್ಮಾನಯನ್ವಚನಮಂಬುಜಜನ್ಮನೋಽಸೌ ॥
ಪ್ರಾಗಾಚ್ಚ ತಸ್ಯ ಸುಗತಿಂ ನಿಜಗಾಯಕಸ್ಯ
ಭಕ್ತ್ಯರ್ಥಸಂಸ್ತುತಮಿತೋಽಪಿ ಸಹಾನುಜೋ ನ ॥೨೧॥

ಅ ॥ ಈ ಶ್ರೀ ರಾಮನೂ ಬ್ರಹ್ಮನ ವಚನವನ್ನು (ಅಂದರೆ ನಿನ್ನ ಎರಡು ಬಾಹುಗಳ ಮಧ್ಯದಲ್ಲಿ ಯಾವನು ಪ್ರವೇಶಮಾಡುತ್ತಾನೋ. ಆತನು ನಿನ್ನ ವಶನಾಗಲಿ ಎನ್ನುವ ಮಾತನ್ನು) ಬಹುಮಾನಿಸುವವನಾಗಿ ತಪಸ್ಸಿನಿಂದ ಕೊಡಿಕೊಂಡು ಭುಜ-ಶಿರಸ್ಸನ್ನು ಹೊಂದಿ ದವನಾದಾಗ್ಯೂ (ಭುಜಭಂಗವನ್ನು ಮಾಡದಿರಲಿ ಎನ್ನುವ ವರವಿಲ್ಲದಿರುವುದರಿಂದ) ಈ ವಿರಾಧನ ಎರಡು ಭುಜಗಳನ್ನು ಮುರಿದು ವಿರಾಧನನ್ನು ಬಿಲದಲ್ಲಿಗತಕ್ಕವನನ್ನಾಗಿ ಮಾಡಿದನು. ತನ್ನನ್ನು ಗಾನಮಾಡತಕ್ಕ ತುಂಬುರುನಾಮಕ ಗಂಧರ್ವನಿಗೆ ಒಳ್ಳೇ ಗತಿಯನ್ನು ಕೊಟ್ಟನು ॥೨೧॥

ಮೂ ॥ ಪ್ರೀತಿಂ ವಿಧಿತ್ಸುರಗಮದ್ಭವನಂ ನಿಜಸ್ಯ
ಕುಂಭೋದ್ಭವಸ್ಯ ಪರಮಾದರತೋಽನುಮುನಾ ಚ ॥
ಸಂಪೂಜಿತೋ ಧನುರನೇನ ಗೃಹೀತಮಿಂದ್ರಾ-
ಚ್ಛಾರ್ಙ್ಗಂ ತದಾದಿಪುರುಷೋ ನಿಜಮಾಜಹಾರ ॥೨೨॥

ಅ ॥ ತನ್ನ ಭಕ್ತನಾದ ಅಗಸ್ತ್ಯನಿಗೆ ಪ್ರೀತಿಯನ್ನು ಮಾಡಲಿಕ್ಕೆ ಇಚ್ಛಿಸತಕ್ಕ ಆದಿ ಪುರುಷನಾದ ಶ್ರೀ ರಾಮನು ಅಗಸ್ತ್ಯನ ಮನೆಯನ್ನು ಕುರಿತು ಹೋದನು. ಈ ಅಗಸ್ತ್ಯನಿಂದ ಉತ್ತಮವಾದ ಭಕ್ತಿಯಿಂದ ಚೆನ್ನಾಗಿ ಪೂಜಿಸಿಕೊಳ್ಳಲ್ಪಟ್ಟವನಾಗಿ, ಅಗಸ್ತ್ಯನಿಂದ ಇಂದ್ರನ ದೆಸೆಯಿಂದ ಅಂಗೀಕರಿಸಲ್ಪಟ್ಟ ಸ್ವಕೀಯವಾದ ಶಾರ್ಙ್ಗವೆಂಬ ಧನುಸ್ಸನ್ನು ಸ್ವೀಕರಿಸಿದನು ॥೨೨॥

ಇಂಥವನ ಧನುಸ್ಸು ತನ್ನದ್ದಾದರೆ ಅವನಿಂದ ಹೇಗೆ ಪ್ರಾಪ್ತವಾಯಿತು, ಋಷಿಯೂ ಹೇಗೆ ಹೊಂದಿರುವನು? ಎಂದರೆ —

**ಮೂ ॥ ಆತ್ಮಾರ್ಥಮೇವ ಹಿ ಪುರಾ ಹರಿಣಾ ಪ್ರದತ್ತ-**
**ಮಿಂದ್ರೇ ತದಿಂದ್ರ ಉತ ರಾಮಕರಾರ್ಥಮೇವ ॥**
**ಪ್ರಾದಾದಗಸ್ತ್ಯಮುನಯೇ ತದವಾಪ್ಯ ರಾಮೋ**
**ರಕ್ಷನ್ಮುನೀನವಸದೇವ ಸ ದಂಡಕೇಷು ॥೨೩॥**

ಅ ॥ ಮೊದಲು ತನ್ನ ಅವತಾರಭೂತನಾದ ರಾಮನಿಗೋಸ್ಕರ ಶ್ರೀ ಹರಿಯಿಂದ ಇಂದ್ರನಲ್ಲಿ ಕೊಡಲ್ಪಟ್ಟ(ಅಂದರೆ ನನಗೋಸ್ಕರ ರಾಮಾವತಾರದಲ್ಲಿ ಕೊಡು ಎಂದು ಕೊಡಲ್ಪಟ್ಟ) ಆ ಶಾರ್ಙ್ಗಾಖ್ಯಧನುಸ್ಸನ್ನು ಇಂದ್ರನಾದರೂ ರಾಮನಿಂದ ಕೈಯಲ್ಲಿ ಧರಿಸುವುದಕ್ಕಾಗಿಯೇ ಆ ಧನುಸ್ಸನ್ನು ಅಗಸ್ತ್ಯನಿಗೋಸ್ಕರ ಕೊಟ್ಟನು. ಆ ಶ್ರೀ ರಾಮನು ಋಷಿಗಳನ್ನು ಮಾತ್ರ ರಕ್ಷಿಸುತ್ತಾ (ರಾಕ್ಷಸಾದಿಗಳನ್ನು ರಕ್ಷಿಸಿಕೊಂಡು ಇರಲಿಲ್ಲ) ದಂಡಕಾರಣ್ಯಗಳಲ್ಲಿ ಆವಾಸಮಾಡಿಕೊಂಡು ಇದ್ದನು ॥೨೩॥

**ಮೂ ॥ ಕಾಲೇ ತದೈವ ಖರದೂಷಣಯೋರ್ಬಲೇನ**
**ರಕ್ಷಃಸ್ವಸಾ ಪತಿನಿಮಾರ್ಗಣ ತತ್ಪರಾಸೀತ ॥**
**ವ್ಯಾಪಾದಿತೇ ನಿಜಪತೌ ಹಿ ದಶಾನನೇನ**
**ಪ್ರಾಮಾದಿಕೇನ ವಿಧಿನಾಽಭಿಸಸಾರ ರಾಮಂ ೨೪॥**

ಅ ॥ (ಯಾವ) ರಾಕ್ಷಸನಾದ ರಾವಣನ ತಂಗಿಯಾದ ಶೂರ್ಪಣಖಿಯು ತನ್ನ ಗಂಡನಾದ ವಿದ್ಯುಜ್ಜಿಹ್ವನು ರಾವಣನಿಂದ, (ಪರರಿಂದ ಕೂಡಿ ಯುದ್ಧಮಾಡುವ ಸಮಯದಲ್ಲಿ ಎರಡು ಸೈನ್ಯಗಳನ್ನು ಕೂಡಿಸುವಾಗ) ಅಜ್ಞಾನನಿಮಿತ್ತಕವಾದ ಶರಪ್ರಯೋಗಾಖ್ಯವಾದ ಕರ್ಮದಿಂದ ಸಂಹರಿಸಿಕೊಳ್ಳಲ್ಪಡುತ್ತಿರಲು ಸಹೋದರರಾದ ಖರ, ದೂಷಣರಿಬ್ಬರ ಬಲದಿಂದ ಗಂಡನನ್ನು ಹುಡುಕುವುದರಲ್ಲಿ ಆಸಕ್ತಳಾಗಿರುವಳೋ, (ಆ ಶೂರ್ಪಣಖಿಯು) ಶ್ರೀ ರಾಮನು ದಂಡಕಾರಣ್ಯದಲ್ಲಿ ಆವಾಸ ಮಾಡುವ ಕಾಲದಲ್ಲಿ ರಾಮನನ್ನು ಹೊಂದಿದಳು.

**ವಿಶೇಷಾಂಶ**— ಇದರಿಂದ ರಂಡೆಯು ಗಂಡನನ್ನು ಹುಡುಕುವುದು ಮಹತ್ತಾದ ಅಧರ್ಮವು. ಆದ ಕಾರಣ ಶ್ರೀ ರಾಮನಿಂದ ಆ ಶೂರ್ಪಣಖಿಯು ಶಿಕ್ಷಿಸಿಕೊಳ್ಳಲ್ಪಟ್ಟಳು ಸೀತೆಯ ಅಧೀನನಾಗಿ ಶೂರ್ಪಣಖಿಯನ್ನು ಶಿಕ್ಷಿಸಿದ್ದಲ್ಲ. ಅಪರಾಧವಿಲ್ಲದಿರುವವಳನ್ನು ಶಿಕ್ಷಿಸಿದ್ದೂ ಅಲ್ಲ, ಎಂದು ಸೂಚಿತವಾಯಿತು ॥೨೪॥

**ಮೂ ॥ ಸಾನುಜ್ಞಯೈವ ರಜನೀಚರಭರ್ತುರುಗ್ರಾ**
**ಭ್ರಾತ್ರೋರ್ದ್ವಯೇನ ಸಹಿತಾ ವನಮಾಪಶ್ಯನಸಂ)ಶೀ ॥**
**ರಾಮಂ ಸಮೇತ್ಯ ಭವ ಮೇ ಪತಿರಿತ್ಯವೋಚ-**
**ದ್ಭಾನಂ ಯಥಾ ತಮು ಉಪೇತ್ಯ ಸಂಯೋಗಕಾಮಂ ॥೨೫॥**

ಅ ॥ ಕ್ರೂರಳಾದ, ರಾವಣನ ತಂಗಿಯಾದ ಆ ಶೂರ್ಪಣಖಿಯು ರಾವಣನ ಅನುಜ್ಞೆಯಿಂದಲೇ ಸಹೋದರರಾದ ಖರದೂಷಣರಿಬ್ಬರಿಂದ ಕೂಡಿದವಳಾಗಿ ದಂಡಕಾರಣ್ಯದಲ್ಲಿ

ಅವಾಸವಾಸವಾಗಿ ಸಂಯೋಗವನ್ನು ಇಚ್ಛಿಸತಕ್ಕ ಅಂಧಕಾರವು ಹೇಗೆ ಸೂರ್ಯನನ್ನು ಹೊಂದಿ (ಹೇಳುತ್ತದೋ, ಹಾಗೆಯೇ) ಶ್ರೀ ರಾಮನನ್ನು ಹೊಂದಿ ನನಗೆ (ನೀನು) ಗಂಡನಾಗು ಎಂದು ಹೇಳಿದಳು.

**ವಿಶೇಷಾಂಶ—** ಅವರಿಬ್ಬರಲ್ಲಿ ಖರಾಸುರನು ಸಹೋದರನು. ದೂಷಣಾಸುರನಾದರೂ ತಾಯಿಯ ತಂಗಿಯ (ಚಿಕ್ಕತಾಯಿಯ) ಮಗನು **'ರಾಕಾಯಾಂ ಮಿಥುನಂ ಜಜ್ಞೇ ಖರಃ ಶೂರ್ಪನಖೀ ತಥಾ'** ಎಂದು ಅರಣ್ಯಕಾಂಡದಲ್ಲಿ ಹೇಳಿಯದೆ. ಹಾಗೆಯೇ **'ತತ್ರ ಮಾತೃಷ್ವಸ್ರುಃ ಪುತ್ರಃ ಭ್ರಾತಾ ತವ ಸುಖಪ್ರದಃ। ಭವಿಷ್ಯತಿ'** ಎಂದು ಹೇಳಿಯದೆ ॥೨೫॥

**ಮೂ ॥ ತಾಂ ತತ್ರ ಹಾಸ್ಯಕಥಯಾ ಜನಕಾಸುತಾಗ್ರೇ**
**ಗಚ್ಛಾನುಜಂ ಮ ಇಹ ನೇತಿ ವಚಃ ಸ ಉಕ್ತ್ವಾ ॥**
**ತೇನೈವ ದುಷ್ಟಚರಿತಾಂ ಹಿ ವಿಕರ್ಣನಾಸಾಂ**
**ಚಕ್ರೇ ಸಮಸ್ತರಜನಿಚರನಾಶಹೇತೋಃ ॥೨೬॥**

**ಅ ॥** ಆ ಶ್ರೀ ರಾಮನು ಜನಕರಾಜನ ಮಗಳಾದ ಸೀತಾದೇವಿಯ ಮುಂಭಾಗದಲ್ಲಿ ಆ ಶೂರ್ಪನಖಿಯನ್ನು ಪರಿಹಾಸರೂಪವಾದ ಕಥೆಯಿಂದ ನನ್ನ ತಮ್ಮನಾದ ಲಕ್ಷ್ಮಣನನ್ನು ಕುರಿತು ಹೋಗು. ನನ್ನ ವಿಷಯದಲ್ಲಿ ಇಚ್ಛೆಯು ಬೇಡ ಎಂದು ಮಾತನ್ನು ಹೇಳಿ ಎಲ್ಲಾ ರಾಕ್ಷಸರನ್ನು ಸಂಹರಿಸುವುದಕ್ಕಾಗಿ ಆ ಲಕ್ಷ್ಮಣನಿಂದಲೇ ದುಷ್ಟವಾದ ಕರ್ಮಗಳುಳ್ಳ ಶೂರ್ಪನಖಿಯನ್ನು ಹೋಗಲ್ಪಟ್ಟ ಕಿವಿಗಳೂ ಮೂಗುಗಳೂ ಉಳ್ಳವಳನ್ನಾಗಿ ಮಾಡಿಸಿದನು.

**ವಿಶೇಷಾಂಶ -** (1) ಜನಕರಾಜನಿಗೆ ಪತ್ನಿಯ ಅಪೇಕ್ಷೆಯಿಲ್ಲದೆ ಸೀತಾದೇವಿಯು ಹುಟ್ಟಿದ ಪ್ರಯುಕ್ತ ಸ್ವಲ್ಪಮಟ್ಟಿಗೆ ಮಗಳಾಗಿರುತ್ತಾಳೆ. ಅಂತು ಜನಕರಾಜನಿಗೆ **'ಅಯೋನಿಜಾತು ಯಾ ಕನ್ಯಾ ಆಸುತೇತ್ಯಭಿಧೀಯತೇ'** ಎನ್ನುವ ಪ್ರಮಾಣದಿಂದ ಸ್ವಲ್ಪಮಟ್ಟಿಗೆ ಮಗಳಂತೆ ಇರತಕ್ಕವಳು ಜಾನಕಿಯು. ಅವರ ಯಜ್ಞಭೂಮಿಯಲ್ಲಿ ನೇಗಿಲಿನಿಂದ ಉಳುತ್ತಿರಲು ಯಜ್ಞಭೂಮಿಯಿಂದಲೇ ಹುಟ್ಟಿರುವ ಪ್ರಯುಕ್ತ ಅಭಿಮಾನಮಾತ್ರದಿಂದ ಮಗಳು ಆಗಿರತಕ್ಕವಳು. ವಸ್ತುತಃ ಮಗಳಲ್ಲ. (2) ಅಪರಾಧಮಾಡಿದವರ ಕಿವಿ ಮೂಗುಗಳ ಕೊಯ್ಯುವಿಕೆ ಮೊದಲಾದ ನಿಂದ್ಯಕರ್ಮಗಳನ್ನು ರಾಜಾಧಿರಾಜನಾದ ಶ್ರೀ ರಾಮನು ತಾನೇ ಮಾಡುವುದು ಅಯೋಗ್ಯವಾದ ಪ್ರಯುಕ್ತವೂ ಬೇರೆ ಭೃತ್ಯರು ಇಲ್ಲದಿರುವಪ್ರಯುಕ್ತವೂ ಲಕ್ಷ್ಮಣನಿಂದಲೇ ಶ್ರೀ ರಾಮನು ಮಾಡಿಸಿದನು. ಎನ್ನುವ ಅಭಿಪ್ರಾಯದಿಂದ **'ತೇನೈವ ವಿಕರ್ಣನಾಸಾಂ ಚಕ್ರೇ'** ಎಂದು ಹೇಳಿರುವರು ॥೨೬॥

**ಮೂ ॥ ತತ್ಪ್ರೇರಿತಾನ್ಸಪದಿ ಭೀಮಬಲಾನ್ಪ್ರ(ತ್ಸ್ರ) ಯಾತಾಂ**
**ಸ್ತಸ್ಯಾಃ ಖರತ್ರಿಶಿರದೂಷಣಸಂಖ್ಯಬಂಧೂನ್ ॥**
**ಜಘ್ನೇ ಚತುರ್ದಶ ಸಹಸ್ರಮವಾರಣೀಯಃ**
**ಕೋದಂಡಪಾಣಿರಖಿಲಸ್ಯ ಸುಖಂ ವಿಧಾತುಂ ॥೨೭॥**

**ಅ ॥** ತಡೆಯಲಶಕ್ಯವಾದ ಕೋದಂಡಾಖ್ಯ ಧನುಸ್ಸು ಕೈಯಲ್ಲುಳ್ಳ ಶ್ರೀ ರಾಮನು ಎಲ್ಲಾ ಭಕ್ತಜನರ ಸಮುದಾಯಕ್ಕೆ ಕ್ಷೇಮವನ್ನು ಮಾಡುವುದಕ್ಕೋಸ್ಕರ ಶೂರ್ಪನಖಿಯಿಂದ (ರಾಮನನ್ನು ಸಂಹರಿಸುವುದಕ್ಕೋಸ್ಕರ) ಕಳುಹಿಸಿಕೊಳ್ಳಲ್ಪಟ್ಟ ತತ್ಕಾಲದಲ್ಲಿಯೇ ಭಯಂಕರವಾದ

ಶಾರೀರಬಲದಶೆಯಿಂದ ಅಥವಾ ಭಯಂಕರವಾದ ಸೇನಾಸಮೂಹದಶೆಯಿಂದ (ಯುದ್ಧಮಾತ್ರ ಪುರಸ್ಕೃತರು) ಬಂದಿರತಕ್ಕ ಅಥವಾ ಭಯಂಕರವಾದ ಸಾಮರ್ಥ್ಯವುಳ್ಳ ಹದಿನಾಲ್ಕುಸಹಸ್ರ ಸಂಖ್ಯಾಕರಾದ ಶೂರ್ಪನಖಿಯ ಖರ, ತ್ರಿಶಿರ, ದೂಷಣಾಸುರರೇ ಪ್ರಧಾನರಾಗಿ ಉಳ್ಳ ಬಾಂಧವರನ್ನು ಸಂಹರಿಸಿದನು ॥೨೭॥

ಮೂ ॥ ದತ್ತೇಽಭಯೇ ರಘುವರೇಣ ಮಹಾಮುನೀನಾಂ
ದತ್ತೇ ಭಯೇ ಚ ರಜನಿ ಚರಮಂಡಲಸ್ಯ ॥
ರಕ್ಷಃಪತಿಃ ಸ್ವಸೃಮುಖಾದವಿಕಂಪನಾಚ್ಚ
ಶ್ರುತ್ವಾ ಬಲಂ ರಘುಪತೇಃ ಪರಮಾಪ ಚಿಂತಾಂ ॥೨೮॥

ಅ ॥ ಶ್ರೀ ರಾಮನಿಂದ ಶ್ರೇಷ್ಠರಾದ ಮುನಿಗಳಿಗೆ ಅಭಯವು ಕೊಡಲ್ಪಡುತ್ತಿರಲು ಹಾಗೆಯೇ ರಾಕ್ಷಸರ ಸಮುದಾಯಕ್ಕೆ ಭಯವೂ ಕೊಡಲ್ಪಡುತ್ತಿರಲು ರಾಕ್ಷಸರಿಗೆ ಅಧಿಪತಿಯಾದ ರಾವಣನು, ತಂಗಿಯಾದ ಶೂರ್ಪನಖಿಯ ಮುಖದಿಂದಲೂ ಅವಿಕಂಪನನೆನ್ನುವ ರಾಕ್ಷಸನಿಂದಲೂ ಶ್ರೀ ರಾಮನ ಉತ್ಕೃಷ್ಟವಾದ ಸ್ವಾಭಾವಿಕ ಶಕ್ತಿಯನ್ನು ಕೇಳಿ ಮಹಾವ್ಯಥೆಯನ್ನು ಹೊಂದಿದನು ॥೨೮॥

ಮೂ ॥ ಶ್ರು (ಸ) ತ್ವಾಶು ಕಾರ್ಯಮನುವನ್ಮೃಶ್ಯ ಜಗಾಮ ತೀರೇ
ಕ್ಷೇತ್ರಂ ನದೀನದಪತೇಃ ಶ್ರವಣಂ ಧರಿತ್ರ್ಯಾಃ ।
ಮಾರೀಚಮತ್ರ ತಪಸಿ ಪ್ರತಿವರ್ತಮಾನಂ
ಭೀತಂ ಶರಾದ್ರಘುಪತೇರ್ನಿತರಾಂ ದದರ್ಶ ॥೨೯॥

ಅ ॥ ರಾವಣನು (ಶ್ರೀ ರಾಮನ ಬಲವನ್ನು) ಕೇಳಿ ಅಥವಾ ಆ ರಾವಣನಾದರೂ ಶೀಘ್ರದಲ್ಲಿ ಕಾರ್ಯವನ್ನು ವಿಚಾರಮಾಡಿ ನದಿಗಳೂ ನದ (ಗಂಡುನದಿ)ಗಳೂ ಇವುಗಳಿಗೆ ಸ್ವಾಮಿಯಾದ ಸಮುದ್ರದ ತೀರದಲ್ಲಿ ಗೋರೂಪ ಭೂಮಿಗೆ ಶ್ರೋತ್ರರೂಪವಾದ ಗೋಕರ್ಣ ಕ್ಷೇತ್ರವನ್ನು ಕುರಿತು ಹೋದನು. ಶ್ರೀ ರಾಮನ ಬಾಣದಶೆಯಿಂದ ಅತ್ಯಂತವಾಗಿ ಮೊದಲು ಹೆದರಿದ ಮತ್ತು ಈ ಗೋಕರ್ಣಕ್ಷೇತ್ರದಲ್ಲಿಯೇ ತಪಸ್ಸಿನಲ್ಲಿರತಕ್ಕ (ಅಂದರೆ, ತಪಸ್ಸನ್ನು ಮಾಡಿಕೊಂಡಿರುವ) ಮಾರೀಚನೆಂಬ ರಾಕ್ಷಸನನ್ನು ಕಂಡನು.

**ವಿಶೇಷಾಂಶ—** ದ್ವಾರಕನ್ಯಾಪಟ್ಟಣದಿಂದ ಗೋಕರ್ಣಪರ್ಯಂತರವಾಗಿ ಯಾವದು ಪರಶುರಾಮನ ಭೂಮಿಯೋ ಅದು ಗೋರೂಪದಿಂದಿರುತ್ತದೆ. ಆ ಗೋರೂಪವಾದ ಭೂಮಿಯ ಕೆಚ್ಚಲು ಕೋಟೇಶ್ವರದ ಸಮೀಪ ಭೂಮಿಯಲ್ಲಿದೆ. ಆದುದರಿಂದಲೇ ಆ ಭೂಮಿಯು ಬಹು ಸಸ್ಯಾದಿಗಳಿಂದ ಸಮೃದ್ಧವಾಗಿದೆ. ಕಿವಿಯಾದರೂ ಗೋಕರ್ಣಪ್ರಥಿವಿಯಲ್ಲಿದೆ ಎಂದು ಭಾರತದಲ್ಲಿದೆ. ಆದುದರಿಂದಲೇ 'ಧರಿತ್ರ್ಯಾಃಶ್ರವಣಂ' ಎಂದು ಆಚಾರ್ಯರು ಹೇಳಿರುವರು ॥೨೯॥

ಮೂ ॥ ತೇನಾರ್ಥಿತಃ ಸಪದಿ ರಾಘವವಂಚನಾರ್ಥಂ (ರ್ಥೇ)
ಮಾರೀಚ ಆಹ ಶರವೇಗಮಮುಷ್ಯ ಜಾನನ್ ॥
ಶಕ್ಯೋನ ತೇ ರಘುನರೇಣ ಹಿ ವಿಗ್ರಹೋಽತ್ರ
ಜಾನಾಮಿ ಸಂಸ್ಪರ್ಶಮಸ್ಯ ಶರಸ್ಯ ಪೂರ್ವಂ ॥೩೦॥

ಅ ॥ ಆ ರಾವಣನಿಂದ ಶ್ರೀ ರಾಮನನ್ನು ಮೋಸಗೊಳಿಸುವುದಕ್ಕಾಗಿ ತತ್ಕ್ಷಣದಲ್ಲಿಯೇ ಪ್ರಾರ್ಥಿಸಿಕೊಳ್ಳಲ್ಪಟ್ಟ ಶ್ರೀ ರಾಮನ ಬಾಣದ ವೇಗವನ್ನು ಮೊದಲೇ ತಿಳಿದಿರುವ ಮಾರೀಚನು ನನಗೆ ಶ್ರೀ ರಾಮನಿಂದ ವಿರೋಧವು ಶಕ್ಯವಾಗಲಾರದು. ನಾನು ಈ ರಾಮನ ಬಾಣದ ಸಂತಾಪವನ್ನು ಮೊದಲೇ ಯಾವಕಾರಣದಿಂದ ತಿಳಿದಿರುವೆನೋ ಆದಕಾರಣ ಇಲ್ಲಿಯೇ ಇರುತ್ತೇನೆಂದು ಹೇಳಿದನು.

ವಿಶೇಷಾಂಶ – ಮಾರೀಚನು ಓಡಿಹೋಗುವುದಕ್ಕಾಗಿಯೇ ಮೆಲ್ಲಗೆ ಶ್ರೀ ರಾಮನು ಬಾಣವನ್ನು ಬಿಟ್ಟದ್ದು. ಆದಕಾರಣ ಚೆನ್ನಾಗಿ ಮಾರೀಚನ ಅಂಗಕ್ಕೆ ಬಾಣದ ಸ್ಪರ್ಶವಾಗಲಿಲ್ಲ ಎಂದು ಸೂಚಿಸುವುದಕ್ಕಾಗಿ ಸ್ಪರ್ಶವೆಂದು ವಿಶೇಷವಾಗಿ ಹೇಳಿದ್ದು ॥೩೦॥

ಮೂ ॥ ಇತ್ಯುಕ್ತವಂತಮಥ ರಾವಣ ಆಹ ಖಡ್ಗಂ
ನಿಷ್ಕೃಷ್ಯ ಹನ್ಮಿಯದಿ ಮೇ ನ ಕರೋಷಿ ವಾಕ್ಯಂ ॥
ತಚ್ಛ್ರುತ್ವಾನ್ಯಯುತೋSಥ ನಿಸರ್ಗತಶ್ಚ
ಸಾಪ್ಯೋ ಜಗಾಮ ರಘುನರ್ಯಸಕಾಶಮಾಶು ॥೩೧॥

ಅ ॥ ಮಾರೀಚನು ಹೇಳಿದೊಡನೆಯೇ ರಾವಣನು ಹೀಗೆ ಹೇಳಿದ ಮಾರೀಚನನ್ನು ಕುರಿತು ಕೋಪದಿಂದ ಖಡ್ಗವನ್ನು ತೆಗೆದು ಹೇಳಿದನು. ಯಾವ ಪಕ್ಷದಲ್ಲಿ ನನ್ನ ವಾಕ್ಯವನ್ನು (ನೀನು) ನಡಿಸುವುದಿಲ್ಲವೋ (ಹಾಗಾದರೆ ನಿನ್ನನ್ನು) ಕೊಲ್ಲುತ್ತೇನೆ. ಆ ಮೇಲೆ ಆ ರಾವಣನ ವಾಕ್ಯವನ್ನು ಕೇಳಿದ ಭಯದಿಂದ ಕೂಡಿದ ಸ್ವಾಭಾವಿಕವಾಗಿ ದೋಷರೂಪನಾದ ಮತ್ತು ವಿಷ್ಣು ದ್ವೇಷಿಯ ಆದ ಮಾರೀಚನು ಶೀಘ್ರದಲ್ಲಿ ಶ್ರೀರಾಮನ ಸಮೀಪವನ್ನು ಕುರಿತು ಹೋದನು ॥೩೧॥

ಮೂ ॥ ಸಂ(ಸ)ಪ್ರಾಪ್ಯ ಹೈಮಮೃಗತಾಂ ಬಹುರತ್ನಚಿತ್ರಃ
ಸೀತಾಸಮೀಪ ಉಗರಥಾ ವಿಚಚಾರ ಶೀಘ್ರಂ ॥
ನಿರ್ದೋಷನಿತ್ಯಚರಸಂವಿದಪಿ ಸ್ಮದೇವೀ
ರಕ್ಷೋವಧಾಯ ಜನಮೋಹಕೃತೇ ತಥಾ ಹ ॥೩೨॥

ಅ ॥ ಸುವರ್ಣಸಂಬಂಧಿಯಾದ ವರ್ಣವುಳ್ಳ ಜಿಂಕೆಯ ಮೃಗತನವನ್ನು ಹೊಂದಿ ಅನೇಕ ರತ್ನದಂತೆ ಅನೇಕ ವರ್ಣಗಳುಳ್ಳ ಮೃಗರೂಪನಾದ ಮಾರೀಚನು ಬಹುಪ್ರಕಾರವಾಗಿ ಸೀತಾದೇವಿಯ ಸಮೀಪದಲ್ಲಿ ಶೀಘ್ರವಾಗಿ ಸಂಚರಿಸಿದನು. ಸೀತಾದೇವಿಯು ಅಜ್ಞಾನಸಂಬಂಧರಹಿತ ಮಾನ ಉತ್ಪತ್ತಿಯೂ ನಾಶವೂ ಇಲ್ಲದಿರುವ ಶ್ರೇಷ್ಠವಾದ ಜ್ಞಾನವುಳ್ಳವಳಾದಾಗ್ಯೂ ರಾಕ್ಷಸರನ್ನು ಸಂಹರಿಸುವುದಕ್ಕೋಸ್ಕರವೂ ದುಷ್ಟಜನರಿಗೆ ಅಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೂ (ಹೇಗೆ ರಾಕ್ಷಸರ ಸಂಹಾರವೂ, ದುಷ್ಟಜನರಿಗೆ ಅಜ್ಞಾನೋತ್ಪತ್ತಿಯೂ ಆಗುವುದೋ) ಹಾಗೆ ಹೇಳಿದಳು ಪ್ರಮಾಣಸಿದ್ಧವು.

ವಿಶೇಷಾಂಶ— (1) ನಿರ್ದೋಷವಾದ ಜ್ಞಾನವುಳ್ಳ ಸೀತಾದೇವಿಗೆ ಅಜ್ಞಾನಿಗಳಂತೆ ಮಾತು ಉಚಿತವಾಗಿದೆ ಎಂದು ಸೂಚಿಸುವುದಕ್ಕಾಗಿ 'ಸಂವಿದಪಿ' ಎನ್ನುವಲ್ಲಿ ಅಪಿ ಪದವು (2) 'ಯಾ ಲೀಲಯಾ ಧೃತತನೋರನುರೂಪರೂಪಾ' ಎನ್ನುವ ಪ್ರಮಾಣ ಪ್ರಸಿದ್ಧಿಯನ್ನು ಸೂಚಿಸುವುದಕ್ಕಾಗಿ 'ಸ್ಮ' ಎನ್ನುವ ಪದವು ॥೩೨॥

ಮೂ ॥ ದೇವ್ಯೇವಮಾಶು ಪರಿಗೃಹ್ಯ ಚ ದೇಹಿ ಮೇ ತ್ವಂ
ಕ್ರೀಡಾಮೃಗಂ ತ್ವಿತಿ ತಯೋದಿತ ಏವ ರಾಮಃ ॥
ಅನ್ವಕ್ಸಸಾರ ಹ ಶರಾಸನಬಾಣಪಾಣಿಃ
ಮಾಯಾಮೃಗಂ ನಿಶಿಚರಂ ನಿಜಘಾನ ಜಾನನ್ ॥೩೩॥

ಅ ॥ ಕ್ರೀಡಾದಿಗುಣವಿಶಿಷ್ಟನಾದ ಪ್ರಿಯನೇ ಕ್ರೀಡೆಗೆ ಯೋಗ್ಯವಾಗಿ ಕಾಣತಕ್ಕ ಈ ಮೃಗವನ್ನು ಶೀಘ್ರದಲ್ಲಿ ಹಿಡಿದು ನೀನು ನನಗೆ ಕೊಡು. ಈ ಪ್ರಕಾರವಾಗಿ ಆ ಸೀತಾದೇವಿಯಿಂದ ಶ್ರೀ ರಾಮನು ಹೇಳಲ್ಪಟ್ಟವನಾಗಿಯೇ ಬಿಲ್ಲುಬಾಣವೂ ಕೈಯಲ್ಲಿವುಳ್ಳವನಾಗಿ ಹಿಂದು ಕಡೆಯಿಂದ ಹೋದನು. ಕಪಟದಿಂದ ಮೃಗಭೂತನಾದ ರಾಕ್ಷಸನಾದ ಮಾರೀಚನನ್ನು ತಿಳಿದವನಾಗಿ ಸಂಹರಿಸಿದನು.

ವಿಶೇಷಾಂಶ ಸರ್ವತ್ರ ವ್ಯಾಪ್ತನಾದ ಶ್ರೀ ರಾಮನಿಗೆ ಜಿಂಕೆಯ ಹಿಂದೆ ಹೋಗುವದು ಕೂಡದಿರುವುದರಿಂದ ಅಜ್ಞ ಜನರ ಪ್ರಸಿದ್ಧಿಯಿಂದ ಹೋದದ್ದೆಂದು ಸೂಚಿಸುವುದಕ್ಕಾಗಿ **ಸಸಾರ** ಎಂದು ಹೇಳಿದ್ದು. ॥೩೩॥

ಮೂ ॥ ತೇನಾಹತಃ ಶರವರೇಣ ಭೃಶಂ ಮುಮಾರ
ವಿಕ್ರುಶ್ಯ ಲಕ್ಷ್ಮಣಮುರುವ್ಯಥಯಾ ಸ ಪಾಪಃ ॥
ಶ್ರುತ್ವೈವ ಲಕ್ಷ್ಮಣಮಚೂಚುದದುಗ್ರವಾಕ್ಯೈಃ
ಸೋಽಪ್ಯಾಪ ರಾಮಪಥಮೇವ ಸಚಾಪಬಾಣಃ ॥೩೪॥

ಅ ॥ ಆ ರಾಮನಿಂದ ಬಾಣಶ್ರೇಷ್ಠದಿಂದ ಚೆನ್ನಾಗಿ ಹೊಡೆಯಲ್ಪಟ್ಟ ಪಾಪರೂಪನಾದ ಆ ಮಾರೀಚನು ಕಠಿಣವಾದ ವೇದನೆಯಿಂದ ಲಕ್ಷ್ಮಣನನ್ನು ಎಲೌ 'ಲಕ್ಷ್ಮಣನೇ' ಎಂದು ಕರೆದು ಮರಣವನ್ನು ಹೊಂದಿದನು. (ಸೀತಾದೇವಿಯು ಲಕ್ಷ್ಮಣಾ ಎಂದು ಕೂಗುವ ಕೂಗನ್ನು) ಕೇಳಿದೊಡನೆಯೇ ಅತಿ ನಿಷ್ಠುರಗಳಾದ ವಚನಗಳಿಂದ ಲಕ್ಷ್ಮಣನನ್ನು ಪ್ರೇರಿಸಿದಳು. ಆ ಲಕ್ಷ್ಮಣನಾದರೂ ಬಿಲ್ಲು ಬಾಣಗಳಿಂದ ಕೂಡಿದವನಾಗಿ ರಾಮನು ಹೋದ ಮಾರ್ಗವನ್ನೇ ಹೊಂದಿದನು. ॥೩೪॥

ಇಲ್ಲಿ ಸೀತಾದೇವಿಗೂ ರಾಮನಿಗೂ ಪ್ರಾಪ್ತವಾದ ಅಜ್ಞಾನವನ್ನು ಪರಿಹರಿಸುತ್ತಾರೆ—

ಮೂ ॥ ಯಾಂ ಯಾಂ ಪರೇಶ ಉರುಧೈವ ಕರೋತಿ ಲೀಲಾಂ
ತಾಂ ತಾಂ ಕರೋತ್ಯನು ತಥೈವ ರಮಾಪಿ ದೇವೀ ॥
ನೈತಾವತಾಸ್ಯ ಪರಮಸ್ಯ ತಥಾ ರಮಾಯಾಃ
ದೋಷೋಽಣುರಪ್ಯನುವಿಚಿಂತ್ಯ ಉರುಪ್ರಭೂ ಯತ್ ॥೩೫॥

ಅ ॥ ಸರ್ವೇಶ್ವರನಾದ ಶ್ರೀ ಹರಿಯು ಬಹುಪ್ರಕಾರವಾಗಿ ಯಾವ ಯಾವ ಕ್ರೀಡೆಯನ್ನು ಅನುಸರಿಸುತ್ತಾನೋ ಅವಾವ ಕ್ರೀಡೆಯನ್ನು ಹಾಗೆಯೇ ಲಕ್ಷ್ಮೀಸ್ವರೂಪಳಾದ ಸೀತಾದೇವಿಯೂ ಕೂಡಾ ಅನುಕರಿಸುತ್ತಾಳೆ. ಹೀಗೆ ಲೌಕಿಕವನ್ನು ಅನುಕರಣಮಾಡಿದ್ದರಿಂದ ಈ ಸರ್ವೋತ್ತಮನಾದ ಶ್ರೀರಾಮನಿಗೂ, ಹಾಗೆಯೇ ಲಕ್ಷ್ಮೀಸ್ವರೂಪಳಾದ ಸೀತಾದೇವಿಗೂ ಸ್ವಲ್ಪವೂ ಕೂಡ ಅಜ್ಞಾನ ದುಃಖಾದಿದೋಷವು ಆಲೋಚಿಸಲಿಕ್ಕೂ ಕೂಡದು ಯಾವ ಕಾರಣದಿಂದ ಶ್ರೇಷ್ಠರಾದ ಬ್ರಹ್ಮಾದಿಗಳಿಗೂ ನಿಯಾಮಕರಾಗಿರುತ್ತಾರೋ (ಅದರಿಂದಲೇ ದೋಷ ಲೇಶವೂ ಇಲ್ಲ.) ॥೩೫॥

ಮೂ ॥ ಕ್ವಾಜ್ಞಾನಮಾಪದಸಿ ಮಂದಕಟಾಕ್ಷಮಾತ್ರಾತ್ (ತ್ರ)
ಸರ್ಗಸ್ಥಿತಿಪ್ರಲಯಸಂಸೃತಿ ಮೋಕ್ಷಹೇತೋಃ ॥
ದೇವ್ಯಾ ಹರೇಃ ಕಿಮು ವಿಡಂಬನಮಾತ್ರಮೇತತ್
ವಿಕ್ರೀಡತೋಃ ಸುರನರಾದಿವದೇವ ತಸ್ಮಾತ್ ॥೩೬॥

ಅ ॥ ಸ್ವಲ್ಪ ಕಡೆಗಣ್ಣಿನ ನೋಟದಿಂದಲೇ ಸೃಷ್ಟಿ, ಸ್ಥಿತಿ, ನಾಶ, ಸಂಸಾರ, ಮೋಕ್ಷ ಇವುಗಳಿಗೆ ಕಾರಣಭೂತಳಾದ ಸೀತಾದೇವಿಗೂ ಅಜ್ಞಾನವೂ ಅಪತ್ತೂ ಕೂಡಾ ಎಲ್ಲಿ? (ಇಲ್ಲವೇ ಇಲ್ಲ.) ದೇವಿಯು ಸಕಾಶದೆಸೆಯಿಂದಲೂ ಉತ್ತಮನಾದ ಹರಿಗೆ ಅಜ್ಞಾನಾದಿಗಳು ಹೇಗೆ ಆಗುವುವು? ಅಥವಾ ಶ್ರೀ ಹರಿಗೆ ಈ ಮೃಗಗಳನ್ನು ಅನುಸರಿಸಿ ಹೋಗುವಿಕೆ ಮೊದಲಾದುದು ಯಾವುದಕ್ಕಾಗಿ (ಎಂದು ಪ್ರಶ್ನೆಯು) ಅಜ್ಞಾನಮೊದಲಾದ ದೋಷಗಳು ಇಲ್ಲದಿರುವುದರಿಂದ ದೇವತೆಗಳೂ ಮನುಷ್ಯರೂ ಮೊದಲಾದವರಂತೆ ಕ್ರೀಡೆಯನ್ನು ಮಾಡತಕ್ಕ ಸೀತಾದೇವಿಗೂ ಶ್ರೀ ರಾಮನಿಗೂ ಮೃಗವನ್ನು ಅನುಸರಿಸಿ ಹೋಗುವಿಕೆ ಮೊದಲಾದುದು ಕೇವಲ ವಿಡಂಬನವು. (ಅಜ್ಞಾನಾದಿ ದೋಷಗಳಿಂದ ಮಾಡಲ್ಪಟ್ಟದಲ್ಲ ಎಂದು ಉತ್ತರವು) ॥೩೬॥

ಮೂ ॥ ದೇವ್ಯಾಃ ಸಮೀಪಮಥ ರಾವಣ ಆಸಸಾದ
ಸಾಽದೃಶ್ಯತಾಮಗಮಸಪ್ಯವಿಷಹ್ಯಶಕ್ತಿಃ ॥
ಸೃಷ್ಟ್ವಾತ್ಮನಃ ಪ್ರತಿಕೃತಿಂ ಪ್ರಯಯೌ ಚ ಶೀಘ್ರಂ
ಕೈಲಾಸಮರ್ಚಿತ ಪದಾ ಸ್ಮವಸಚ್ಛಿವಾಭ್ಯಾಂ ॥೩೭॥

ಅ ॥ ಆ ಮೇಲೆ ರಾವಣನು ಸೀತಾದೇವಿಯ ಸಮೀಪವನ್ನು ಹೊಂದಿದನು. ಸಹಿಸಲಿಕ್ಕೆ ಅಶಕ್ಯವಾದ ಸಾಮರ್ಥ್ಯವುಳ್ಳ ಆ ಸೀತಾದೇವಿಯು ತನ್ನ ಪ್ರತಿಮೆಯನ್ನು (ಅಗ್ನಿಯಿಂದ) ಸೃಷ್ಟಿ ಮಾಡಿಸಿ ಅದೃಶ್ಯತ್ವವನ್ನು ಹೊಂದಿದಳು. ಶೀಘ್ರದಲ್ಲಿ ಕೈಲಾಸಪರ್ವತವನ್ನು ಕುರಿತುಹೋದಳು. ಪಾರ್ವತೀ-ಪರಮೇಶ್ವರರಿಂದ ಪೂಜಿಸಿಕೊಳ್ಳಲ್ಪಟ್ಟ ಪಾದವುಳ್ಳ ಸೀತಾದೇವಿಯು ಕೈಲಾಸಪರ್ವತದಲ್ಲಿ ಅವಾಸಮಾಡಿಕೊಂಡಿದ್ದಳು.

ವಿಶೇಷಾಂಶ— ರಾವಣನನ್ನು ಸಂಹರಿಸುವ ವಿಷಯದಲ್ಲಿ ಸೀತಾದೇವಿಗೇನೇ ಶಕ್ತಿಯು ಸಂಭಾವಿತವಾಗಿದೆ ಎಂದು ಸೂಚಿಸುವುದಕ್ಕಾಗಿ ಅಪಿಪದವು. ॥೩೭॥

ಹಾಗಾದರೆ ರಾವಣನಿಗೆ ಚೈತನ್ಯವಿಲ್ಲದಿರುವ ಪ್ರತಿಮೆಯಲ್ಲಿ ಇವಳು ಸೀತೆಯು ಎನ್ನುವ ಬುದ್ಧಿಯು ಹೇಗಾಯಿತು ಎಂದರೆ—

ಮೂ ॥ ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ
ದೇವ್ಯಾಶ್ಚ ಸನ್ನಿಧಿಯುತಾಂ ವ್ಯವಹಾರಸಿಧ್ಯೈ ॥
ಆದಾಯ ತಾಮಥ ಯಯೌ ರಜನೀಚರೇಂದ್ರೋ
ಹತ್ವಾ ಜಟಾಯುಷಮುರುಶ್ರಮತೋಽನಿರುದ್ಧಃ ॥೩೮॥

ಅ ॥ ದೇವೇಂದ್ರನು ಕೈಲಾಸಪರ್ವತಕ್ಕೆ ಹೋಗಿರುವ ಸೀತಾದೇವಿಯ ಸನ್ನಿಧಾನದಿಂದ ಕೂಡಿರುವ ಆಶ್ರಮದಲ್ಲಿ ನಿರ್ಮಿಸಿಕೊಳ್ಳಲ್ಪಟ್ಟ ಪ್ರತಿಮೆಯನ್ನು ವ್ಯವಹಾರವು(ಗಮನಮೊದಲಾದ ವ್ಯಾಪಾರಗಳು) ಸಿದ್ಧಿಯಾಗುವುದಕ್ಕಾಗಿ ಪ್ರವೇಶಮಾಡಿದನು. ಇಂದ್ರನು ಪ್ರವೇಶಮಾಡಿದ

ಮೇಲೆ ರಾಕ್ಷಸರಿಗೆ ಅಧಿಪತಿಯಾದ ರಾವಣನು (ಜಟಾಯುವಿನಿಂದ) ತಡೆಯಲ್ಪಟ್ಟವನಾಗಿ ಜಟಾಯುವನ್ನು ಬಹು ಪ್ರಯಾಸದಿಂದ ಸಂಹಾರಮಾಡಿ ಆ ಪ್ರತಿಮೆಯನ್ನು (ಆಶ್ರಮದಿಂದ) ಹಿಡಿದುಕೊಂಡುಹೋದನು. ||೩೮||

ಮೂ || ಮಾರ್ಗೇ ವ್ರಜಂತಮಭಿಯಾಯ ತತೋ ಹನೂಮಾನ್
ಸಂಹಾರಿತೋ ರವಿಸುತೇನ ಚ ಜಾನಮಾನಃ ||
ದೈವಂ ತು ಕಾರ್ಯಮಥ ಕೀರ್ತಿಮಭೀಪ್ಸಮಾನೋ
ರಾಮಸ್ಯ ನೈನಮಹನದ್ವಚನಾಚ್ಚ ರೇಶ್ಚ ||೩೯||

ಅ || ಜಟಾಯುವಿನ ಹತ್ತಿರ ಯುದ್ಧಮಾಡಿದ ಮೇಲೆ ಹನುಮಂತನು ಮಾರ್ಗದಲ್ಲಿ ಹೋಗತಕ್ಕ ರಾವಣನನ್ನು ಹೊಂದಿ ಸೂರ್ಯನ ಮಗನಾದ ಸುಗ್ರೀವನಿಂದ (ಕೊಲ್ಲಬೇಡವೆಂದು) ತಡೆಯಲ್ಪಟ್ಟವನಾಗಿ ದೇವತಾಸಂಬಂಧಿಯಾದ ಸರ್ವ ರಾಕ್ಷಸರ ಸಂಹಾರರೂಪವಾದ ಕಾರ್ಯ ವನ್ನು ತಿಳಿದವನಾಗಿ (ಅಂದರೆ ಈಗಲೇ ರಾವಣನನ್ನು ಸಂಹಾರ ಮಾಡಿದರೆ ಎಲಾ ರಾಕ್ಷಸರ ಸಂಹಾರವು ಆಗದೆ ಹೋಗುವುದು ಎಂದು ತಿಳಿದವನಾಗಿ) ಶ್ರೀ ರಾಮನಿಗೆ ಕೀರ್ತಿಯನ್ನು ಇಚ್ಛಿಸುವವನಾಗಿ (ಅಂದರೆ ರಾವಣನನ್ನು ಸಂಹರಿಸಿದ್ದರಿಂದ ಅಜ್ಞರಲ್ಲಿ ರಾಮನ ಬಲವು ಪ್ರಕಾಶ ವಾಗುವುದು ಎಂದು ಇಚ್ಛಿಸಿದವನಾಗಿ) ಶ್ರೀ ಹರಿಯ ವಚನದಿಂದಲೂ (ಅಂದರೆ ಮೂರು ಜನ್ಮ ಗಳಲ್ಲಿಯೂ ನನ್ನಿಂದಲೇ ಸಂಹಾರಮಾಡಿಸಿಕೊಳ್ಳಲ್ಪಡಲಿಕ್ಕೆ ಯೋಗ್ಯರಾಗುವಿರಿ. ಎಂದು ಮೊದಲೇ ಜಯವಿಜಯರನ್ನು ಕುರಿತು ಹೇಳಿದ ಮಾತಿನಿಂದಲೂ) ಈ ರಾವಣನನ್ನು ಸಂಹಾರ ಮಾಡಲಿಲ್ಲ ||೩೯||

ಮೂ || ಪ್ರಾಪ್ಯೈವ ರಾಕ್ಷಸ ಉತಾತ್ಮಪುರೀಂ ಸ ತತ್ರ
ಸೀತಾಕೃತಿಂ ಪ್ರತಿ ನಿಧಾಯ ರರಕ್ಷ ಚಾಥ ||
ರಾಮೋಽಪಿ ತತ್ರ ವಿನಿಹತ್ಯ ಸುದುಷ್ಟರಕ್ಷಃ
ಪ್ರಾಪ್ಯಾಶ್ರಮಂ ಸ್ವನಯಿತಾಂ ನ ಹಿ ಪಶ್ಯತೀವ ||೪೦||

ಅ || ರಾಕ್ಷಸನಾದ ರಾವಣನು ತನ್ನ ಪಟ್ಟಣವಾದ ಲಂಕೆಯನ್ನು ಹೊಂದಿ ಆ ಪಟ್ಟಣ ದಲ್ಲಿ ಸೀತಾದೇವಿಯ ಆಕಾರವನ್ನು ಇಟ್ಟು ರಕ್ಷಿಸುತ್ತಲೇ ಇದ್ದನು. (ಅಂದರೆ ಬೇರೆ ಕಡೆ ಹೋಗುವ ವಿಷಯದಲ್ಲಿ ತಡೆಯುತ್ತಲಿದ್ದನು.) ಆ ಮೇಲೆ ಶ್ರೀ ರಾಮನಾದರೂ (ತಾನು ಇರು ವಾಗ ಕಪಟವನ್ನು ಮಾಡಿದ್ದರಿಂದಲೂ, ಮರಣಕಾಲದಲ್ಲಿಯೂ ಇತರರಿಗೆ ಅಪಕಾರವನ್ನು ಮಾಡಿ ದ್ದರಿಂದಲೂ, ಬೇರೆ ದೈತ್ಯರ ದೆಸೆಯಿಂದಲೂ) ವಿಶೇಷವಾಗಿ ಅತಿ ದುಷ್ಟನಾದ ಮಾರೀಚನನ್ನು ವ ರಾಕ್ಷಸನನ್ನು ಸಂಹಾರಮಾಡಿ ಆಶ್ರಮವನ್ನು ಹೊಂದಿ ತನ್ನ ಪ್ರಿಯಳಾದ ಸೀತಾದೇವಿಯನ್ನು ನೋಡುವುದಿಲ್ಲವೆನ್ನುವ ಹಾಗೆ ಆದನು. 'ಏಷ ಸರ್ವಜ್ಞ' ಇತ್ಯಾದಿ ಶ್ರುತಿಸಿದ್ಧವಾದ ಸರ್ವಜ್ಞ ತ್ವಕ್ಕೆ ವಿರುದ್ಧವಾದ ಅಸರ್ವಜ್ಞತ್ವವು ಪ್ರಸಿದ್ಧವಾಯಿತು. ||೪೦||

ಮೂ || ಅನ್ವೇಷಮಾಣ ಇವ ತಂ ಚ ದದರ್ಶ ಗೃಧ್ರಂ
ಸೀತಾಂ (ತಾ) ರಿರಕ್ಷಿಷುಮಥೋ ರಿಪುಣಾ ವಿಶಸ್ತಂ ||
ಮಂದಾತ್ಮಚೇಷ್ಟಮಮುನೋಕ್ತಮರೇಶ್ಚ ಕರ್ಮ
ಶ್ರುತ್ವಾ ಮೃತಾ ತಮಹದತ್ಸ್ವಗತಿಂ ತಥಾದಾತ್ ||೪೧||

ಅ || ಸೀತಾದೇವಿಯನ್ನು ಹುಡುಕುವವನಂತೆ (ಅತ್ತಿತ್ತ ತಿರುಗಾಡತಕ್ಕ ಶ್ರೀ ರಾಮನು) ಸೀತಾದೇವಿಯನ್ನು ರಕ್ಷಣೆ ಮಾಡಲಿಕ್ಕೆ ಇಚ್ಛಿಸಿದ ಹಾಗೆ ವೈರಿಯಾದ ರಾವಣನಿಂದ ಸಂಹರಿಸಿ ಕೊಳ್ಳಲ್ಪಟ್ಟವನಂತೆ ಅದ ಅಲ್ಪವಾದ ಜೀವನ ವ್ಯಾಪಾರವುಳ್ಳ ಗೃಧ್ರ(ಹದ್ದು) ಪಕ್ಷಿಸ್ವರೂಪವಾದ ಜಟಾಯುವನ್ನು ಕಂಡನು. ಈ ಜಟಾಯುವಿನಿಂದ ಹೇಳಲ್ಪಟ್ಟ ವೈರಿಯಾದ ರಾವಣನ ಸೀತಾ ದೇವಿಯ ಪ್ರತಿಮೆಯ ಅಪಹಾರ ಮೊದಲಾದ ಕರ್ಮವನ್ನು ಕೇಳಿ ಮರಣವನ್ನು ಹೊಂದಿದ ಆ ಜಟಾಯುವನ್ನು ಸುಟ್ಟನು. ಹಾಗೆಯೇ ತಾನು ಮಾಡಿದ ಸಂಸ್ಕಾರಕ್ಕೆ ಅನುಗುಣವಾದ ತನ್ನ ಲೋಕದ ಗಮನವನ್ನು ಕೊಟ್ಟನು. ||೪೧||

ಮೂ || ಅನ್ಯತ್ರ ಚೈವ ವಿಚರನ್ಸಹಿತೋಽನುಜೇನ
ಪ್ರಾಪ್ತಃ ಕರೌ ಸ ಸಹಸಾಥ ಕಬಂಧನಾಮ್ನಃ ||
ಧಾತುರ್ವರಾದಖಿಲಜಾಯಿನ ಉಜ್ಝಿತಸ್ಯ
ಮೃತ್ಯೋಃಶ್ಚ ವಜ್ರಪತನಾದತಿಕುಂಚಿತಸ್ಯ ||೪೨||

ಅ || ಗೃಧ್ರಕ್ಕೆ ಗತಿಯನ್ನು ಕೊಟ್ಟ ಮೇಲೆ ಬೇರೆ ಕಡೆ ಸಂಚಾರ ಮಾಡಿಕೊಂಡೇ ತಮ್ಮ ನಾದ ಲಕ್ಷ್ಮಣನಿಂದ ಕೂಡಿದ ಆ ಶ್ರೀ ರಾಮನು ಬ್ರಹ್ಮದೇವರ ವರದೆಶ್ಶೆಯಿಂದ ಎಲ್ಲರನ್ನೂ ಗೆಲ್ಲತಕ್ಕ ಮತ್ತು ಮರಣದಿಂದಲೂ ರಹಿತನಾದ (ಇಂದ್ರನಿಂದ ಬಿಡಲ್ಪಟ್ಟ) ವಜ್ರದ ಪಾತದ ದೆಶೆ ಯಿಂದ ಅತ್ಯಂತವಾಗಿ ಹೊಟ್ಟೆಯಲ್ಲಿ ಶಿರಸ್ಸೂ ಊರೂ ಇವುಗಳ ಪ್ರವೇಶದ ದೆಶೆಯಿಂದ ಸಂಕೋಚವನ್ನು ಹೊಂದಿದ ಕಬಂಧ ನಾಮಕನಾದ ರಾಕ್ಷಸನ ಕೈಗಳನ್ನು ಅಕಸ್ಮಾತ್ತಾಗಿ ಹೊಂದಿದನು.

**ವಿಶೇಷಾಂಶ** ಕಬಂಧವೇ ಕಾಣುತ್ತದೆ. ಶಿರಸ್ಸಾದರೂ ವಜ್ರಪಾತದ ದೆಶೆಯಿಂದ ಕಬಂಧದೊಳಗೆ ವಿವರವಲ್ಲಿಯೇ ಸಂಬದ್ಧವಾಗಿದೆ. ಆದ ಕಾರಣ ಆ ರಾಕ್ಷಸಿಗೂ ಕಬಂಧ ನೆಂದು ಹೆಸರು. ||೪೨||

ಮೂ || ಛಿತ್ವಾsಸ್ಯ ಬಾಹುಯುಗಲಂ ಸಹಿತೋಽನುಜೇನ
ತಂ ಪೂರ್ವವತ್ಕೃತವಿಧಾಯ ಸುರೇಂದ್ರ ಭೃತ್ಯಂ ||
ನಾಮ್ನಾ ದನುಂ ತ್ರಿಜಟಯೈನ ಪುರಾಭಿಜಾತಂ
ಗಂಧರ್ವಮಾಪ ಚ ತತೋಽಪಿ ತದರ್ಚಿತೋಽಗಾತ್ ||೪೩||

ಅ || ತಮ್ಮನಾದ ಲಕ್ಷ್ಮಣನಿಂದ ಕೂಡಿದ ಶ್ರೀ ರಾಮನು ಈ ಕಬಂಧನ ಬಾಹುಗಳೆರ ಡನ್ನು ತುಂಡುಮಾಡಿ (ಅಂದರೆ ಒಂದು ಬಾಹುವನ್ನು ಶ್ರೀರಾಮನೂ, ಮತ್ತೊಂದನ್ನು ಲಕ್ಷ್ಮಣನೂ ತುಂಡುಮಾಡಿ) ಆ ದೇಹವನ್ನು ವಿರಾಧನಂತೆ ಮಾಡಿ (ಅಂದರೆ ಜಲಕ್ಕೆ ಪ್ರವೇಶಮಾಡಿಸಿ) ವಿಶ್ವಾ ವಸು ಎನ್ನುವ ಗಂಧರ್ವನನ್ನು ತ್ರಿಜಟಾ ನಾಮಕಳಾದ ರಾಕ್ಷಸಿಯಿಂದಲೇ (ಸ್ಥೂಲ ಶಿರಸ್ಸ ನ್ನುವ ಬ್ರಾಹ್ಮಣನ ಶಾಪದಿಂದ) ಹುಟ್ಟಿರುವವನನ್ನು ಇಂದ್ರಸ್ಪರ್ಧೆಗಿಂತ ಮೊದಲು ನಾಮದಿಂದ ದನುನಾಮಕ ರಾಕ್ಷಸನಾದ, ದೇವೇಂದ್ರನ ಭೃತ್ಯನಾದ ಗಂಧರ್ವನನ್ನು ಮೊದಲಿನಂತೆಯೇ ಜಲಕ್ಕೆ ಪ್ರವೇಶಮಾಡಿಸಿ, ದೇವೇಂದ್ರನ ಭೃತ್ಯನನ್ನಾಗಿ ಮಾಡಿ, ಆ ಪ್ರದೇಶದಿಂದಲೂ ಆ ವಿಶ್ವಾವಸುವಿನಿಂದ ಪೂಜಿಸಿಕೊಳ್ಳಲ್ಪಟ್ಟವನಾಗಿ ಹೋದನು.

**ವಿಶೇಷಾಂಶ—** (1) ವಿಶ್ವಾವಸು ಎನ್ನುವ ಗಂಧರ್ವನು ಶಾಪದಿಂದ ದನುನಾಮಕ ರಾಕ್ಷಸನಾಗಿಯೂ ಹೊಟ್ಟೆಯಲ್ಲಿ ಆಸ್ಯವನ್ನು ಇಂದ್ರನು ಪ್ರವೇಶಮಾಡಿಸಿದ್ದರಿಂದ ಕಬಂಧ ನೆಂದು ಹೆಸರುಳ್ಳವನೂ ಆದನು. ಈತನು ಮೊದಲು ವಿಶ್ವಾವಸು ಎನ್ನುವ ಗಂಧರ್ವನೆಂದು ಆರಣ್ಯಪರ್ವದಲ್ಲಿ ಹೇಳಿಯದೆ. **'ತಸ್ಯಾವಚಕ್ಷ್ವೇ ಗಂಧರ್ವೋ ವಿಶ್ವಾವಸುರಹಂ ನೃಪ । ಪ್ರಾಪ್ತೋ ಬ್ರಾಹ್ಮಣ ಶಾಪೇನ ಯೋನಿಂ ರಾಕ್ಷಸಸೇವಿತಾಂ ।'** ಎಂದು ಹಾಗೆಯೇ ವಾಲ್ಮೀಕಿ ರಾಮಾಯಣದಲ್ಲಿ— **'ದನುರ್ನಾಮ್ನಾ ಚ ದಾನವಂ । ಇಂದ್ರಕೋಪಾದಿದಂ ರೂಪಂ ಪ್ರಾಪ್ತವಂತನುನ್ಯೈಹಿ ಚ ।'** ಎಂದು ದನು ಎನ್ನುವ ಹೆಸರಿನಿಂದ ದಾನವನೆಂದು ಹೇಳಿಯದೆ. ॥೪೩॥

**ಮೂ ॥ ದೃಷ್ಟ್ವಾತಮೇವ ಶಬರೀ ಪರಮಂ ಹರಿಂ ಚ**
**ಜ್ಞಾತ್ವಾ ವಿವೇಶ ದಹನಂ ಪುರತೋಽಸ್ಯ ತಸ್ಯೈ ॥**
**ಪ್ರಾದಾತ್ಸ್ವಲೋಕಮಿಮುಮೇವ ಹಿ ಸಾ ಪ್ರತೀಕ್ಷ್ಯ**
**ಪೂರ್ವಂ ಮತಂಗವಚನೇನ ವನೇಽತ್ರಸಾಭೂತ್ ॥೪೪॥**

ಅ ॥ (ಮೊದಲು ಯಾವ) ಶಬರಿಯು ಮಾತಂಗ ಋಷಿಯ ವಚನದಿಂದ ಶ್ರೀ ರಾಮ ನನ್ನು ಸರ್ವೋತ್ತಮನೆಂದು ತಿಳಿದು ಆ ರಾಮನನ್ನೇ ನೋಡಿ, ಈ ರಾಮನ ಮುಂಭಾಗದಲ್ಲಿ ಅಗ್ನಿಯನ್ನು ಪ್ರವೇಶಮಾಡಿದಳೋ, ಆ ಶಬರಿಗೋಸ್ಕರವೇ ತನ್ನ ಲೋಕವನ್ನು (ಶ್ರೀರಾಮನು) ಕೊಟ್ಟನು. **'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ'** ಇತ್ಯಾದಿ ಶ್ರುತಿ ಪ್ರಸಿದ್ಧವು. ಆ ಶಬರಿಯು ಈ ರಾಮನನ್ನೇ ಮೊದಲು ನಿರೀಕ್ಷಣೆ ಮಾಡಿ ಮತಂಗ ಋಷಿಯ ವನದಲ್ಲಿ ತ್ರಾಸವಿಲ್ಲ ದಿದ್ದವಳಾಗಿ ಆದಳು. (ಅಂದರೆ ಶಬರಿಯು ಮೊದಲು ರಾಮನು ಚಿತ್ರಕೂಟಕ್ಕೆ ಹೋಗುವ ಕಾಲದಲ್ಲಿ ಈ ವನಕ್ಕೆ ರಾಮನು ಬರುವನು ಎಂದು ಮಾತಂಗ ಋಷಿಯ ವಾಕ್ಯದಿಂದ ಮತಂಗ ವನದಲ್ಲಿ ನಿರ್ಭಯಳಾಗಿದ್ದಳು) ॥೪೪॥

ಶಬರಿಯು ಮೊದಲು ಯಾರು ಎಂದರೆ—

**ಮೂ ॥ ಶಾಪಾದ್ವರಾಪ್ಸರಸಮೇವ ಹಿ ತಾಂ ವಿಮೋಚ್ಯ**
**ಶಚ್ಯಾಕೃತಾತ್ಪತಿಪುರಸ್ತ್ರಿ(ಸ್ತ್ರ್ಯ)ತಿ ದರ್ಪಹೇತೋಃ ।**
**ಗತ್ವಾ ದದರ್ಶ ಪವನಾತ್ಮಜಮೃಶ್ಯಮೂಕೇ**
**ಸ ಹ್ಯೇಕ ಏನುಮನಗಚ್ಛತಿ ಸಮ್ಯಗೀಶಂ ॥೪೫॥**

ಅ ॥ ಶ್ರೀ ರಾಮನು, ತನ್ನ ಗಂಡನಾದ ಇಂದ್ರನ ಮುಂಭಾಗದಲ್ಲಿ ಅಪ್ಸರ ಸ್ತ್ರೀಯಿಂದ ಮಾಡಲ್ಪಟ್ಟ ಗರ್ವನಿಮಿತ್ತವಾಗಿ ಶಚೀದೇವಿಯಿಂದ ಮಾಡಲ್ಪಟ್ಟ (ಶಬರ ಕುಲದಲ್ಲಿ ಹುಟ್ಟು ಎನ್ನುವ) ಶಾಪದ ದೆಸೆಯಿಂದ ನೀಚಯೋನಿಯನ್ನು ಹೊಂದಿದ ಉತ್ತಮಳಾದ ಅಪ್ಸರಸ್ತ್ರೀಯನ್ನು ಬಿಡಿಸಿ, (ಹನುಮಂತನಿಗೆ ಅನುಗ್ರಹ ಮಾಡುವುದಕ್ಕಾಗಿ ಶಬರಿಯ ಆಶ್ರಮದಿಂದ) ಹೋಗಿ ಶ್ರೀ ಹನುಮಂತನನ್ನು ಋಷ್ಯಮೂಕ ಎನ್ನುವ ಪರ್ವತದಲ್ಲಿ ಕಂಡನು. ಒಬ್ಬ ಹನುಮಂತನೇ ಸರ್ವಸಮರ್ಥನಾದ ಶ್ರೀ ರಾಮನನ್ನು ಚೆನ್ನಾಗಿ ತಿಳಿಯುತ್ತಾನೆ. (ಅಂದರೆ ಈ ರಾಮನು

ಸರ್ವರಿಗೂ ನಿಯಾಮಕನು ಎಂದು ಸಂಪೂರ್ಣವಾಗಿ ತಿಳಿಯುತ್ತಾನೆ). (ಆದ ಕಾರಣ ಅನುಗ್ರಹ ಮಾಡುವುದಕ್ಕಾಗಿಯೇ ಹೋದನು.) ಋಜುಯೋಗಿಗಳಿಗೆ ಸರ್ವಜ್ಞತ್ವವು ಪ್ರಸಿದ್ಧವು ॥೪೫॥

ಹಾಗಾದರೆ ಸುಗ್ರೀವಾದಿಗಳು ಇರುತ್ತಿರಲು ಹನುಮಂತನಲ್ಲಿಯೇ ಏತಕ್ಕೆ ಅನುಗ್ರಹವನ್ನು ಮಾಡಿದನು. ಎಂದರೆ, ವಾಯುವು ಶ್ರೀ ಹರಿಗೆ ಪ್ರಿಯನಾಗಿರುತ್ತಾನೆ. ವಾಯುವಿನ ಅವತಾರ ಭೂತನಾದಪ್ರಯುಕ್ತ ಹನುಮಂತನೂ ಪ್ರಿಯನಾಗಿರುತ್ತಾನೆಂದು ಹೇಳುವುದಕ್ಕಾಗಿ ವಾಯುವು ಪ್ರಿಯನಾಗಿರುತ್ತಾನೆನ್ನುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

ಮೂ ॥ ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ
ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಂ ।
ಕಸ್ಮಿನ್ನಹಂ ತ್ವಿತಿ ತಥೈವ ಹಿ ಸೋಽವತಾರೇ
ತಸ್ಮಾತ್ಸ ಮಾರುತಿಕೃತೇ ರವಿಜಂ ರರಕ್ಷ ॥೪೬॥

ಅ ॥ ಎಲ್ಲಾ ಪ್ರಾಣಿಗಳ ಶರೀರಗಳಲ್ಲಿಯೂ ಎಲ್ಲಿ ವಾಯುದೇವರು ಇದ್ದಾರೋ ಅಲ್ಲಿ ಶ್ರೀ ಹರಿಯು ಇರುತ್ತಾನೆ. ಎಲ್ಲಿ ಈ ಹರಿಯು ಇದ್ದಾನೋ ಅಲ್ಲಿಯೇ ವಾಯುದೇವರು ಇದ್ದಾರೆ, ಎಂದು 'ಕಸ್ಮಿನ್ನಹಂ' ಎನ್ನುವ ವೇದವಚನವು ಪ್ರಸಿದ್ಧವಾಗಿದೆ. ಆ ವಾಯುದೇವರು ರಾಮ ಕೃಷ್ಣಾದ್ಯವತಾರಗಳಲ್ಲಿ ಮೂಲರೂಪದಲ್ಲಿ ಹೇಗೋ ಹಾಗೆಯೇ ಪ್ರಿಯರಾಗಿರುತ್ತಾರೆ, (ಯಾವ ಕಾರಣದಿಂದ ಹನುಮಂತನು ಶ್ರೀ ರಾಮನಿಗೆ ಪ್ರಿಯನೋ) ಆದಕಾರಣ ಆ ಶ್ರೀ ರಾಮನು ಹನುಮಂತನ ಪ್ರೀತಿಗಾಗಿ ಸೂರ್ಯಪುತ್ರನಾದ ಸುಗ್ರೀವನನ್ನು ಪಾಲಿಸಿದನು.

ವಿಶೇಷಾಂಶ — (1) 'ಕಸ್ಮಿನ್ನಹಂ' ಎನ್ನುವ ಪ್ರತೀಕವನ್ನು ಗ್ರಹಣಮಾಡಿದರಿಂದ 'ಕಸ್ಮಿನ ಹಮುತ್ಕ್ರಾಂತ ಉತ್ಕ್ರಮಿಷ್ಯಾಮಿ ಕಸ್ಮಿನ್ನಹಂ ಸ್ಥಿತೇ ಸ್ಥಾಸ್ಯಾಮಿ' 'ಸ ಪ್ರಾಣ ಮಸೃಜತ' ಯಾರು ಹೋದೊಡನೆಯೇ ನಾನೂ ಪ್ರೇಮಾತಿಶಯದಿಂದ ಹೋಗುವೆನೋ, ಯಾರು ಇರುತ್ತಿರಲು ನಾನೂ ಕೂಡ ಇರುತ್ತೇನೋ ಅಂತಹ ಭಕ್ತನನ್ನು ಸೃಷ್ಟಿಮಾಡುತ್ತೇನೆಂದು ಆಲೋಚಿಸಿ ಆ ಪರಮಾತ್ಮನು ಪ್ರಾಣನನ್ನು ಸೃಷ್ಟಿಮಾಡಿದನು ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. ॥೪೬॥

ಹಾಗಾದರೆ ತನ್ನ ಪ್ರಯೋಜನಕ್ಕಾಗಿಯೇ ರಕ್ಷಿಸಿದನು. ಎಂದು ಏಕೆ ಆಗಲಾರದು ಎಂದರೆ— ಉದಾಹರಣಾಂತರವನ್ನೂ ಹೇಳುತ್ತಾರೆ—

ಮೂ ॥ ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷ-
ದ್ಭೀಮಾರ್ಥಮೇನ ತದರಿಂ ರವಿಜಂ ನಿಹತ್ಯ ॥
ಪೂರ್ವಂ ಹಿ ಮಾರುತಿಮವಾಪ ರವೇಃ ಸುತೋಽಯಂ
ತೇನಾಸ್ಯ ವಾಲಿನಮುಹನ್ರಘುಪಃ ಪ್ರತೀಪಂ ॥೪೭॥

ಅ ॥ ಈ ಪ್ರಕಾರ ಶ್ರೀ ಕೃಷ್ಣನ ಶರೀರವುಳ್ಳ ಶ್ರೀ ಹರಿಯು ಭೀಮಸೇನನಿಗೆ ಪ್ರೀತಿಯಾಗುವುದಕ್ಕಾಗಿಯೇ ಅರ್ಜುನನಿಗೆ ಶತ್ರುಭೂತನಾದ ಸೂರ್ಯನ ಪುತ್ರನಾದ ಕರ್ಣನನ್ನು ಸಂಹಾರಮಾಡಿ ಅರ್ಜುನನ್ನಾದರೂ ರಕ್ಷಿಸಿದನು. (ಹನುಮಂತನೂ ಕೂಡ ಶ್ರೇಷ್ಠನಾದ

ವಾಲಿಯನ್ನು ಬಿಟ್ಟು ಸುಗ್ರೀವನನ್ನು ಏತಕ್ಕೆ ಪರಿಗ್ರಹಿಸಿರುವನು ಎಂದರೆ) ಯಾವ ಕಾರಣದಿಂದ ಸೂರ್ಯನ ಪುತ್ರನಾದ ಈ ಸುಗ್ರೀವನು ಮೊದಲು ವಾಯುದೇವರನ್ನು ರಕ್ಷಕನನ್ನಾಗಿ ಹೊಂದಿರುವನೋ, ಆ ಕಾರಣದಿಂದ ಈ ಸುಗ್ರೀವನಿಗೆ ವಿರೋಧಿಯಾದ ವಾಲಿಯನ್ನು ಶ್ರೀ ರಾಮನು ಸಂಹರಿಸಿದನು. ॥೪೭॥

ಶ್ರೀ ಹರಿಗೆ ವಾಯುದೇವರು ಪ್ರಿಯರಾಗಿರುತ್ತಾರೆ ಎನ್ನುವ ವಿಷಯದಲ್ಲಿ ಕೇವಲ ರಾಮನಿಗೆ ಪ್ರಿಯರಾದದ್ದು ಪ್ರಯೋಜಕವಲ್ಲ, ಮತ್ತೆ ಸರ್ವ ದೇವತೆಗಳಿಗೂ ವಾಯುದೇವರು ಪ್ರಿಯರಾಗಿರುತ್ತಾರೆ ಎನ್ನುತ್ತಾರೆ ..

**ಮೂ ॥ ಏನಂ ಸುರಾಶ್ಚ ಪವನಸ್ಯ ವಶೇ ಯತೋಽತಃ**
**ಸುಗ್ರೀವಮತ್ರ ತು ಪರತ್ರ ಚ ಶಕ್ರಸೂನುಂ ॥**
**ಸರ್ವೇ ಶ್ರಿತಾ ಹನುಮತಸ್ತದನುಗ್ರಹಾಯ**
**ತತ್ಪ್ರಾಗಮದ್ರಘುಪತಿಃ ಸಹ ಲಕ್ಷ್ಮಣೇನ ॥೪೮॥**

ಅ ॥ ಹೀಗೆಯೇ (ವಾಯುದೇವರು ಪ್ರಿಯರಾಗಿರುತ್ತಾರೆ ಎನ್ನುವ ವಿಷಯದಲ್ಲಿ ಹೇತ್ವಂತರವಿದೆ) ಯಾವಕಾರಣದಿಂದ ಶೇಷನೇ ಮೊದಲಾದ ದೇವತೆಗಳು (ಮೂಲರೂಪದಿಂದ) ವಾಯುದೇವರ ಅಧೀನದಲ್ಲಿರುತ್ತಾರೋ, ಆದಕಾರಣ ಸರ್ವ ದೇವತೆಗಳ ಅವತಾರಭೂತರಾದ ಕಪಿಗಳು ಈ ರಾಮಾವತಾರದಲ್ಲಿ (ವಾಯುದೇವರಿಗೆ ಪ್ರಿಯರಾದುದರಿಂದ) ಸುಗ್ರೀವನನ್ನು ಆಶ್ರಯಿಸಿರುತ್ತಾರೆ. ಮುಂದೆ ಆಗತಕ್ಕ ಶ್ರೀ ಕೃಷ್ಣಾವತಾರದಲ್ಲಿ (ಭೀಮನಿಗೆ ಪ್ರಿಯನಾದುದರಿಂದ) ದೇವೇಂದ್ರನ ಮಗನಾದ ಅರ್ಜುನನನ್ನು ಎಲ್ಲಾ ದೇವತೆಗಳೂ ಆಶ್ರಯಿಸಿರುತ್ತಾರೆ (ಮೂಲರೂಪದಲ್ಲಿಯೂ, ಅವತಾರರೂಪದಲ್ಲಿಯೂ ವಾಯುದೇವರು ಎಲ್ಲಾ ದೇವತೆಗಳಿಗೂ ಆಶ್ರಯಭೂತರಾದ ಪ್ರಯುಕ್ತ ಶ್ರೀ ಹರಿಗೆ ಪ್ರಿಯರೆಂದು ಸಿದ್ಧವಾಯಿತು ) (ಹಿಂದೆ ಹೇಳಿದ ಅರ್ಥವನ್ನುಪಸಂಹಾರಮಾಡುತ್ತಾರೆ. ) ಯಾವ ಕಾರಣದಿಂದ ಶ್ರೀ ರಾಮನು ಹನುಮಂತನಿಗೆ ಪ್ರಿಯನಾಗಿರುತ್ತಾನೋ) ಆ ಕಾರಣದಿಂದ ಅಥವಾ ಸರ್ವ ದೇವತೆಗಳಿಗಿಂತಲೂ ಅತಿ ಪ್ರಿಯನಾದುದರಿಂದ ಆ ಋಷ್ಯಮೂಕ ಪರ್ವತವನ್ನು ಅಥವಾ ಎಲ್ಲಿ ಹನುಮಂತನು ಇದ್ದಾನೋ ಅಲ್ಲಿಗೆ ಕುರಿತು ಹನುಮಂತನಿಗೆ ಅನುಗ್ರಹ ಮಾಡುವುದಕ್ಕಾಗಿ ಶ್ರೀ ರಾಮನು ಹೋದನು.

**ವಿಶೇಷಾಂಶ** — ಪರಸೇನೆಯಲ್ಲಿರತಕ್ಕ ಭೀಷ್ಮ ದ್ರೋಣಾದಿಗಳೂ ಕೂಡ ಅರ್ಜುನನಲ್ಲಿಯೇ ಪಕ್ಷಪಾತವುಳ್ಳವರು. ಕರ್ಣನಲ್ಲಿ ಪಕ್ಷಪಾತವುಳ್ಳವರಲ್ಲ. ಆದ ಕಾರಣದಿಂದ ಸರ್ವೇ 'ಶಕ್ರಸೂನಂ ಶ್ರಿತಾಃ' ಎಂದು ಹೇಳಿರುವರು. ॥೪೮॥

ಹಾಗಾದರೆ ತನಗೆ ಹನುಮಂತನ ಸಹಾಯವು ಸಿಗುವುದಕ್ಕಾಗಿ ಶ್ರೀ ರಾಮನು ಹೋದನು. ಎಂದು ಏಕೆ ಆಗಲಾರದು ಎಂದರೆ—

**ಮೂ ॥ ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ**
**ಶ್ರೀರಬ್ಜಜಶ್ಚ ಗಿರಿಶಃ ಸಹ ಲೋಕಪಾಲೈಃ ॥**
**ಸರ್ವೇಶ್ವರಸ್ಯ ಪರಮಸ್ಯ ಹಿ ಸರ್ವಶಕ್ತೇಃ**
**ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ॥೪೯॥**

ಅ ॥ ಲಕ್ಷ್ಮೀದೇವಿಯು ಬ್ರಹ್ಮನು ರುದ್ರನೂ ಕೂಡ ಇಂದ್ರಾದ್ಯಷ್ಟದಿಕ್ಪಾಲಕರಿಂದ ಕೂಡಿಕೊಂಡು ಯಾವ ಶ್ರೀ ರಾಮನ ಕಮಲದಂತೆ ಇರತಕ್ಕ ಚರಣಗಳ ಧೂಲಿಯನ್ನು ಶಿರಸ್ಸಿನಿಂದ ಧರಿಸುತ್ತಾಳೋ ಅಥವಾ ಧರಿಸುತ್ತಾನೋ, ಸರ್ವರಿಗೂ ನಿಯಾಮಕನಾದ, ಸರ್ವೋತ್ತಮನಾದ, ಸರ್ವವಿಷಯದಲ್ಲಿಯೂ ಶಕ್ತಿಯುಳ್ಳ ಶ್ರೀ ರಾಮನಿಗೆ ಶತ್ರುಗಳನ್ನು ಸಂಹರಿಸುವ ವಿಷಯದಲ್ಲಿ ಕಪಿಗಳು ಸಹಾಯಕಗಳೋ ಏನು? (ಸಹಾಯಕಗಳು ಅಲ್ಲವೇ ಅಲ್ಲ.)

ವಿಶೇಷಾಂಶ-(1) 'ಯತ್ಪಾದಪಂಕಜರಜಃ' ಎನ್ನುವ ಭಾಗವತ ಪದ್ಯಾರ್ಥವನ್ನು ತನ್ನ ಪದ್ಯದ ಪೂರ್ವಾರ್ಧವನ್ನಾಗಿ ಸಂಗ್ರಹಿಸಿರುವರು. ಅದ ಕಾರಣ ಮುತ್ತಿನ ಮಣಿಯಿಂದ ಕೂಡಿ ಸುವರ್ಣ ಮಣಿಗೆ ಯೋಗವಿದ್ದಂತೆಯೇ ಈ ಯೋಗವು ಪೂರ್ಣಪ್ರಜ್ಞಾಚಾರ್ಯರ ವಚನಕ್ಕೆ ಇದೆ ಎಂದು ತಿಳಿಯತಕ್ಕದ್ದು. ॥೪೯॥

ಮೂ ॥ ಸಮಾಗತೇ ತು ರಾಘವೇ ಪ್ಲವಂಗಮಾಃ ಸ ಸೂರ್ಯಜಾಃ ॥
ವಿಪುಪ್ಲುವುರ್ಭಯಾರ್ದಿತಾ ನ್ಯವಾರಯಚ್ಚ ಮಾರುತಿಃ ॥ ೫೦ ॥

ಅ ॥ ಶ್ರೀ ರಾಮನು ಬರುತ್ತಿರಲು ಸೂರ್ಯ ಪುತ್ರನಾದ ಸುಗ್ರೀವನಿಂದ ಕೂಡಿರುವ ಕಪಿಗಳು (ಇವರಿಬ್ಬರೂ ವಾಲಿಸಂಬಂಧಿಗಳು ಎನ್ನುವ) ಭಯದಿಂದ ಪೀಡಿತಗಳಾಗಿ ಹಾರಿಹೋದವು. (ಆ ಕಪಿಗಳನ್ನು) ಹನುಮಂತನು ತಡೆದನು॥೫೦॥

ಮೂ ॥ ಸಂಸ್ಥಾಪ್ಯಾಶು ಹರೀಂದ್ರಾನ್ ಜಾನನ್ವಿಷ್ಣೋರ್ಗುಣಾನನಂತಾನ್ಸಃ ॥
ಸಾಕ್ಷಾದ್ಬ್ರಹ್ಮಪಿತಾಸಾವಿತ್ಯೇತೇ(ನೇ)ನಾಸ್ಯ ಪಾದಯೋಃ ಪೇತೇ ॥ ೫೧ ॥

ಅ ॥ ವಿಷ್ಣುವಿನ ವೇದೋಕ್ತಗಳಾದ ಅನಂತಾನಂತಗುಣಗಳನ್ನು ತಿಳಿದಿರತಕ್ಕ ಆ ಹನುಮಂತನು ಶೀಘ್ರದಲ್ಲಿ ಕಪಿಶ್ರೇಷ್ಠರನ್ನು (ಸ್ವಲ್ಪದೂರದಲ್ಲಿ) ಕೂಡ್ರಿಸಿಟ್ಟು ಈ ರಾಮನು ಮುಖ್ಯವಾಗಿ ಚತುರ್ಮುಖನಿಗೆ ತಂದೆಯು (ಉಪಚಾರದಿಂದ ಅಲ್ಲ) ಈ ಜ್ಞಾನದಿಂದ ಅಥವಾ ಈ ಕಾರಣದಿಂದ ಈ ರಾಮನ ಪಾದಗಳಲ್ಲಿ ಬಿದ್ದನು. (ಅಂದರೆ ಭಕ್ತಿಪೂರ್ವಕವಾಗಿ ನಮಸ್ಕರಿಸಿದನು. ॥೫೧॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿ(ದಕ್ಕ)ತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಶ್ರೀರಾಮಚರಿತೇ ಹನೂಮದ್ದರ್ಶನಂ ನಾಮ ಪಂಚಮೋಽಧ್ಯಾಯಃ ॥ ೫ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಶ್ರೀ ರಾಮದೇವರ ಚರಿತ್ರೆಯಲ್ಲಿ ಹನುಮಂತನ ದರ್ಶನವೆನ್ನುವ ಐದನೇ ಅಧ್ಯಾಯವು ಸಮಾಪ್ತವಾಯಿತು

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಶ್ರೀಃ ||

## ಆರನೇ ಅಧ್ಯಾಯವು

---

ಮೂ ||  ಓಂ ಉತ್ಥಾಪ್ಯ ಚೈನಮರವಿಂದದಲಾಯತಾಕ್ಷಃ
ಚಕ್ರಾಂಕಿತೇನ ವರದೇನ ಕರಾಂಬುಜೇನ ||
ಕೃತ್ವಾ ಚ ಸಂವಿದಮನೇನ ನುತೋಽಸ್ಯ ಚಾಂಸಂ
ಪ್ರೀತ್ಯಾ ರುರೋಹ ಸಹಸನ್ಸಹ ಲಕ್ಷ್ಮಣೇನ || ೧ ||

ಅ || ಕಮಲದಳದಂತೆ ವಿಶಾಲಗಳಾದ ಕಣ್ಣುಗಳುಳ್ಳ ಶ್ರೀ ರಾಮನು ಚಕ್ರದಿಂದ ಚಿಹ್ನಿತವಾದ ವರವನ್ನು ಕೊಡತಕ್ಕ ಕಮಲದಂತಿರುವ ಹಸ್ತದಿಂದ ಈ ಹನುಮಂತನನ್ನು ಎಬ್ಬಿಸಿ ಈ ಹನುಮಂತನಿಂದ ನಮಸ್ಕರಿಸಿಕೊಳ್ಳಲ್ಪಟ್ಟವನಾಗಿ ('ಸಂವಿದಂ- ಸಮ್ಯಕ್ ವೇದಯತೇ ಅಪೇಕ್ಷಿತಾರ್ಥಂ' ಎನ್ನುವ ವ್ಯುತ್ಪತ್ತಿಯಿಂದ) ಪ್ರಿಯವಚನವನ್ನು ಮಾಡಿ ಲಕ್ಷ್ಮಣನಿಂದ ಕೂಡಿಕೊಂಡು ನಗಾಡುತ್ತಾ ಈ ಹನುಮಂತನ ಭುಜಶಿರಸ್ಸನ್ನು ಪ್ರೀತಿಯಿಂದ ಏರಿದನು.

ವಿಶೇಷಾಂಶ— ಶ್ರೀವಾದಾಚಾರ್ಯರು ಈ ಅಧ್ಯಾಯದಲ್ಲಿ ಕಿಷ್ಕಿಂಧಾಕಾಂಡ ಕಥೆಯನ್ನು ನಿರೂಪಿಸುವರು. ||೧||

ಮೂ ||  ಆರೋಪ್ಯ ಚಾಂಸಯುಗಲಂ ಭಗವಂತಮೇನಂ
ತಸ್ಯಾನುಜಂ ಚ ಹನುಮಾನ್ಪ್ರಯಯೌ ಕಪೀಂದ್ರಂ ||
ಸಖ್ಯಂ ಚಕಾರ ಹತಭುಕ್ಪ್ರಮುಖೇ ಚ ತಸ್ಯ
ರಾಮೇಣ ಶಾಶ್ವತನಿಜಾರ್ತಿಹರೇಣ ಶೀಘ್ರಂ || ೨ ||

ಅ || ಹನುಮಂತನು ಈ ಪೂಜ್ಯನಾದ ಶ್ರೀ ರಾಮನನ್ನೂ, ಆತನ ತಮ್ಮನಾದ ಲಕ್ಷ್ಮಣನನ್ನೂ ಎರಡು ಭುಜಗಳಿಂದ ಏರಿಸಿಕೊಂಡು ಕಪಿಶ್ರೇಷ್ಠನಾದ ಸುಗ್ರೀವನನ್ನು ಹೊಂದಿದನು. ಶಶ್ವದೇಕಪ್ರಕಾರನಾದ ತನ್ನ ಭಕ್ತನ (ಮಧ್ಯಮಭಕ್ತನಂತೆ ಕೆಲವು ವೇಳೆ ಭಕ್ತನು, ಕೆಲವು ವೇಳೆ ಅಭಕ್ತನೆಂದಲ್ಲ, ಸರ್ವದಾ ಭಕ್ತನ) ಮನೋವ್ಯಥೆಯನ್ನು ಪರಿಹರಿಸತಕ್ಕ ಶ್ರೀ ರಾಮನಿಂದ ಕೂಡಿಕೊಂಡು ಶೀಘ್ರದಲ್ಲಿ ಅಗ್ನಿಯ ಮುಂಭಾಗದಲ್ಲಿ ಈ ಸುಗ್ರೀವನಿಗೆ ಮೈತ್ರ್ಯವನ್ನು ಮಾಡಿಸಿದನು. ||೨||

ಮೂ ||  ಶ್ರುತ್ವಾಸ್ಯ ದುಃಖಮಥ ದೇವವರಃ ಪ್ರತಿಜ್ಞಾಂ
ಚಕ್ರೇ ಸ ವಾಲಿ ನಿಧನಾಯ ಹರೀಶ್ವರೋಽಪಿ ||
ಸೀತಾನುಮಾರ್ಗಣಕೃತೇಽಥ ಸ ವಾಲಿನೈವ
ಕ್ಷಿಪ್ತಾಂ ಹಿ ದುಂದುಭಿತನುಂ ಸಮದರ್ಶಯಚ್ಚ || ೩ ||

ಅ || ಆ ಮೇಲೆ ದೇವಶ್ರೇಷ್ಠನಾದ ಆ ಶ್ರೀ ರಾಮನು ಈ ಸುಗ್ರೀವನಿಗೆ ವಾಲಿಕೃತವಾದ ದುಃಖವನ್ನು ಕೇಳಿ ವಾಲಿಯನ್ನು ಸಂಹರಿಸುವುದಕ್ಕಾಗಿ ಪ್ರತಿಜ್ಞೆಯನ್ನು ಮಾಡಿದನು. ಕಪಿಶ್ರೇಷ್ಠನಾದ ಸುಗ್ರೀವನಾದರೂ ಸೀತಾದೇವಿಯನ್ನು ಹುಡುಕುವುದಕ್ಕಾಗಿ ಪ್ರತಿಜ್ಞೆಮಾಡಿದನು.

ಆ ಪ್ರತಿಜ್ಞೆ ಮಾಡಿದ ಮೇಲೆ, ಆ ಸುಗ್ರೀವನು ವಾಲಿಯಿಂದಲೇ ನಿರಸ್ತವಾದ, ದುಂದುಭಿ ನಾಮಕ ರಾಕ್ಷಸನ ಶರೀರವನ್ನು ತೋರಿಸಿದನು. (ಅಂದರೆ ವಾಲಿಯಿಂದ ದೂರದಲ್ಲಿ ಕ್ಷಿಪ್ತವಾದ ದುಂದುಭಿ ಶರೀರವನ್ನು ಅದಕ್ಕಿಂತಲೂ ದೂರಕ್ಕೆ ಬಿಸಾಡಿದರೆ ನೀನು ವಾಲಿಯನ್ನು ಸಂಹರಿಸಲಿಕ್ಕೆ ಸಮರ್ಥನು ಎನ್ನುವ ಅಭಿಪ್ರಾಯದಿಂದ ತೋರಿಸಿದನು.) ಚ-ಮತ್ತು ಈ ದುಂದುಭಿ ಶರೀರವನ್ನು, ದೂರಕ್ಕೆ ನೀನು ಬಿಸಾಡು. ಆಗ ನನಗೆ ವಿಶ್ವಾಸವು ಬರುವುದು ॥೩॥

ಮೂ ॥ ವೀಕ್ಷ್ಯೈವ ತಾಂ ನಿಪತಿತಾಮಥ ರಾಮದೇವಃ
ಸೋಽಙ್ಗುಷ್ಠಮಾತ್ರಚಲನಾದತಿಲೀಲಯೈವ ॥
ಸಂಪ್ರಾಸ್ಯ ಯೋಜನಶತೇಽಥ ತಯೈವ ಚೋರ್ವೀಂ
ಸರ್ವಾನ್ನಿದಾರ್ಯ ದಿತಿಜಾನಹನದ್ರಸಾಸ್ಥಾನ್ ॥೪॥

ಅ ॥ ಆ ಮೇಲೆ ಆ ಶ್ರೀ ರಾಮನು ಬಿದ್ದಿರತಕ್ಕ ಆ ದುಂದುಭಿ ಶರೀರವನ್ನು ನೋಡಿಯೇ ಅಂಗುಷ್ಠದ ಚಲನಮಾತ್ರದಿಂದಲೇ ಅತ್ಯಂತ ಕ್ರೀಡೆಯಿಂದಲೇ ಯೋಜನಗಳ ನೂರರಲ್ಲಿ ಚೆನ್ನಾಗಿ ಬಿಸಾಡಿ, ಆ ಮೇಲೆ ಆ ಶರೀರದಿಂದಲೇ ಭೂಮಿಯನ್ನು ಸೀಳಿ ರಸಾತಲದಲ್ಲಿರತಕ್ಕ ಎಲ್ಲಾ ದೈತ್ಯರನ್ನೂ ಸಂಹರಿಸಿದನು.

ವಿಶೇಷಾಂಶ— ಕರ್ಣಪರ್ಯಂತವಾಗಿ ಸೆಳೆದು ಬಿಟ್ಟ ಬಾಣದಂತೆಯೂ, ಸಾಮರ್ಥ್ಯವಿದ್ದವನು ಬಿಸಾಡಿದ ಕಲ್ಲಿನಂತೆಯೂ ನಖಾಗ್ರದ ಸ್ಪರ್ಶಮಾತ್ರದಿಂದಲೇ ಬ್ರಹ್ಮಾಂಡಖರ್ಪರವನ್ನು ಭೇದಿಸತಕ್ಕ ಶ್ರೀ ರಾಮನ ಅಂಗುಷ್ಠದ ಶಕ್ತಿಯಿಂದ, ಆಹಿತವಾದ ಶಕ್ತಿಯಿಂದ ಮೊದಲೇ ಭೂಮಿಯಲ್ಲಿ ಬಿದ್ದಿರತಕ್ಕ ದುಂದುಭಿಯ ಶರೀರದಿಂದಲೇ ಅತಿ ನಿಬಿಡವಾದ ಭೂಮಿಯನ್ನು ಭೇದಿಸುವ ಸಾಮರ್ಥ್ಯವೂ ಇದೆ ಎಂದು ಹೇಳಿದಂತೆ ಆಯಿತು. ಆದುದರಿಂದಲೇ ದುಂದುಭಿಯ ಶರೀರಕ್ಕೆ ಸ್ವಾಭಾವಿಕವಾಗಿ ಶಕ್ತಿಯು ಇಲ್ಲವೆಂದು ಸೂಚಿಸುವುದಕ್ಕಾಗಿ ಮುಂದಿನ ಶ್ಲೋಕದಲ್ಲಿ ಕುಣಪೇನ – ಶವದಿಂದ ಎಂದು ಹೇಳುವರು. ॥೪॥

ಮೂ ॥ ಶರ್ವಪ್ರಸಾದಜಬಲಾದ್ದಿತಿಜಾನವಧ್ಯಾ-
ನ್ಸರ್ವಾನ್ನಿಹತ್ಯ ಕುಣಪೇನ ಪುನಶ್ಚ ಸಖ್ಯಾ ॥
ಭೀತೇನ ವಾಲಿಬಲತಃ ಕಥಿತಃ ಸ (ಸ್ಮ) ಸಪ್ತತಾ (ಸಾ)
ಲಾನ್ಪ್ರದರ್ಶ್ಯ ದಿತಿಜಾನ್ಸುದೃಢಾಂಶ್ಚ ವಜ್ರಾತ್ ॥೫॥

ಅ ॥ ರುದ್ರದೇವರ ಪ್ರಸಾದದಿಂದ ಉಂಟಾದ ಸಾಮರ್ಥ್ಯದಿಂದ (ಸರ್ವರಿಂದಲೂ) ಸಂಹರಿಸಿಕೊಳ್ಳಲ್ಪಡದಿರುವ ಎಲ್ಲಾ ದೈತ್ಯರನ್ನೂ ಶವದಿಂದ ಸಂಹರಿಸಿ, ಇರತಕ್ಕ ಶ್ರೀರಾಮನು) ಮತ್ತು ಶವವನ್ನು ಬಿಸಾಡಿದ ಮೇಲೆ ವಾಲಿಯ ಸಾಮರ್ಥ್ಯದಿಂದ ಹೆದರಿದ ಸಖಿಯಾದ ಸುಗ್ರೀವನಿಂದಲೂ, ಅತಿಕಠಿಣಗಳಾದ ದೈತ್ಯರ ಸ್ವರೂಪವುಳ್ಳ ಸಾಲ (ತಾಲ) ವೃಕ್ಷಗಳನ್ನು ತೋರಿಸಿ ಹೇಳಿಸಿಕೊಳ್ಳಲ್ಪಟ್ಟನು. ॥೫॥

ಶ್ರೀ ರಾಮನನ್ನು ಕುರಿತು ಸುಗ್ರೀವನು ಹೇಳಿದ್ದನ್ನು ತೋರಿಸುತ್ತಾರೆ.—

ಮೂ ॥ ಏಕೈಕಮೇಷು ಸ ವಿಕಂಪಯಿತುಂ ಸಮರ್ಥಃ
ಪತ್ರಾಣಿ ಲೋಪ್ತುಮಪಿ ತೂತ್ಸಹತೇ ನ ಶಕ್ತಃ ॥
ವಿಷ್ವಕ್ಸ್ಥಿತಾನ್ಯದಿ ಭವಾನ್ಪ್ರತಿ ಭೇತ್ಸ್ಯತೀಮಾ-
ನೇಕೇಷುಣಾ ತರ್ಹಿ (ತರುಹಿ) ವಾಲಿವಧೇ ಸಮರ್ಥಃ ॥ ೬ ॥

ಅ ॥ ಆ ವಾಲಿಯು ಈ ಏಳು ತಾಲವೃಕ್ಷಗಳ ಮಧ್ಯದಲ್ಲಿ ಒಂದೊಂದು ತಾಲವೃಕ್ಷವನ್ನು ಹಂದಾಡಿಸಲಿಕ್ಕೆ ಸಮರ್ಥನು. ತಾಲಪತ್ರಗಳನ್ನು ಛೇದಿಸಲಿಕ್ಕೂ ಉದ್ಯೋಗಮಾಡುತ್ತಾನೆ. ಆದಾಗ್ಯೂ ಸಮರ್ಥನಾಗುವುದಿಲ್ಲ. ನೀವು ವಕ್ರಗಳಾಗಿರುವ ಈ ತಾಲವೃಕ್ಷಗಳನ್ನು ಒಂದೇ ಬಾಣದಿಂದ ಯಾವ ಪಕ್ಷದಲ್ಲಿ ಛೇದಿಸುವಿರೋ ಹಾಗಾದರೆ ವಾಲಿಯನ್ನು ಸಂಹರಿಸುವುದರಲ್ಲಿ ಸಮರ್ಥರಾಗುವಿರಿ.

ವಿಶೇಷಾಂಶ—ಅನಂತ ಬಲಗಳಿಂದ ಪರಿಪೂರ್ಣನಾದ ಶ್ರೀನಾರಾಯಣನಲ್ಲಿ ಸುಗ್ರೀವನಿಗೆ ಜ್ಞಾನದಾರ್ಢ್ಯಾಭಾವವನ್ನು ಸೂಚಿಸುವುದಕ್ಕಾಗಿ, ಸರ್ವಸಮರ್ಥನಾದ ಶ್ರೀರಾಮನನ್ನು ಶೋಧನಮಾಡಲಿಕ್ಕೆ ಉದ್ಯೋಗಮಾಡಿದುದರಿಂದ ವಾಲಿಬಲದಿಂದಲಾಗಲೀ ಭೀತಿಯಿಂದ ನಡುಗಿಕೊಂಡು ಇರುವ ಹೃದಯವುಳ್ಳ ಆ ಸುಗ್ರೀವನಿಗೆ ತನ್ನ ಬಾಯಿಯಿಂದ ಶಬ್ದವೂ ಕೂಡ ಸ್ಪಷ್ಟವಾಗಿ ಹೊರಡಲಿಲ್ಲ. ಎಂದು ಸೂಚಿಸುವುದಕ್ಕಾಗಿ ತರ್ಹಿ ಎಂದು ಹೇಳುವುದನ್ನು ಬಿಟ್ಟು ತರುಹಿ ಎಂದು ವಿಶಕಲಿತವಾಗಿ ವರ್ಣವನ್ನುಚ್ಚರಿಸಿರುವರು. ॥ ೬ ॥

ಹಾಗಾದರೆ ಸುಗ್ರೀವನು ಶತ್ರುಬಲದೆಶೆಯಿಂದ ಬಹುಗುಣಗಳಿಂದ ಅಧಿಕವಾದ ಬಲವನ್ನು ಏಕೆ ಇಚ್ಛಿಸಿದನು ಎಂದಾಶಂಕಿಸಿದರೆ ನೀತಿರೂಪವಾದ ಪ್ರಮಾಣವನ್ನು ಹೇಳುತ್ತಾರೆ-

ಮೂ ॥ ಜೇತುಂ ಚತುರ್ಗುಣಬಲೋ ಹಿ ಪುಮಾನ್ರಿಭುಃ ಸ್ಯಾ-
ದ್ಧಂತುಂ ಶತಾಧಿಕಬಲೋಽತಿಬಲಂ ಸುಶಕ್ತಃ ॥
ತಸ್ಮಾದಿಮಾನ್ಸುರಿಪುಯಾತ್ಮಜಬಾಹುಲೋಪ್ಯ
ಪತ್ರಾನ್ವಿಭಿಂ(ಭಿ)ದ್ಯ ಮಮ ಸಂಶಯಮಾಶು ಭಿಂಧಿ ॥ ೭ ॥

ಅ ॥ (ಶತ್ರುಬಲ ದೆಶೆಯಿಂದ) ನಾಲ್ಕುಪಾಲು ಜಾಸ್ತಿಯಾದ ಬಲವುಳ್ಳ ಪುರುಷನು (ಶತ್ರುವನ್ನು) ಗೆಲ್ಲಲಿಕ್ಕೆ ಸಮರ್ಥನಾದಾನು. ನೂರುಪಾಲು ಜಾಸ್ತಿಯಾದ ಬಲವುಳ್ಳ ಪುರುಷನು ಅತಿಶಯ ಬಲವುಳ್ಳವನನ್ನು ಕೊಲ್ಲಲಿಕ್ಕೆ ಯಾವಕಾರಣದಿಂದ ಅತಿಶಕ್ತನಾಗುವನೋ, ಆದುದರಿಂದ ದೇವೇಂದ್ರನಮಗನಾದ ವಾಲಿಯಭುಜಗಳಿಂದ ಛೇದಿಸಲಿಕ್ಕೆ ಅಶಕ್ಯಗಳಾದ ಪತ್ರಗಳುಳ್ಳ, ಈ ತಾಲವೃಕ್ಷಗಳನ್ನು ಛೇದಿಸಿ ನನಗೆ ವಾಲಿ ಸಂಹಾರ ಸಾಮರ್ಥ್ಯವಿಷಯದಲ್ಲಿ ಇರತಕ್ಕ ಸಂಶಯವನ್ನು ಶೀಘ್ರದಲ್ಲಿ ಛೇದಿಸು. ॥ ೭ ॥

ಮೂ ॥ ಶ್ರುತ್ವಾಸ್ಯ ವಾಕ್ಯಮನುಮೃಶ್ಯ ದಿತೇಃ ಸುತಾಂಸ್ತಾ-
ನ್ಧಾತುರ್ವರಾದ ಖಿಲಪುಂಭಿರಭೇದ್ಯರೂಪಾನ್ ॥
ಬ್ರಹ್ಮತ್ವಮಾಪ್ತುಮಚಲಂ ತಪಸೀ ಪ್ರವೃತ್ತಾ
ನೇಕೇಷುಣಾ ಸಪದಿ ತಾನ್ಪ್ರಬಿ(ವಿ)ಭೇದ ರಾಮಃ ॥ ೮ ॥

ಅ ॥ ಶ್ರೀ ರಾಮನು ಈ ಸಖ್ಯನಾದ ಸುಗ್ರೀವನ ವಾಕ್ಯವನ್ನು ಕೇಳಿ ಬ್ರಹ್ಮನ ವರದೆಸೆಯಿಂದ ಎಲ್ಲಾ ಪುರುಷರಿಂದಲೂ ಭೇದಿಸಲಶಕ್ಯವಾದ ಸ್ವರೂಪವುಳ್ಳ ಚತುರ್ಮುಖತ್ವವನ್ನು ಹೊಂದುವುದಕ್ಕಾಗಿ ಚಲನವಿಲ್ಲದಿರುವುದು ಹೇಗೆ ಆದೀತೋ ಹಾಗೆ ತಪಸ್ಸಿನಲ್ಲಿ ಪ್ರವೃತ್ತರಾದ ದೈತ್ಯಸ್ವರೂಪರಾದ ಆ ತಾಲವೃಕ್ಷಗಳನ್ನು ತಿಳಿದು ಒಂದೇ ಬಾಣದಿಂದ ಶೀಘ್ರದಲ್ಲಿ ಆ ತಾಲವೃಕ್ಷಗಳನ್ನು ಶೀಳಿಸಿದನು. ॥೮॥

ಛೇದನಪ್ರಕಾರವನ್ನು ಬಿಡಿಸಿ ಹೇಳುತ್ತಾರೆ -

ಮೂ ॥ ಸಂಧಾಯ ಕಾರ್ಮುಕವರೇ ನಿಶಿತೇ ತು ಬಾಣೇಽ
ಥಾಕೃಷ್ಯ ದಕ್ಷಿಣಭುಜೇನ ತದಾ ಪ್ರಮುಕ್ತೇ ॥
ರಾಮೇಣ ಸತ್ವರಮನಂತಬಲೇನ ಸರ್ವೇ
ಚೂರ್ಣೀಕೃತಾಃ ಸಪದಿ ತೇ ತರವೋ ರವೇಣ ॥೯॥

ಅ ॥ ತಾಲವನ್ನು ಛೇದಿಸುವ ಸಮಯದಲ್ಲಿ ಅಪರಿಮಿತವಾದ ಬಲವುಳ್ಳ ಶ್ರೀ ರಾಮನಿಂದ ತೀಕ್ಷ್ಣವಾದ ಚಾಪೋತ್ತಮದಲ್ಲಿ ಬಾಣವನ್ನು ಕೂಡಿಸಿ. ಕೂಡಿಸಿದ ಮೇಲೆ ಬಲ ಭುಜದಿಂದ ಸೆಳೆದು ಬಾಣವು ಬಿಡಲ್ಪಡುತ್ತಿರಲು ಆ ಎಲ್ಲಾ ಏಳು ತಾಲವೃಕ್ಷಗಳೂ ಶೀಘ್ರದಲ್ಲಿ ಶಬ್ದದಿಂದ ಚೂರ್ಣೀಕೃತಗಳಾಗಿವೆ. ॥೯॥

ರಾಮನು ಬಿಟ್ಟ ಶರಪ್ರಭಾವವನ್ನು ಹೇಳುತ್ತಾರೆ—

ಮೂ ॥ ಭಿತ್ವಾ ಚ ತಾನ್ಸಗಿರಿಕಂ ಭಗವತ್ಪ್ರಮುಕ್ತಃ
ಪಾತಾಲ ಸಪ್ತಕಮಥಾತ್ರ ಚ ಯೇ ತ್ವವಧ್ಯಾಃ ॥
ನಾಮ್ನಾಸುರಾಃ ಕುಮುದಿನೋಽಬ್ಜಜ ವಾಕ್ಯರಕ್ಷಾಃ
ಸರ್ವಾಂಶ್ಚ ತಾನದಹಹಾಶು ಶರಃ ಸ ಏಕಃ ॥೧೦॥

ಅ ॥ ಶ್ರೀ ರಾಮನಿಂದ ಬಿಡಲ್ಪಟ್ಟ ಆ ಒಂದು ಬಾಣವು ಆ ಏಳು ತಾಲವೃಕ್ಷಗಳನ್ನೂ ಭೇದಿಸಿ ಪರ್ವತವೂ ಭೂಮಿಯೂ ಇವುಗಳಿಂದ ಕೂಡಿದ ಪಾತಾಲದ ಏಳನ್ನೂ ಭೇದಿಸಿ ಪಾತಾಲ ಸಪ್ತಕವನ್ನು ಭೇದಿಸಿದ ಮೇಲೆ ಈ ಪಾತಾಲಲೋಕಗಳೇಳರಲ್ಲಿ ಬ್ರಹ್ಮನ ವಾಕ್ಯವೇ ರಕ್ಷಣೆಯಾಗಿವುಳ್ಳ, ಸಂಹರಿಸಿಕೊಳ್ಳಲ್ಪಡದಿರುವ ಕುಮುದಿನಾಮಕರಾದ ಯಾವ ಅಸುರರೋ ಅವರೆಲ್ಲರನ್ನೂ ಶೀಘ್ರದಲ್ಲಿ ಸುಟ್ಟಿತು. ॥೧೦॥

ಈ ಪೂರ್ವೋಕ್ತವಾದ ಕರ್ಮವು ಆಶ್ಚರ್ಯವಲ್ಲ ಏಕೆಂದರೆ—

ಮೂ ॥ ನೈತದ್ವಿಚಿತ್ರಮುಮಿತೋರುಬಲಸ್ಯ ವಿಷ್ಣೋ-
ರ್ಯತ್ತೈರಶಾತ ಪವನಸ್ಯ ಭವೇತ್ಪ್ರವೃತ್ತಿಃ ॥
ಲೋಕಸ್ಯ ಸಪ್ರಕೃತಿಕಸ್ಯ ಸರುದ್ರಕಾಲ
ಕರ್ಮಾದಿಕಸ್ಯ ತದಪೀದಮನನ್ಯಸಾಧ್ಯಂ ॥೧೧॥

ಅ || ಯಾವ ವಿಷ್ಣುವಿನ ಪ್ರೇರಣೆಯಿಂದ ವಾಯುದೇವರಿಂದ ಕೂಡಿದ ಲಕ್ಷ್ಮೀಸಹಿತ ನಾದನು, ರುದ್ರನೂ, ಕಾಲಾಭಿಮಾನಿಯಾದ ಸಂವರ್ಣನೂ, ಕರ್ಮಾಭಿಮಾನಿಯಾದ ಇಂದ್ರನೂ, ಕಾಮಾದಿಗಳೂ ಇವುಗಳಿಂದ ಕೂಡಿದ ಜಗತ್ತಿಗೆ ಮತ್ತೂ, ಜನರ ಪ್ರವೃತ್ತಿಯಾಗುತ್ತದೋ (ರಾಮಕೃತವಾದ ಕರ್ಮವು ಅನ್ಯಸಾಧ್ಯವಾದೀತೋ ಏನು ಎಂದರೆ) ಆದಾಗ್ಯೂ ಈ ಮಂಡಲಾ ಕಾರವಾಗಿ ಇರತಕ್ಕ ಏಳು ತಾಲಭೇದನಾದಿಕರ್ಮವು (ಅಂದರೆ ಶವದಿಂದ ಭೂಮಿಯನ್ನು ಭೇದಿಸಿದ್ದು, ಬ್ರಹ್ಮನ ವಚನವನ್ನು ಉಲ್ಲಂಘಿಸಿದ್ದು ಇತ್ಯಾದಿಯು) ಬೇರೆಯವರಿಂದ ಸಾಧ್ಯವಾಗಲಾರದು. ಆದಾಗ್ಯೂ ಅಮಿತವಾದ ಉತ್ಕೃಷ್ಟವಾದ ಸಾಮರ್ಥ್ಯವುಳ್ಳ ಶ್ರೀ ವಿಷ್ಣುವಿಗೆ ಇದು ಆಶ್ಚರ್ಯವಲ್ಲ. ||೧೧||

ಮೂ || ದೃಷ್ಟ್ವಾ ಬಲಂ ಭವನಕೋಶಥ ಹರೀಶ್ವರೋಽಸಾ-
ವಗ್ರೇ ನಿಧಾಯ ತನುಗಾ (ಯಾ) ತ್ಪುರಮಗ್ರಜಸ್ಯ |
ಆಕ್ರುಶ್ಯ ರಾವಮನುಜಸ್ಯ ಬಿಲಾತ್ಸ ಚಾಗಾ
ದಭ್ಯೇಸನಮಾಶು ದಯಿತಾ ಪ್ರತಿನಾರಿತೋಽಪಿ ||೧೨||

ಅ || ಆ ಮೇಲೆ ಕಪಿಶ್ರೇಷ್ಠನಾದ ಈ ಸುಗ್ರೀವನು ಶ್ರೀ ರಾಮನ ಬಲವನ್ನು ನೋಡಿ ಆ ರಾಮನನ್ನು ಮುಂದೆಮಾಡಿಕೊಂಡು ಅಣ್ಣನಾದ ವಾಲಿಯ ಪಟ್ಟಣವನ್ನು ಕುರಿತು ಹೋದನು. ಆ ವಾಲಿಯು ತಮ್ಮನಾದ ಸುಗ್ರೀವನ ಧ್ವನಿಯನ್ನು ಕೇಳಿ ತನ್ನ ಪ್ರಿಯೆಯಾದ ತಾರೆಯಿಂದ ಸರ್ವಥಾ ಹೋಗಕೂಡದು ಎಂದು ತಡೆಯಲ್ಪಟ್ಟವನಾದಾಗ್ಯೂ ಬಿಲಸದೃಶವಾದ ಪಟ್ಟಣದೆಶೆಯಿಂದ (ಹೊರಟು) ಸುಗ್ರೀವನನ್ನು ಅಭಿಮುಖೀಕರಿಸಿಕೊಂಡು ಹೋದನು ||೧೨||

ಮೂ || ತನ್ಮುಷ್ಟಿಭಿಃ ಪ್ರತಿಹತಃ ಪ್ರಯಯಾವಶಕ್ತ
ಸುಗ್ರೀವ ಆಶು ರಘುಪೋಽಪಿ ಹಿ ಧರ್ಮವೀಕ್ಷನ್ ||
ನೈನಂ ಜಘಾನ ವಿದಿತಾಖಿಲಲೋಕಚೇಷ್ಟೋ
ಪ್ಯೇನಂ ಸ ಆಹ ಯುಧಿ ನಾಂ ನ ಮಯಾ ವಿವಿಕ್ತೌ ||೧೩||

ಅ || ಆ ವಾಲಿಯ ಮುಷ್ಟಿಪ್ರಹಾರಗಳಿಂದ ಹೊಡೆಯಲ್ಪಟ್ಟ, ಸಮರ್ಥನಾಗದಿರುವ ಸುಗ್ರೀವನು ಶೀಘ್ರವಲ್ಲಿ ಯುದ್ಧಸ್ಥಾನದೆಶೆಯಿಂದ ಓಡಿಹೋದನು. ಸರ್ವಸಮರ್ಥನಾದಾಗ್ಯೂ ಶ್ರೀರಾಮನು ಲೋಕಧರ್ಮವನ್ನು ತೋರಿಸುವವನಾಗಿ ತಿಳಿಯಲ್ಪಟ್ಟ ಎಲ್ಲಾ ಲೋಕದ ವ್ಯಾಪಾರವುಳ್ಳವನಾದಾಗ್ಯೂ (ಅಂದರೆ ಇವರಿಬ್ಬರೂ ತಮ್ಮ ವೈರವನ್ನು ಮರಣವಾದಾಗ್ಯೂ ಬಿಡಲಾರರು ಎಂದು ಜನರನ್ನು ಕುರಿತು ಮುಂದಕ್ಕೆ ಹೇಳುವ ಧರ್ಮವನ್ನು ತೋರಿಸುತ್ತಾ) ಈ ವಾಲಿಯನ್ನು ಸಂಹರಿಸಲಿಲ್ಲ. ಆ ಶ್ರೀ ರಾಮನು ಈ ಸುಗ್ರೀವನನ್ನು ಕುರಿತು ಯುದ್ಧದಲ್ಲಿ ನನ್ನಿಂದ ನೀವು ಇಬ್ಬರೂ ವಿಶೇಷವಾಗಿ ಭೇದವುಳ್ಳವರಾಗಿ ತಿಳಿಯಲ್ಪಡಲಿಲ್ಲ. ಅಥವಾ ನಿಮ್ಮಿಬ್ಬರಿಗೂ ಸಮಾನವಾದ ಕಾಂತಿವಿಚಿತ್ರವಾಗಿ ನಿಮ್ಮಿಬ್ಬರನ್ನು ವಿಶೇಷವಾಗಿ ಭೇದವುಳ್ಳವರನ್ನಾಗಿ ತಿಳಿಯಲಿಲ್ಲ ||೧೩||

ಮೂ || ಸೌಭ್ರಾತ್ರಮೇಷ ಯದಿ ವಾಂಛತಿ ವಾಲಿನೈವ
ನಾಹಂ ನಿರಾಗಸಮಥಾಗ್ರಜನಿಂ ಹನಿಷ್ಯೇ ||
ದೀರ್ಘಃ ಸಹೋದರಗತೋ ನ ಭವೇದ್ಧಿ ಕೋಪೋ
ದೀರ್ಘೋಽಪಿ ಕಾರಣಮೃತೇ ವಿನಿವರ್ತತೇ ಚ ||೧೪||

ಅ || ಈ ಸುಗ್ರೀವನು, ವಾಲಿಯಿಂದಲೇ ('ಶೋಭನಃ ಭ್ರಾತಾ ಯಸ್ಯ ಚೇತಸಿ ಸಃ ಸುಭ್ರಾತಾಂ ತಸ್ಯ ಭಾವಃ ಸೌಭ್ರಾತ್ರಂ' ಎನ್ನುವ ವ್ಯುತ್ಪತ್ತಿಯಿಂದ) ಅಗ್ರಜನಿಗೆ ಶೋಭನತ್ವ ಬುದ್ಧಿಯನ್ನು ಪ್ರಾಥಮಿಕ ವೈರ ಮುಗಿದಮೇಲೆ ಯಾವ ಪಕ್ಷದಲ್ಲಿ ಇಚ್ಛಿಸುತ್ತಾನೋ, ಹಾಗಾದರೆ ನಾನು ನಿರಪರಾಧಿಯಾದ ವಾಲಿಯನ್ನು ಕೊಲ್ಲಲಾರೆನು (ಪರಸ್ಪರವಾಗಿ ಸಂಹಾರವನ್ನು ಇಚ್ಛಿಸುವವರಿಗೆ ಸ್ನೇಹವು ಹೇಗೆ ಆಗುವುದು ಎಂದರೆ) ಸಹೋದರರಲ್ಲಿರತಕ್ಕ ಕೋಪವು ಬಹುಕಾಲದಲ್ಲಿರತಕ್ಕದ್ದು ಆಗುವುದಿಲ್ಲ. ಬಹುಕಾಲದಲ್ಲಿರತಕ್ಕುದಾಗ್ಯೂ, ಸಂಧಿಕಾರಣವಾದ ಧನಾದಿಗಳನ್ನು ಹೊರತು, ದ್ವೇಷನಿವೃತ್ತಿಗೆ ಕಾರಣವಿಲ್ಲದೆ, ಹೊರಟು ಹೋಗುತ್ತದೆ. (ಅಂದರೆ ಸಹೋದರತ್ವ ಪ್ರಯುಕ್ತವಾದ ಸ್ವಾಭಾವಿಕವಾದ ಸ್ನೇಹಕ್ಕೆ ಉದ್ಬೋಧವಾಗುತ್ತಿರಲು ತನ್ನಷ್ಟಕ್ಕೇನೇ ಕೋಪವು ನಿವೃತ್ತಿಯನ್ನು ಹೊಂದುತ್ತದೆ.) ||೧೪||

ಹಿಂದೆ ಹೇಳಿದ ಅರ್ಥವನ್ನು ವಿಶೇಷವಾಗಿ ಸ್ಪಷ್ಟೀಕರಿಸುತ್ತಾರೆ --

ಮೂ ||  **ಕೋಪಃ ಸಹೋದರಜನೇ ಪುನರಂತಕಾಲೇ**
**ಪ್ರಾಯೋ ನಿವೃತ್ತಿಮುಪಗಚ್ಛತಿ ತಾಪಕಶ್ಚ ।**
**ಏಕಸ್ಯ ಭಂಗ ಇತಿ ನೈವ ರುಧಿತ್ಯಪಾಸ್ತ**
**ದೋಷೋ ನಿಹಂತುಮಿಹ ಯೋಗ್ಯ ಇತಿ ಸ್ಮ ಮೇನೇ ||೧೫||**

ಅ || ಸೋದರರಾದ ಜನರಲ್ಲಿರತಕ್ಕ ಕೋಪವು ಪುನಃ ಮರಣಸಮಯದಲ್ಲಿ ಪ್ರಾಯಶಃ ನಿವೃತ್ತಿಯನ್ನು ಹೊಂದುತ್ತದೆ. (ಒಬ್ಬನು) ಒಬ್ಬನಿಗೆ ಸಂಹಾರವಾದಾಗ ಪಶ್ಚಾತ್ತಾಪವನ್ನು ಹುಟ್ಟಿಸತಕ್ಕವನು ಆಗುತ್ತಾನೆ. ಈ ಕಾರಣದಿಂದ ಶೀಘ್ರದಲ್ಲಿ ನಿರಸ್ತವಾದ ಅನಪರಾಧಿ ಹನನಾದಿ ದೋಷವುಳ್ಳ ಶ್ರೀ ರಾಮನು ಈ ಪ್ರಥಮ ಯುದ್ಧದಲ್ಲಿ ವಿರೋಧತ್ಯಾಗದಿಂದ ಅಪರಾಧವಿಲ್ಲದಿರುವ ವಾಲಿಯು ಸಂಹರಿಸಲಿಕ್ಕೆ ಯೋಗ್ಯನೇ ಅಲ್ಲ ಎಂದು ಹಿಂದೆ ಹೇಳಿದ ಪ್ರಕಾರದಿಂದ ಲೌಕಿಕ ಪ್ರಸಿದ್ಧಿಯನ್ನು ತಿಳಿದನು ||೧೫||

ಮೂ ||  **ತಸ್ಮಾನ್ನ ಬಂಧುಜನಗೇ ಜನಿತೇ ವಿರೋಧೇ**
**ಕಾರ್ಯೋ ವಧಸ್ತದನುಬಂಧು(ಧಿ) ಭಿರಾಶ್ವಿತೀಹ ||**
**ಧರ್ಮಂ ಪ್ರದರ್ಶಯಿತುಮೇವ ರವೇಃ ಸುತಸ್ಯ**
**ಭಾವೀ ನ ತಾಪ ಇತಿ ವಿಚ್ಛ ಸ ತಂ ಜಘಾನ ||೧೬||**

ಅ || ಸುಗ್ರೀವನಿಗೆ (ವಾಲಿಯ ಸಂಹಾರದಿಂದ) ಮುಂದೆ ಆಗತಕ್ಕ ತಾಪ (ದುಃಖ)ವು ಆಗಬಾರದು, ಹೀಗೆ ತಿಳಿದ ರಾಮನು ಆದುದರಿಂದ (ಅಂದರೆ ನಿವೃತ್ತಿಯನ್ನು) ಹೊಂದುತ್ತದೋ ಕೊನೆಗೆ ಪಶ್ಚಾತ್ತಾಪವನ್ನು ಹೊಂದುತ್ತಾನೋ ಆದುದರಿಂದ) ಬಂಧುಜನರಲ್ಲಿರತಕ್ಕ ವಿರೋಧವು ಉಂಟಾದರೆ ಆ ಒಬ್ಬ ಸಹೋದರನಿಗೆ ಅನುಕೂಲರಾದ ಮಿತ್ರರಿಂದ ಶೀಘ್ರದಲ್ಲಿ ಸಂಧಿಯನ್ನಪೇಕ್ಷಿಸದೆ ಒಬ್ಬನ ಸಂಹಾರವು ಮಾಡಕೂಡದು. ಹೀಗೆ ಈ ವಾಲಿ-ಸುಗ್ರೀವರ ಯುದ್ಧದಲ್ಲಿ ಧರ್ಮವನ್ನು ತೋರಿಸುವುದಕ್ಕಾಗಿಯೇ ಆ ವಾಲಿಯನ್ನು ಸಂಹರಿಸಲಿಲ್ಲ ||೧೬||

ಹಾಗಾದರೆ 'ಸಮಯಾ ವಿವಿಕ್' ಎಂದು ಹೇಳಿದ್ದೇ ಸತ್ಯವು. ಏಕೆ ಆಗಲಾರದು ಎಂದರೆ--

ಮೂ ॥ ಯಃ ಪ್ರೇರಕಃ ಸಕಲಶೇಮುಷಿಸಂತತೇಶ್ಚ
ತಸ್ಯಾಜ್ಞತಾ ಕುತ ಇಹೇಶನರಸ್ಯ ವಿಷ್ಣೋಃ ॥
ತೇನೋದಿತೋಽಥ ಸುದೃಢಂ ಪುನರಾಗತೇಸ
ವಜ್ರೋಪಮಂ ಶರಮಮೂಮುಚದಿಂದ್ರಸೂನೌ(ನೋಃ) ॥೧೭॥

ಅ ॥ ಯಾವಾತನು ಎಲ್ಲಾ ಜನರ ಬುದ್ಧಿಯ ಸಮೂಹಕ್ಕೆ ಪ್ರೇರಕನೋ ಅಂತಹ ರಾಮ ಸ್ವರೂಪನಾದ ಮನೋಽಭಿಮಾನಿಯಾದ ರುದ್ರನಿಂದಲೂ ಶ್ರೇಷ್ಠನಾದ ವಿಷ್ಣುವಿಗೆ ಇವನು ವಾಲಿಯು, ಇವನು ಸುಗ್ರೀವನು ಎನ್ನುವ ವಿವೇಕವಿಷಯದಲ್ಲಿ ಅಜ್ಞತ್ವವು ಯಾವುದರಿಂದ? (ಅಜ್ಞತ್ವವಿಲ್ಲವೇ ಇಲ್ಲ.) ಪುನಃ ಮರುದಿವಸದಲ್ಲಿ ಯುದ್ಧಕ್ಕಾಗಿ ಬಂದಿರತಕ್ಕ ಆ ಸುಗ್ರೀವನಿಂದ ಆ ವಾಲಿಯು ಸಂಹರಿಸಿಕೊಳ್ಳಲ್ಪಡಲೇ ಬೇಕು ಎಂದು ಅತಿ ದೃಢ ಹೇಗೆ ಆದೀತೋ ಹಾಗೆ ಹೇಳಿಸಿಕೊಳ್ಳಲ್ಪಟ್ಟ ಶ್ರೀ ರಾಮನು ವಧನಿಶ್ಚಯೋಕ್ತ್ಯನಂತರದಲ್ಲಿ ವಜ್ರಕ್ಕೆ ಸದೃಶವಾದ ಬಾಣ ವನ್ನು ಇಂದ್ರನ ಮಗನಾದ ವಾಲಿಯಲ್ಲಿ ಬಿಟ್ಟನು ॥೧೭॥

'ಯಃ ಪ್ರೇರಕಃ' ಎನ್ನುವುದರಿಂದ ಯದ್ಯಪಿ ಅಜ್ಞಾನವನ್ನು ಪರಿಹರಿಸಿರುವರು. ಆದಾಗ್ಯೂ 'ನ ಮಯಾವಿವಿತೌ' ಎನ್ನುವ ರಾಮನ ಭಕ್ತಿಗೆ ನಿರ್ವಾಹಕವನ್ನು ತೋರಿಸುತ್ತಾರೆ. ಅಥವಾ ಮರುದಿವಸ ಹೇಗೆ ಬಂದನು, ಹೇಗೆ ಮೃತನಾದನು? ಎಂದರೆ ಪುನಃ ಬಿಡಿಸಿ ಹೇಳುತ್ತಾರೆ—

ಮೂ ॥ ರಾಮಾಜ್ಞಯೈವ ಲತಯಾ ರವಿಜೇ ವಿಭಕ್ತೇ
ವಾಯೋಃ ಸುತೇನ ರಘುಪೇಣ ಶರೇಪು (ಚ) ಮುಕ್ತೇ ॥
ಶ್ರುತ್ವಾಸ್ಯ ಶಬ್ದಮತುಲಂ ಹೃದಿ ತೇನ ವಿದ್ಧ
ಇಂದ್ರಾತ್ಮಜೋ ಗಿರಿರಿವಾಪತದಾಶು ಸನ್ನಃ ॥೧೮॥

ಅ ॥ ಹನುಮಂತನಿಂದ ಶ್ರೀ ರಾಮನ ಆಜ್ಞೆಯಿಂದಲೇ ಪುಷ್ಪಮಾಲಿಕೆಯಿಂದ (ಸಮಾನ ರೂಪವುಳ್ಳ ವಾಲಿಯುದೆಶೆಯಿಂ) ಸೂರ್ಯಪುತ್ರನಾದ ಸುಗ್ರೀವನು ವಿಲಕ್ಷಣವಾಗಿ ಮಾಡಲ್ಪ ಡುತ್ತಿರಲು, ಶ್ರೀರಾಮನಿಂದ ಬಾಣವು ಬಿಡಲ್ಪಡುತ್ತಿರಲು, ಈ ಬಾಣದ ಅಸದೃಶವಾದ ಶಬ್ದವನ್ನು ಕೇಳಿ ಸಂಕಟವನ್ನು ಹೊಂದಿದ ಇಂದ್ರಪುತ್ರನಾದ ವಾಲಿಯು ಹೃದಯದಲ್ಲಿ ಆ ಬಾಣದಿಂದ ಹೊಡೆಯಲ್ಪಟ್ಟವನಾಗಿ ಶೀಘ್ರದಲ್ಲಿ ಪರ್ವತದಂತೆಯೇ ಬಿದ್ದನು.

**ವಿಶೇಷಾಂಶ**— ಹನುಮಂತನು ಸುಗ್ರೀವನಿಗೆ ಪುಷ್ಪಮಾಲಿಕೆಯನ್ನು ಹಾಕಿದ್ದು ಆಜ್ಞೆ ಯನ್ನುಪರಿಪಾಲಿಸುವುದಕ್ಕಾಗಿಯೇ. ಶ್ರೀ ರಾಮನಿಗೆ ಅಜ್ಞಾನವಿದೆ ಎನ್ನುವ ಸಂದೇಹದಿಂದ ಅಲ್ಲಎನ್ನುವ ಅಭಿಪ್ರಾಯದಿಂದ 'ರಾಮಾಜ್ಞಯೈವ' ಎಂದು ಏವಕಾರವು. ॥೧೮॥

ಶ್ರೀ ರಾಮನು ವಾಲಿಯ ಭೀತಿಯಿಂದ ಅದೃಶ್ಯವಾಗಿ ಸಂಹರಿಸಿದನು ಎಂದು ಗ್ರಂಥಾಂತ ರದಲ್ಲಿ ಹೇಳಿದ ವಿರೋಧವನ್ನು ಎರಡುಶ್ಲೋಕಗಳಿಂದ ಪರಿಹರಿಸುತ್ತಾರೆ. ಅಥವಾ ಹಾಗಾದರೆ ಅತಿ ಸಮರ್ಥನಾದಾಗ್ಯೂ ಶ್ರೀ ರಾಮನು ಯಾವುದಕ್ಕಾಗಿ ಅದೃಶ್ಯನಾಗಿ ಸಂಹರಿಸಿದನು ಎಂದರೆ—

ಮೂ ॥ ಭಕ್ತೋ ನ್ವಮನ್ಯೈಷ ಯದಿ ಮಾಮಭಿಪಶ್ಯತೀಹ
ಪಾದೌ ಧ್ರುವಂ ಮಮ ಸಮೇಷ್ಯತಿ ನಿರ್ವಿಚಾರಃ ॥
ಯೋಗ್ಯೋ ವಧೋ ನ ಹಿ ಜನಸ್ಯ ಪದಾನತಸ್ಯ
ರಾಜ್ಯಾರ್ಥಿನಾ ರವಿಸುತೇನ ವಧೋಽರ್ಥಿತಶ್ಚ ॥೧೯॥

ಅ || ನನ್ನ ಭಕ್ತನಾದ ಈ ವಾಲಿಯು ಯಾವಪಕ್ಷದಲ್ಲಿ ನನ್ನನ್ನು ನೋಡುತ್ತಾನೋ. (ಹಾಗಾದರೆ) ಶತ್ರುಪಕ್ಷದಲ್ಲಿರತಕ್ಕ ನನ್ನಲ್ಲಿ (ಶತ್ರುಪಕ್ಷದಲ್ಲಿರತಕ್ಕವನನ್ನು ಹೊಂದಬೇಕೋ ಬೇಡವೋ ಎಂದು) ವಿಚಾರ ರಹಿತನಾಗಿ ನನ್ನಪಾದಗಳನ್ನು ನಿಶ್ಚಯವಾಗಿಯೂ ಹೊಂದವನು. (ಹಾಗಾದರೆ ಪಾದಗಳನ್ನು ಹೊಂದಿದವನ ಸಂಸಾರವನ್ನು ಏಕೆ ಮಾಡುವುದಿಲ್ಲ ಎಂದರೆ) ಪಾದಗಳಲ್ಲಿ ಪ್ರಹ್ವೀಭೂತರಾದ ಜನರ ಸಂಹಾರವು ಯೋಗ್ಯವಲ್ಲವೆಂದು ಧರ್ಮಶಾಸ್ತ್ರಗಳಲ್ಲಿ ಪಸಿದ್ದವು. (ಹಾಗಾದರೆ ವಾಲಿಯನ್ನು ಸಂಹರಿಸಲಿಕ್ಕೆ ಏನು ನಿಮಿತ್ತವೆಂದರೆ) ರಾಜ್ಯವನ್ನು ಇಚ್ಛಿಸತಕ್ಕ ಸೂರ್ಯಪುತ್ರನಾದ ಸುಗ್ರೀವನಿಂದ ಸಂಹಾರವು ಪ್ರಾರ್ಥಿಸಲ್ಪಟ್ಟಿದೆ. ||೧೯||

ಹಾಗಾದರೆ ವಾಲಿ–ಸುಗ್ರೀವರು ಇಬ್ಬರೂ ಭಕ್ತರಾದ ಪ್ರಯುಕ್ತ ಸುಗ್ರೀವನ ಅಭೀಷ್ಟವನ್ನೇ ಏಕೆ ಮಾಡಬೇಕೆಂದರೆ–

ಮೂ || ಕಾರ್ಯಂ ಹ್ಯಭೀಷ್ಟಮಪಿ ತತ್ಪ್ರಣತಸ್ಯ ಪೂರ್ವಂ
ಶಸ್ತ್ರೋ ವಧೋ ನ ಪದಯೋಃ ಪ್ರಣತಸ್ಯ ಚೈವ ||
ತಸ್ಮಾದದೃಶ್ಯತನುರೇವ ನಿಹನ್ಮಿ ಶಕ್ರ
ಪುತ್ರಂ ಕ್ಷಿತೀಶ ತಮದೃಶ್ಯತಯಾ ಜಘಾನ ||೨೦||

ಅ || ಆದಕಾರಣ ಆದಿಯಲ್ಲಿ ಪ್ರಹ್ವೀಭೂತನಾದವನ ಅಭೀಷ್ಟವನ್ನು ಮಾಡಬೇಕು. ಚರಣಗಳಲ್ಲಿ ಪ್ರಹ್ವೀಭೂತನಾದವನ ಸಂಹಾರವು ಶ್ಲಾಘ್ಯವಲ್ಲವೇ ಅಲ್ಲವೋ, ಆದಕಾರಣ ಅದೃಶ್ಯವಾದ ಶರೀರವುಳ್ಳವನಾಗಿಯೇ ದೇವೇಂದ್ರನ ಮಗನಾದ ವಾಲಿಯನ್ನು ಸಂಹರಿಸುತ್ತೇನೆ. ಆದಕಾರಣ (ಯುದ್ಧದಲ್ಲಿ ಕೊಲ್ಲುತ್ತೇನೆಂದು ವಿಚಾರಮಾಡಿಯೇ) ಆ ವಾಲಿಯನ್ನು ಅದೃಶ್ಯನಾಗಿಯೇ ಸಂಹರಿಸಿದನು.

**ವಿಶೇಷಾಂಶ**— ವಾಲಿಯು ಬಲಸ್ಪರ್ಧೆಯಿಂದ ಭೀತನಾಗಿ ಅಡಗಿದವನಾಗಿಯೇ ಸಂಹರಿಸಿದವನು ಎನ್ನುವ ಶಂಕೆಯನ್ನು ತಡೆಯುವದಕ್ಕಾಗಿಯೇ 'ಭೀಷಾಸ್ಮಾದ್ವಾತಃ ಪವತೇ' ಎನ್ನುವ ಶ್ರುತಿಪ್ರಸಿದ್ಧಿಯನ್ನು 'ಸ್ಮ' ಪದದಿಂದ ಸೂಚಿಸಿದರು. (2) ವಾಲಿಗೂ ಅಸಾಧ್ಯವಾದ ಏಳು ತಾಲವೃಕ್ಷಗಳನ್ನು ಚೂರ್ಣೀಕರಿಸುವಿಕೆ ಮೊದಲಾದಂವುಗಳಿಂದ ವಾಲಿಯಿಂದಲೂ ಅತಿಸಮರ್ಥನಾದವನಿಗೆ ವಾಲಿಯಿಂದ ಭೀತಿಯು ಹೇಗೆ ಎನ್ನುವ ಪ್ರತ್ಯಕ್ಷಪ್ರಸಿದ್ಧಿಯನ್ನು ಸೂಚಿಸಿದರು. ||೨೦||

ದೃಷ್ಟಿಗೋಚರನಾದ ಪ್ರತಿಭಟನ ಬಲವು ನಿನ್ನನ್ನೇ ಹೊಂದುತ್ತದೆಂದು ವಾಲಿಗೆ ರುದ್ರನ ವರವನ್ನು ಕೊಟ್ಟದ್ದರಿಂದ ಆ ವಾಲಿಯ ಭಯದಿಂದ ಶ್ರೀ ರಾಮನು ಕಾಣದೆ ಇದ್ದವನಾಗಿ ವಾಲಿಯನ್ನು ಸಂಹರಿಸಿದನೆಂದು ಪುರಾಣದಲ್ಲಿರತಕ್ಕ ವಿರೋಧವನ್ನು ಪ್ರಮಾಣದಿಂದ ಪರಿಹರಿಸುತ್ತಾರೆ. ಅಥವಾ 'ಸ್ಮ' ಎನ್ನುವ ಪದದಿಂದ ಸೂಚಿತವಾದ ಅರ್ಥವನ್ನು ತಾನೇ ಸ್ಪಷ್ಟೀಕರಿಸುತ್ತಾರೆ—

ಮೂ || ಯಃ ಪ್ರೇರಕಃ ಸಕಲಲೋಕಬಲಸ್ಯ ನಿತ್ಯಂ
ಪೂರ್ಣಾನ್ಯಯೋಚ್ಚ ಬಲವೀರ್ಯತನುಃ ಸ್ವತಂತ್ರಃ ||
ಕಿಂ ತಸ್ಯ ದೃಷ್ಟಿಪಥಗಸ್ಯ ಚ ವಾನರೋ ಽಯಂ
ಕರ್ತೇಶ ಚಾಪಮಪಿ ಯೇನ ಪುರಾ ವಿಭಗ್ನಂ||೨೧||

ಅ ॥ ಯಾವಾತನು ನಿತ್ಯದಲ್ಲಿಯೂ ಎಲ್ಲಾ ಜನರ ಮತ್ತು ಎಲ್ಲಾ ಜಗತ್ತಿನ ಬಲಕ್ಕೆ ಪ್ರೇರಕನೋ, ಪೂರ್ಣಗಳಾದ, ನಾಶರಹಿತಗಳಾದ, ಉತ್ಕೃಷ್ಟಗಳಾದ ಬಲವೀರ್ಯಗಳೇ ಶರೀರವಾಗಿ ಉಳ್ಳವನೋ, ಸರ್ವ ಸ್ವತಂತ್ರನೋ, ಅಂತಹ ದೃಷ್ಟಿಮಾರ್ಗವನ್ನು ಹೊಂದತಕ್ಕ (ಅಂದರೆ, ದೃಷ್ಟಿಗೋಚರನಾದ) ಶ್ರೀ ರಾಮನಿಗೆ ಈ ವಾಲಿಯು ಏನು ಮಾಡುವನು? (ರುದ್ರನ ವರದಿಂದ ಗೆಲ್ಲುವನು ಎಂದರೆ—) ಯಾವ ಜನಕರಾಜನಿಂದ ಹೊಂದಲ್ಪಟ್ಟ ಆ ರುದ್ರ ಧನುಸ್ಸು ಶ್ರೀ ರಾಮನಿಂದ ಸ್ವಯಂವರಕಾಲದಲ್ಲಿ ಮುರಿಯಲ್ಪಟ್ಟದೋ(ತಥಾಚ ರುದ್ರನ ವರವು ಅಕಿಂಚಿತ್ಕರವು) ॥೨೧॥

ಮೂ ॥ ಸನ್ನೇಽಥ ವಾಲಿನಿ ಜಗಾಮ ಚ ತಸ್ಯ ಪಾರ್ಶ್ವಂ
ಪ್ರಾಹೈನಮಾರ್ದ್ರವಚಸಾ ಯದಿ ವಾಂಛಸಿ ತ್ವಂ ॥
ಉಜ್ಜೀವಯಿಷ್ಯ ಇತಿ ನೈಚ್ಛದಸೌ ತ್ವದಗ್ರೇ
ಕೋ ನಾಮ ನೇಚ್ಛತಿ ಮೃತಿಂ ಪುರುಷೋತ್ತಮೇತಿ ॥೨೨॥

ಅ ॥ ವಾಲಿಯು ಸಂಕಟವನ್ನು ಹೊಂದಿ ಮೂರ್ಛಿತನಾಗುತ್ತಿರಲು ಆಮೇಲೆ ಶ್ರೀ ರಾಮನು ಆ ವಾಲಿಯ ಸಮೀಪವನ್ನು ಕುರಿತು ಹೋದನು ಸ್ನೇಹಾಮೃತದಿಂದ ಆರ್ದ್ರವಾದ ವಾಕ್ಯಾಮೃತದಿಂದ ಮೂರ್ಛಿತನಾದ ಆ ವಾಲಿಯನ್ನು ಕುರಿತು ಹೇಳಿದನು. ಎಲೋ ವಾಲಿಯೇ! ಜೀವನವನ್ನು ಯಾವ ಪಕ್ಷದಲ್ಲಿ ಇಚ್ಛಿಸುತ್ತೀಯೋ ಹಾಗಾದರೆ ಬದುಕಿಸುತ್ತೇನೆ, ಎಂದು ಹೇಳಿದ ಶ್ರೀರಾಮನ ಮಾತಿಗೆ ಈ ವಾಲಿಯು ಹೇಳುತ್ತಾನೆ— ಎಲೋ ಪುರುಷೋತ್ತಮನೇ! ನಾನು ಜೀವನವನ್ನು ಇಚ್ಛಿಸಲಿಲ್ಲ: ನಿನ್ನ ಎದುರಿನಲ್ಲಿ ಪ್ರಸಿದ್ಧನಾದ ಯಾವ ಜ್ಞಾನಿಯು ಮರಣವನ್ನು ಇಚ್ಛಿಸ ವುದಿಲ್ಲ? ಎಲ್ಲರೂ ಇಚ್ಛಿಸುತ್ತಾರೆ ವಿಶ್ವಕರ್ತನಾದ ಚತುರ್ಮುಖನು ನಿಯತಕಾಲದಲ್ಲಿ ಇಚ್ಛಿಸುತ್ತಾನೆಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧಿಯಿದೆ. ಯಾರು ಇಚ್ಛಿಸಲಾರನೋ ಅವನು ಕುತ್ಸಿತ ಪುರುಷನೆಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧಿಯಿದೆ. ಹೀಗೆ ಇರಲು ನನಗೆ ಜೀವನವು ಹೇಗೆ ಯುಕ್ತವಾಗುವುದು, ಎಂದು ಹೇಳುತ್ತಾ ಜೀವನವನ್ನು ಇಚ್ಛಿಸಲಿಲ್ಲ.

**ವಿಶೇಷಾಂಶ** — (1) ವಾಲಿಯನ್ನು ಬದುಕಿಸಿದರೆ ಸುಗ್ರೀವನಿಗೋಸ್ಕರ ಮಾಡಿದ ಪ್ರತಿಜ್ಞೆಗೆ ಭಂಗವುಂಟಾಗುವುದು ಎಂದು ತಿಳಿಯುತ್ತಾ ಶ್ರೀ ರಾಮನು ಏಕೆ ಅಲ್ಲಿಗೆ ಹೋದನು ಎಂದರೆ— ಸಮೀಪಕ್ಕೆ ಹೋಗಿ ಬದುಕಿಸುವೆನು ಎಂದು ನಾನು ಹೇಳಿದಾಗ್ಯೂ ಅಮೋಘವಾದ ನನ್ನ ಬಾಣವನ್ನು ಬಿಟ್ಟ ಮೇಲೆ ಜ್ಞಾನಿಯಾದವನು; ಬದುಕುವೆನೆಂದು ಬೇಡಲಾರನು, ಎಂದು ತಿಳಿದವನಾಗಿಯೇ ಹೋದನು. ಬಾಣವನ್ನು ಬಿಡುವುದಕ್ಕಿಂತ ಮೊದಲು ಕಂಡರೆ ಬಾಧಕವಿಲ್ಲದಿರುವುದರಿಂದ ಚರಣಾರವಿಂದವನ್ನೇ ಹಿಡಿದು ತನ್ನ ಜೀವನವನ್ನೇ ಪ್ರಾರ್ಥಿಸಿಯಾನು. ಆದಕಾರಣ ಮೊದಲು ತನ್ನನ್ನು ತೋರಿಸಿಕೊಳ್ಳಲಿಲ್ಲ. ॥೨೨॥

ಮೂ ॥ ಕಾರ್ಯಾಣಿ ತಸ್ಯ ಚರಮಾಣಿ ವಿಧಾಯ ಪುತ್ರಂ
ತ್ವಗ್ರೇ ನಿಧಾಯ ರವಿಜಃ ಕಪಿರಾಜ್ಯ ಆಸೀತ್ ॥
ರಾಮೋಽಪಿ ತದ್ಗಿರಿವರೇ ಚತುರೋಽಥ ಮಾಸಾನ್
ದೃಷ್ಟ್ವಾ ಘನಾಗಮಮುವಾಸ ಸುಲಕ್ಷ್ಮಣೋಽಸೌ ॥೨೩॥

ಅ ॥ ಸೂರ್ಯಪುತ್ರನಾದ ಸುಗ್ರೀವನು ಆ ವಾಲಿಗೆ ಪ್ರೇತಸಂಸ್ಕಾರ ಕರ್ಮಗಳನ್ನು ಮಾಡಿ ಆ ವಾಲಿಯ ಪುತ್ರನಾದ ಅಂಗದನನ್ನು ವಿಶೇಷವಾಗಿ ಮುಂದೆ ಇಟ್ಟು (ಅಂದರೆ ಯುವ ರಾಜಪಟ್ಟವನ್ನು ಕಟ್ಟಿ, ಯುವರಾಜನಿಂದ ಯುಕ್ತನಾಗಿ) ಕಪಿಗಳ ಅಧಿಪತಿಯಾದನು. ಸುಗ್ರೀವನಿಗೆ ರಾಜ್ಯಪ್ರಾಪ್ತಿಯಾದ ಮೇಲೆ ಲಕ್ಷ್ಮಣನಿಂದ ಕೂಡಿದ ಶ್ರೀ ರಾಮನಾದರೂ ಮೇಘಗಳ ಆಗಮನವನ್ನು (ಅಂದರೆ ವರ್ಷರ್ತುವನ್ನು)ನೋಡಿ ಪರ್ವತಶ್ರೇಷ್ಠವಾದ ಮಾಲ್ಯವತ್ಪ ರ್ವತದಲ್ಲಿ ನಾಲ್ಕು ತಿಂಗಳುಗಳಲ್ಲಿ ಆವಾಸಮಾಡಿದನು. ॥೨೩॥

ಮೂ ॥ ಅಥಾತಿಸಕ್ತೇ ಽಕ್ಷಿತಿಪೇ ಕಪೀನಾಂ
ಪ್ರವಿಸ್ಮೃತೇ ರಾಮಕೃತೋಪಕಾರೇ ।
ಪ್ರಸ (ಸಂ) ಹ್ಯ ತಂ ಬುದ್ಧಿಮತಾಂ ವರಿಷ್ಠೋ
ರಾಮಾಂಘ್ರಿಭಕ್ತೋ ಹನುಮಾನುವಾಚ ॥೨೪॥

ಅ ॥ ರಾಜ್ಯಪ್ರಾಪ್ತಿಯಾದ ಮೇಲೆ ಶ್ರೀ ರಾಮನಿಂದ ಮಾಡಲ್ಪಟ್ಟ ಉಪಕಾರವುಳ್ಳ ಸ್ತ್ರೀ ರಾಜ್ಯಾದಿ ವಿಷಯಗಳಲ್ಲಿ ಅತ್ಯಂತ ಆಸಕ್ತನಾದ ಕಪಿಗಳ ರಾಜನಾದ ಸುಗ್ರೀವನು (ರಾಮನು ಮಾಡಿದ ಉಪಕಾರವನ್ನು) ಮರೆತು ಬಿಡುತ್ತಿರಲು, ಬುದ್ಧಿಯುಳ್ಳವರ ಮಧ್ಯದಲ್ಲಿ ಶ್ರೇಷ್ಠನಾದ ಶ್ರೀ ರಾಮನ ಪಾದಗಳಲ್ಲಿ ಭಕ್ತನಾದ ಹನುಮಂತನು ಆ ಸುಗ್ರೀವನನ್ನು ಬಲತ್ಕರಿಸಿ ನಿಂದಿಸಿ ಹೇಳಿದನು. ॥೨೪॥

ಮೂ ॥ ನ ವಿಸ್ಮೃತಿಸ್ತೇ ರಘುವರ್ಯಕಾರ್ಯೇ
ಕಾರ್ಯಾ ಕಥಂಚಿತ್ಸ ಹಿ ಸೋಽಭಿಪೂಜ್ಯಃ॥
ನ ಚೇತ್ತ್ವಯಂ ಕರ್ತುಮಭೀಷ್ಟಮದ್ಯ ತೇ
ಧ್ರುವಂ ಬಲೇನಾಪಿ ಹಿ ಕಾರಯಾಮಿ॥೨೫॥

ಅ ॥ ನೀನು ಸೀತಾನುಮಾರ್ಗಣರೂಪವಾದ ಶ್ರೀ ರಾಮನ ಕಾರ್ಯದಲ್ಲಿ ವಿಸ್ಮರಣವು ಯಾವಪ್ರಕಾರದಿಂದಲೂ ಮಾಡಕೂಡದು. ಏಕೆಂದರೆ -ಆ ಶ್ರೀ ರಾಮನು ನಮಗೆ ವಿಶೇಷವಾಗಿ ಪೂಜಾರ್ಹನಾಗಿರುತ್ತಾನೆ. ರಾಮನ ಅಭೀಷ್ಟವಾದ ಕಾರ್ಯವನ್ನು ನಿನಗೆ ಮಾಡಲಿಕ್ಕೆ ಇಚ್ಛಾ ವಿಷಯೀಭೂತವಾಗದೆ ಇದ್ದರೆ, ನಿನ್ನಿಂದ ನಿಶ್ಚಯವಾಗಿಯೂ ಬಲತ್ಕಾರದಿಂದಲೂ ಮಾಡಿ ಸುತ್ತೇನೆ. ॥೨೫॥

ಮೂ ॥ ಸ ಏವಮುಕ್ತ್ವಾ ಹರಿರಾಜಸನ್ನಿಧೌ
ದ್ವೀಪೇಷು ಸಪ್ತಸ್ವಪಿ ವಾನರಾನ್ಪ್ರತಿ ॥
ಸಂಮೇಲನಾಯಾಶು ಗತೀನ್ಸ (ನ್ಸ್ವ) ವಾನರಾನ್
ಪ್ರಸ್ಥಾಪಯಾಮಾಸ ಸಮುಸ್ತಶಃ ಪ್ರಭುಃ ॥೨೬॥

ಅ ॥ ಸರ್ವರಿಗೂ ಸಮರ್ಥನಾದ ಹನುಮಂತನು ಕಪಿಶ್ರೇಷ್ಠನಾದ ಸುಗ್ರೀವನ ಸಮೀಪದಲ್ಲಿ ಹಿಂದೆ ಹೇಳಿದಪ್ರಕಾರ ಹೇಳಿ ಜಂಬೂಪ್ಲಕ್ಷ ಮೊದಲಾದ ಏಳು ದ್ವೀಪಗಳಲ್ಲಿಯೂ ಇರತಕ್ಕ ಕಪಿಗಳನ್ನು ಕೂಡಿಸುವದಕ್ಕಾಗಿ ಶೀಘ್ರಗತಿಯುಳ್ಳ ಅಂದರೆ ಗಮನ ಸಮುದ್ರ

ದಲ್ಲಿಯೇ ಹನುಮಂತನ ಉಪದೇಶದಿಂದ ಮಾರ್ಗಗಳ ಜ್ಞಾನವುಳ್ಳ ಸುಗ್ರೀವನ ಸಮೀಪದಲ್ಲಿ ರತಕ್ಕ ಕಪಿಗಳನ್ನು ಕಳುಹಿಸಿಕೊಟ್ಟನು.

ವಿಶೇಷಾಂಶ — (1) ಶತಯೋಜನ ಪ್ರದೇಶದಲ್ಲಿ ಇರತಕ್ಕ ಲಂಕಾದ್ವೀಪಕ್ಕೆ ಹೋಗಲಿಕ್ಕೆ ಅಸಮರ್ಥಗಳಾದ ಕಪಿಗಳಿಗೆ ಲಂಕಾದ್ವೀಪಕ್ಕೆ ಹೋಗಲಿಕ್ಕೆ ಬಹುಲಕ್ಷಯೋಜನಗಳಿಂದ ಅಧಿಕ ತರಿತವಾದ ಏಳು ದ್ವೀಪಗಳಿಗೆ ಮರ್ಯಾದೀ ಭೂತವಾದ ಸಮುದ್ರವನ್ನುಲ್ಲಂಘಿಸುವ ವಿಷಯದಲ್ಲಿ ಹೇಗೆ ಸಾಮರ್ಥ್ಯವೆಂದರೆ— ಏಳು ಸಮುದ್ರಗಳಲ್ಲಿ ಹತ್ತು, ಮೂವತ್ತು, ನಲ್ವತ್ತು, ಐವತ್ತು ಮೊದಲು ತೊಂಭತ್ತು ಪರ್ಯಂತ ಯೋಜನಗಳಲ್ಲಿ ಅಲ್ಲಲ್ಲಿ ಅವಾಂತರ ದ್ವೀಪಗಳೂ, ಅಗಾಧ ಪ್ರದೇಶಗಳೂ ಇರುತ್ತವೆ. ಅವೆಲ್ಲವನ್ನೂ ಹನುಮಂತನ ಉಪದೇಶದಿಂದ ಕಪಿಗಳು ತಿಳಿ ರುತ್ತಾರೆ. ಲಂಕೆಯು ಮಧ್ಯದಲ್ಲಿ ಆದರೂ ಅದೂ ಇಲ್ಲ. ॥೨೬॥

ಮೂ ॥ ಹರೀಶ್ವರಾಜ್ಞಾಪ್ರಣಿಧಾನಪೂರ್ವಕಂ
ಹನೂಮತಾ ತೇ ಪ್ರಹಿತಾ ಹಿ ವಾನರಾಃ ॥
ಸಮಸ್ತಶೈಲದ್ರುಮಷಂಡಸಂಸ್ಥಿತಾನ್
ಹರೀನ್ಸಮಾದಾಯ ತದಾಭಿಜಗ್ಮು ॥೨೭॥

ಅ ॥ ಹನುಮಂತನಿಂದ ಕಳುಹಿಸಿಕೊಳ್ಳಲ್ಪಟ್ಟ ಆ ವಿನತಾದಿ ಕಪಿಗಳು ಕಪಿಶ್ರೇಷ್ಠನಾದ ಸುಗ್ರೀವನ ಅಪ್ಪಣೆಯಿಂದ ಅಂಗೀಕಾರಪೂರ್ವಕ ಹೇಗೆ ಆದೀತೋ ಎಲ್ಲಾ ಪರ್ವತಗಳೂ, ವೃಕ್ಷ ಖಂಡಗಳೂ ಇವುಗಳಲ್ಲಿರತಕ್ಕ ಕಪಿಗಳನ್ನು ಕರೆದುಕೊಂಡು ಸುಗ್ರೀವನ ರಾಜಧಾನಿಗೆ ಹೋದರು. ॥೨೭॥

ಮೂ ॥ ತದೈವ ರಾಮೋಽಪಿ ಹಿ ಭೋಗಸಕ್ತಂ
ಪ್ರಮತ್ತಮಾಲಕ್ಷ್ಯ ಕಪೀಶ್ವರಂ ಪ್ರಭುಃ॥
ಜಗಾದ ಸೌಮಿತ್ರಿಮಿದಂ ವಚೋ ಮೇ
ಪ್ಲವಂಗಮೇಶಾಯ ವದಾಶು ಯಾಹಿ ॥೨೮॥

ಅ ॥ ದ್ವೀಪಗಳಲ್ಲಿರತಕ್ಕ ಕಪಿಗಳು ಬರುವಕಾಲದಲ್ಲಿಯೇ ಸರ್ವಸಮರ್ಥನಾದ ಶ್ರೀ ರಾಮನೂ ಕೂಡ, ವಿಷಯಗಳಲ್ಲಿ ಆಸಕ್ತನಾದ, ಪ್ರಮಾದವನ್ನು ಹೊಂದಿದ ಕಪಿಶ್ರೇಷ್ಠ ನಾದ ಸುಗ್ರೀವನನ್ನು ಚೆನ್ನಾಗಿ ನೋಡಿ ಕಪಿಗಳಲ್ಲಿ ಶ್ರೇಷ್ಠನಾದ ಸುಗ್ರೀವನಿಗೋಸ್ಕರ ಮುಂದೆ ಹೇಳತಕ್ಕ ನನ್ನ ಈ ಮಾತನ್ನು ಹೇಳು. ಶೀಘ್ರದಲ್ಲಿ (ಸುಗ್ರೀವನ ಸಮೀಪಕ್ಕೆ) ಹೋಗು, ಎಂದು ಲಕ್ಷ್ಮಣನನ್ನು ಕುರಿತು ಹೇಳಿದನು. ॥೨೮॥

ಮೂ ॥ ಯದಿ ಪ್ರಮತ್ತೋಽಸಿ ಮದೀಯಕಾರ್ಯೇ
ನಯಾಮ್ಯಹಂ ತ್ವೇಂದ್ರಸುತಸ್ಯ ಮಾರ್ಗಂ ॥
ಪ್ರಾಯಃ ಸ ಕಾರ್ಯೇ ಪ್ರತಿಪಾದಿತೇ ಹಿ
ಮದೋದ್ಧತಾ ನ ಪ್ರತಿಕರ್ತುಮಿಚ್ಛತೇ ॥೨೯॥

ಅ || ಯಾವಪಕ್ಷದಲ್ಲಿ ನನ್ನಕಾರ್ಯದಲ್ಲಿ ಮರೆತುಬಿಟ್ಟವನು ಆಗಿರುತ್ತೀಯೋ ಹಾಗಾದರೆ ನಾನು ನಿನ್ನನ್ನು ಇಂದ್ರನ ಮಗನಾದ ವಾಲಿಯ ಮಾರ್ಗವನ್ನು ಒಯ್ಯುತ್ತೇನೆ ಅಂದರೆ ಸಂಹರಿಸುತ್ತೇನೆ) ಹೆಚ್ಚಾಗಿ ತಮ್ಮಕಾರ್ಯವು ಸಂಪಾದಿಸಿಕೊಳ್ಳಲ್ಪಡುತ್ತಿರಲು ಮದದಿಂದ ಪ್ರಮತ್ತರಾದವರು ಪ್ರತ್ಯುಪಕಾರ ಮಾಡಲಿಕ್ಕೆ ಸಮರ್ಥರಾಗುವುದಿಲ್ಲ. (ಅಂದರೆ ಇಚ್ಛಿಸಲಾರರು) ॥೨೯॥

ಮೂ || ಇತೀರ್ಯ್ಯ ರಾಮೇಣ ಸಮೀರಿತೇ ತದಾ
ಯಯೌ ಸಬಾಣಃ ಸಧನುಃ ಸ ಲಕ್ಷ್ಮಣಃ ॥
ದೃಷ್ಟ್ವೈವ ತಂ ತೇನ ಸಹೈವ ತಾಪನಿ
ರ್ಭಯಾದ್ಯಯೌ ರಾಮಪದಾಂತಿಕಂ ತ್ವರನ್ ॥೩೦॥

ಅ || ಈ ಪ್ರಕಾರ ಪೂಜ್ಯನಾದ ಶ್ರೀ ರಾಮನಿಂದ ಹೇಳಿಸಿಕೊಳ್ಳಲ್ಪಡುತ್ತಿರಲು ಆ ಲಕ್ಷ್ಮಣನು ಬಾಣದಿಂದ ಕೂಡಿದವನಾಗಿ, ಧನುಸ್ಸಿನಿಂದಕೂಡಿದವನಾಗಿ ಆಗಲೇ ಸುಗ್ರೀವನ ಪಟ್ಟಣಕ್ಕೆ ಹೋದನು. ಸೂರ್ಯನ ಪುತ್ರನಾದ ಸುಗ್ರೀವನು ಆ ಲಕ್ಷ್ಮಣನನ್ನು ನೋಡಿದೊಡನೆಯೇ ಆ ಲಕ್ಷ್ಮಣನಿಂದ ಕೂಡಿಕೊಂಡೇ ಭಯದಿಂದ ಶ್ರೀ ರಾಮನ ಪಾದಸಮೀಪವನ್ನು ಕುರಿತು ವೇಗಯುಕ್ತನಾಗಿ ಹೋದನು. ॥೩೦॥

ಮೂ || ಹನೂಮತಃ ಸಾಧುವಚೋಭಿರಾಶು
ಪ್ರಸನ್ನಚೇತಸ್ಯಧಿಪೇ ಕಪೀನಾಂ ॥
ಸಮಾಗತೇ ಸರ್ವಹರಿಪ್ರವೀರೈಃ
ಸಹೈವ ತಂ ವೀಕ್ಷ್ಯ ನನಂದ ರಾಘವಃ ॥೩೧॥

ಅ || ಹನುಮಂತನ ಶಿಕ್ಷಾರೂಪಗಳಾದ, ನಿರ್ದುಷ್ಟಗಳಾದ ವಚನಗಳಿಂದ ಚೆನ್ನಾಗಿ ಶ್ರೀ ರಾಮನಲ್ಲಿ ಭಕ್ತಿಯುಕ್ತವಾದ ಅಂತಃಕರಣವುಳ್ಳ ಕಪಿಗಳಿಗೆ ಅಧಿಪತಿಯಾದ ಸುಗ್ರೀವನು ಎಲ್ಲಾ ಕಪಿಶ್ರೇಷ್ಠರಿಂದ ಕೂಡಿಕೊಂಡೇ ಬರುತ್ತಿರಲು, ಶ್ರೀ ರಾಮನು ಆ ಸುಗ್ರೀವನನ್ನು ನೋಡಿ ಸಂತೋಷಪಟ್ಟನು ॥೩೧॥

ಮೂ || ಸಸಂಭ್ರಮಂ ತಂ ಪತಿತಂ ಪದಾಬ್ಜಯೋಃ
ತ್ವರನ್ಸಮುತ್ಥಾಪ್ಯ ಸಮಾಶ್ಲಿಷತ್ಪ್ರಭುಃ ॥
ಸ ಚೋಪವಿಷ್ಟೋ ಜಗದೀಶಸನ್ನಿಧೌ
ತದಾಜ್ಞಯೈವಾದಿಶದಾಶು ವಾನರಾನ್ ॥೩೨॥

ಅ || ಸರ್ವಸಮರ್ಥನಾದ ಶ್ರೀ ರಾಮನು ಸಂತೋಷದಿಂದ ಸಹಿತ ಹೇಗೆ ಆದೀತೋ ಹಾಗೆ ಪಾದಾರವಿಂದಗಳಲ್ಲಿ ಬಿದ್ದ ಆ ಸುಗ್ರೀವನನ್ನು ವೇಗಯುಕ್ತನಾಗಿ ಎಬ್ಬಿಸಿ ಅಪ್ಪಿಕೊಂಡನು. ಆ ಸುಗ್ರೀವನಾದರೂ ಶ್ರೀ ರಾಮನ ಸಮೀಪದಲ್ಲಿ ಕೂತುಕೊಂಡು ಜಗತ್ತಿಗೆ ಸ್ವಾಮಿಯಾದ ಶ್ರೀ ರಾಮನ ಅಪ್ಪಣೆಯಿಂದಲೇ ಶೀಘ್ರದಲ್ಲಿ ಕಪಿಗಳನ್ನು ಆಜ್ಞಾಪಿಸಿದನು.

**ವಿಶೇಷಾಂಶ**— (1) ಜಟಾಯುವಿನ ಮುಖದಿಂದ ರಾವಣನು ಸೀತೆಯನ್ನು ತೆಗೆದು ಕೊಂಡು ಹೋಗಿದ್ದಾನೆಂದು ಕೇಳಿ ತಿಳಿದಿರುವ ರಾಮನು ಪುನಃ ಹತ್ತುದಿಕ್ಕುಗಳಲ್ಲಿಯೂ ಸೀತೆಯನ್ನು ಹುಡುಕುವುದಕ್ಕಾಗಿ ಆಜ್ಞೆಯನ್ನು ಹೇಗೆ ಕೊಟ್ಟನು ಎನ್ನುವ ಶಂಕೆಯು ಬಂದೇ ಬರುವುದು. ಅದನ್ನು ಹೇಗೆ ಪರಿಹರಿಸಬೇಕೆಂದರೆ— ಲೋಕದಲ್ಲಿ ಕಳ್ಳರು ರಾಜನ ಮನೆಯಿಂದ ರಾಜನಿಗೆ ಉಪಭೋಗ್ಯವಾದ ವಸ್ತುವನ್ನು ಅಪಹರಿಸಿ ಪುನಃ ಅತಿಸಮರ್ಥನಾದ ರಾಜನ ಭಯದಿಂದ ಅದನ್ನು ತನ್ನ ಮನೆಯಲ್ಲಿಯೇ ಇಡುತ್ತಾರೆ. ಆದರೆ ಸರ್ವರಿಗೂ ಅಗಮ್ಯವಾದ ದುರ್ಗಾದಿಗಳಲ್ಲಿ ಇಟ್ಟು ರಕ್ಷಿಸುತ್ತಾರೆ. ರಾಜನೂ ಕೂಡ ತನ್ನ ಭಟರ ಮುಖಾಂತರ ಅಲ್ಲಲ್ಲಿ ವಿಚಾರ ಮಾಡಿ ಆ ವಸ್ತುಗಳನ್ನು ತರಿಸಬೇಕು ಎಂದು ಲೌಕಿಕವಾದ ರಾಜ ನೀತಿಯನ್ನು ಪ್ರಕಾಶಪಡಿಸುವುದಕ್ಕಾಗಿ, ಶ್ರೀರಾಮನು ತಿಳಿದವನಾದಾಗ್ಯೂ ಪ್ರತಿ ದಿಕ್ಕಿನಲ್ಲಿಯೂ ಹುಡುಕುವುದಕ್ಕಾಗಿ ಆಜ್ಞೆಯನ್ನು ಕೊಟ್ಟನು ಎಂದು ಪರಿಹಾರವು ಕೂಡುತ್ತದೆ. ಆದುದರಿಂದಲೇ ಹನುಮಂತನನ್ನು ಕುರಿತು ನೀನು ದಕ್ಷಿಣದಿಕ್ಕಿಗೇನೇ ಹೋಗು ಎಂದು ತಾನೇ ಅಜ್ಞಾಪಿಸಿದನು.' (2) ಹಾಗಾದರೆ, ದಕ್ಷಿಣದಿಕ್ಕಿಗೆ ಹೋದ ಹನುಮಾದಿಗಳಿಗೆ ಕಿಷ್ಕಿಂದಾ ಪಟ್ಟಣದೆಶೆಯಿಂದ ಬಹು ದೂರವಾದ ಉತ್ತರ ಭಾಗದಲ್ಲಿರತಕ್ಕ ವಿಂಧ್ಯಾಚಲ ಪ್ರಾಪ್ತಿಯು ಹೇಗೆ ಎಂದರೆ—ಕಿಷ್ಕಿಂಧಾಪಟ್ಟಣದೆಶೆಯಿಂದ ಪೂರ್ವ ಸಮುದ್ರ ಪರ್ಯಂತವಾಗಿಯೂ, ಪಶ್ಚಿಮ ಸಮುದ್ರ ಪರ್ಯಂತವಾಗಿಯೂ, ದಕ್ಷಿಣ ಸಮುದ್ರಪರ್ಯಂತವಾಗಿಯೂ,ಕ್ರಮವಾಗಿ ನಲ್ವತ್ತು,ಮೂವತ್ತು, ಅರುವತ್ತು ಯೋಜನಗಳಿಂದ ಅಭ್ಯಂತರವಾದ ದೇಶವೇ. ಅದಕ್ಕಿಂತಲೂ ಅಧಿಕವಾದ ದೇಶವಿಲ್ಲ. ಬಹು ಮಂದಿ ಕಪಿಗಳಿಗೆ ಮಾಸಪರ್ಯಂತವಾಗಿ ಹುಡುಕುವುದೂ ಕೂಡಲಾರದು. ಮೇರುಪರ್ವತವನ್ನು ಅವಧೀಕರಿಸಿಕೊಂಡು ಕೇವಲ ಜಂಬೂದ್ವೀಪದಲ್ಲಿ ಪ್ರಾಚ್ಯಾದಿ ದಿಕ್ಕುಗಳಲ್ಲಿ ಹುಡುಕುವುದಕ್ಕಾಗಿ ಅತಿ ದೇಶವು ಎಂದು ಎಲ್ಲರೂ ಹೇಳಬೇಕು ||೩೨||

ಮೂ ॥ ಸಮಸ್ತದಿಕ್ಷು ಪ್ರಹಿತೇಷು ತೇನ
ಪ್ರಭುರ್ಹನೂಮಂತಮಿದಂ ಬಭಾಷೇ ॥
ನ ಕಶ್ಚಿದೀಶಸ್ತ್ವದೃತೇಽಸ್ತಿ ಸಾಧನೇ
ಸಮಸ್ತಕಾರ್ಯಪ್ರವರಸ್ಯ ಮೇಽಸ್ಯ ||೩೩||

ಅ ॥ ಎಲ್ಲಾ ದಿಕ್ಕುಗಳಲ್ಲಿ ಆ ಸುಗ್ರೀವನಿಂದ (ಕಪಿಗಳು) ಕಳುಹಿಸಿಕೊಳ್ಳಲ್ಪಡುತ್ತಿರಲು ಸರ್ವಸಮರ್ಥನಾದ ಶ್ರೀ ರಾಮನು ಹನುಮಂತನನ್ನು ಕುರಿತು ಈ ಮಾತನ್ನು ಹೇಳಿದನು. ನನ್ನ ಸರ್ವ ಕಾರ್ಯಗಳಲ್ಲಿ ಮುಖ್ಯವಾದ ಸೀತಾನ್ವೇಷಣವ್ಯಾಜರೂಪವಾದ ದೇವಕಾರ್ಯವನ್ನು ಸಂಪಾದಿಸುವ ವಿಷಯದಲ್ಲಿ ನೀನು ಹೊರತು ಯಾರೊಬ್ಬನೂ ಸಮರ್ಥನಲ್ಲ ||೩೩||

ಮೂ ॥ ಅತಸ್ತ್ವಮೇವ ಪ್ರತಿಯಾಹಿ ದಕ್ಷಿಣಾಂ
ದಿಶಂ ಸಮಾದಾಯ ಮುದಂಗುಲೀಯಕಂ ॥
ಇತೀರಿತೋಽಸೌ ಪುರುಷೋತ್ತಮೇನ
ಯಯೌ ದಿಶಂ ತಾಂ ಯುವರಾಜಯುಕ್ತಃ ||೩೪||

ಅ ॥ ಆದಕಾರಣ ನೀನೇ ನನ್ನ ಮುದ್ರಾಂಗುರವನ್ನು ಹಿಡಿದುಕೊಂಡು ದಕ್ಷಿಣದಿಕ್ಕಿಗೆ ಹೋಗು. ಹೀಗೆ ಪುರುಷೋತ್ತಮನಾದ ಶ್ರೀ ರಾಮನಿಂದ ಹೇಳಿಸಿಕೊಳ್ಳಲ್ಪಟ್ಟ ಹನುಮಂತನು ಯುವರಾಜನಿಂದ ಕೂಡಿದವನಾಗಿ ಆ ದಕ್ಷಿಣದಿಕ್ಕನ್ನು ಕುರಿತು ಹೋದನು. ||೩೪||

ಮೂ ॥ ಸಮಸ್ತದಿಕ್ಷು ಪ್ರತಿಯಾಪಿತಾ ಹಿ ತೇ
ಹರೀಶ್ವರಾಜ್ಞಾಮುಪಧಾರ್ಯ ಮಾಸತಃ ॥
ಸಮಾಯಯುಸ್ತೇಽಂಗದಜಾಂಬವನ್ಮುಖಾಃ
ಸುತೇನ ವಾಯೋಸ್ಸಹಿತಾ ನ ಚಾಯಯುಃ ॥೩೫॥

ಅ ॥ ಎಲ್ಲಾ ದಿಕ್ಕುಗಳಲ್ಲಿ ಕಳುಹಿಕೊಳ್ಳಲ್ಪಟ್ಟ ಆ ಕಪಿಶ್ರೇಷ್ಠರು ಕಪಿಶ್ರೇಷ್ಠನಾದ ಸುಗ್ರೀವನ ಅಪ್ಪಣೆಯನ್ನು ತೆಗೆದುಕೊಂಡು ಮಾಸಮಾತ್ರದಿಂದ ಬಂದರು. ವಾಯುಪುತ್ರನಾದ ಹನುಮಂತನಿಂದ ಸಹಿತರಾದ ಪ್ರಸಿದ್ಧರಾದ ಅಂಗದ ಜಾಂಬವಂತ ಮೊದಲಾದವರು ಮಾಸ ಮಾತ್ರದಿಂದ ಬರಲಿಲ್ಲ. ॥೩೫॥

ಮೂ ॥ ಸಮಸ್ತದುರ್ಗಪ್ರವರಂ ದುರಾಸದಂ
ವಿಮಾರ್ಗತಾಂ ವಿಂಧ್ಯಗಿರಿಂ ಮಹಾತ್ಮನಾಂ ॥
ಗತಃ ಸ ಕಾಲೋ ಹರಿರಾಡುದೀರಿತಃ
ಸಮಾಸದಂಶ್ಚಾಥ ಬಿಲಂ ಮಹಾದ್ಭುತಂ ॥೩೬॥

ಅ ॥ ಎಲ್ಲಾ ಅಗಮ್ಯಸ್ಥಾನಗಳಲ್ಲಿ ಶ್ರೇಷ್ಠನಾದ ಹೊಂದಲಸಾಧ್ಯವಾದ, ವಿಂಧ್ಯಗಿರಿಯನ್ನು ಹುಡುಕತಕ್ಕ (ಇಲ್ಲಿಯೂ ಸೀತೆಯನ್ನು ಹುಡುಕತಕ್ಕ) ಉತ್ತಮರಾದ ಅಂಗದಾದಿಗಳಿಗೆ ಕಪಿಶ್ರೇಷ್ಠನಾದ ಸುಗ್ರೀವನಿಂದ ಹೇಳಲ್ಪಟ್ಟ ಮಾಸಮಾತ್ರಾವದಿಕವಾದ ಕಾಲವು ದಾಟಿ ಹೋಯಿತು. ಒಂದು ತಿಂಗಳು ಮುಗಿದ ಮೇಲೆ ಅತ್ಯಾಶ್ಚರ್ಯಕರವಾದ ಗುಹೆಯನ್ನು ಹೊಂದಿದರು. ॥೩೬॥

ಅತ್ಯಾಶ್ಚರ್ಯವಾಗಿದೆ ಎನ್ನುವಲ್ಲಿನಿಮಿತ್ತವನ್ನು ಹೇಳುತ್ತಾರೆ—

ಮೂ ॥ ಕೃತಂ ಮಯೇನಾತಿವಿಚಿತ್ರಮುತ್ತಮಂ
ಸಮೀಕ್ಷ್ಯ ತತ್ತಾರ ಉವಾಚ ಚಾಂಗದಂ ॥
ವಯಂ ನ ಯಾಮೋ ಹರಿರಾಜಸನ್ನಿಧಿಂ
ವಿಲಂಘಿತೋ ನಃ ಸಮಯೋ ಯತೋಽಸ್ಯ ॥೩೭॥

ಅ ॥ ಮಯನಾಮಕ ದೈತ್ಯವರ್ಧಕಿಯಿಂದ ಮಾಡಲ್ಪಟ್ಟ ಅತ್ಯಂತ ವಿಚಿತ್ರವಾದ, ಉತ್ತಮವಾದ ಆ ಬಿಲವನ್ನು ನೋಡಿ ವಾಲಿಭಾರ್ಯೆಯಾದ ತಾರೆಯ ಸಹೋದರನಾದ ತಾರನಾಮಕ ಕಪಿಯು ಅಂಗದನನ್ನು ಕುರಿತು ಹೇಳಿದನು. ನಾವು ಕಪಿಶ್ರೇಷ್ಠನಾದ ಸುಗ್ರೀವನ ಸಮೀಪವನ್ನು ಕುರಿತು ಹೋಗುವುದಿಲ್ಲ. ಏಕೆಂದರೆ ಈ ಸುಗ್ರೀವನ ಕೇವಲ ಮಾಸವೇ ಅವಧಿಯಾಗಿವುಳ್ಳ ಕಾಲವು ನಮ್ಮಿಂದ ಉಲ್ಲಂಘಿಸಲ್ಪಟ್ಟಿದೆ. ॥೩೭॥

ಹೋಗುವುದಿಲ್ಲವೆನ್ನುವ ಉಕ್ತಿಗೆ ಕಾರಣವನ್ನು ಹೇಳುತ್ತಾರೆ—

ಮೂ ॥ ದುರಾಸದೋಽಸಾವತಿಚಂಡಶಾಸನೋ
ಹನಿಷ್ಯತಿ ತ್ವಾಮಪಿ ಕಿಂ ಮದಾದಿಕಾನ್ ॥
ಆಗಮ್ಯಮೇತದ್ಬಿಲಮಾಪ್ಯ ತತ್ಸುಖಂ
ವಸಾಮ ಸರ್ವೇ ಕಿಮಸಾವಿಹಾಚರೇತ್ ॥೩೮॥

ಅ ॥ ಹೊಂದಲಿಕ್ಕೆ ಅಶಕ್ಯನು (ಅಂದರೆ ಸೇವಿಸಲಿಕ್ಕೆ ಯೋಗ್ಯನಲ್ಲದವನು). ಅತ್ಯಂತ ಕ್ರೂರವಾದ ಆಜ್ಞೆಯುಳ್ಳವನು. ಈ ಸುಗ್ರೀವನು ಯುವರಾಜನಾದ ನಿನ್ನನ್ನೂ ಕೊಲ್ಲುವನು. ನಾನೇ ಮೊದಲಾದವರನ್ನು ಕೊಲ್ಲುವನೆಂದು ಏನು ಹೇಳತಕ್ಕುದು? ಆದಕಾರಣ ಸರ್ವಥಾ ಹೊಂದಲಸಾಧ್ಯವಾದ ಈ ಬಿಲವನ್ನು ಹೊಂದಿ ಸುಖವು ಹೇಗೆ ಆದೀತೋ ಹಾಗೆ ಇಲ್ಲಿಯೇ ಆವಾಸ ಮಾಡುವೆವು. ಈ ವಿಷಯದಲ್ಲಿ ಏನು ಮಾಡುವನು? ॥೩೮॥

ಹಾಗಾದರೆ ಸುಗ್ರೀವನನ್ನು ಬಿಟ್ಟು ಬಿಡುವ. ರಾಮನನ್ನು ಹೇಗೆ ಬಿಡುವುದು ಎಂದರೆ—

ಮೂ ॥ ನ ಚೈವ ರಾಮೇಣ ಸಲಕ್ಷ್ಮಣೇನ
ಪ್ರಯೋಜನಂ ನೋ ವನಚಾರಿಣಾಂ ಸದಾ ॥
ನ ಚೇಹ ನಃ ಪೀಡಯಿತುಂ ಸ ಚ ಕ್ಷಮಃ
ತತೋ ಮಮೇಯಂ ಸುವಿನಿಶ್ಚಿತಾ ಮತಿಃ ॥೩೯॥

ಅ ॥ ಯಾವಾಗಲೂ ವನದಲ್ಲಿರತಕ್ಕ ಫಲಾದಿಗಳನ್ನು ಭಕ್ಷಿಸತಕ್ಕ ಅಥವಾ ಅರಣ್ಯದಲ್ಲಿ ಸಂಚಾರಮಾಡತಕ್ಕ ನನಗೆ ಲಕ್ಷ್ಮಣನಿಂದ ಕೂಡಿದ ಶ್ರೀ ರಾಮನಿಂದ ಪ್ರಯೋಜನವು ಇಲ್ಲವೇ ಇಲ್ಲ. (ತಮ್ಮ ಕಾರ್ಯವನ್ನು ಮಾಡಿದರಿಂದ ರಾಮನು ಪ್ರತಿಕೂಲವನ್ನು ಮಾಡಿಯಾನು ಎಂದರೆ) ಆ ಶ್ರೀ ರಾಮನು ಇಲ್ಲಿ ನಮ್ಮನ್ನು ಪೀಡಿಸಲಿಕ್ಕೆ ಸಮರ್ಥನಲ್ಲ. ಆ ಕಾರಣದೆಶೆಯಿಂದ ನನಗೆ ಇಂತಹ ಬುದ್ಧಿಯು ಚೆನ್ನಾಗಿ ನಿಶ್ಚಿತವಾಗಿದೆ. ॥೩೯॥

ಮೂ ॥ ಇತೀರಿತಂ ಮಾತುಲವಾಕ್ಯಮಾಶು
ಸ ಆದದೇ ವಾಲಿಸುತೋಽಪಿ ಸಾದರಂ ॥
ಉವಾಚ ವಾಕ್ಯಂ ಚ ನ ನೋ ಹರೀಶ್ವರಃ
ಕ್ಷಮೀ ಭವೇಲ್ಲಂಘಿತಶಾಸನಾನಾಂ ॥೪೦॥

ಅ ॥ ವಾಲಿಯ ಪುತ್ರನಾದ ಆ ಅಂಗದನಾದರೂ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಮಾತುಲನ ವಾಕ್ಯವನ್ನು ಶೀಘ್ರದಲ್ಲಿ ವಿಚಾರಮಾಡದೆ ಪ್ರೀತಿ ಸಹಿತ ಹೇಗೆ ಆದೀತೋ ಹಾಗೆ ಅಂಗೀಕರಿಸಿದನು. ತಿರಸ್ಕರಿಸಲ್ಪಟ್ಟ ಆಜ್ಞೆಯುಳ್ಳ (ಅಂದರೆ ಆಜ್ಞಾಭಂಗವನ್ನು ಮಾಡತಕ್ಕ) ನಮಗೆ ಕಪಿಶ್ರೇಷ್ಠನಾದ ಸುಗ್ರೀವನು ಕ್ಷಮಾ ಉಳ್ಳವನು ಸರ್ವಥಾ ಆಗಲಾರನು ಎಂದು ವಾಕ್ಯವನ್ನು ಹೇಳಿದನು ॥೪೦॥

ಕ್ಷಮಾವುಳ್ಳವನು ಸರ್ವಥಾ ಆಗಲಾರನು ಎನ್ನುವ ಉಕ್ತಿಗೆ ಕಾರಣವನ್ನು ಸ್ಪಷ್ಟೀಕರಿಸುತ್ತಾರೆ—

ಮೂ ॥ ರಾಜ್ಯಾರ್ಥಿನಾ ಯೇನ ಹಿ ಘಾತಿತೋಽಗ್ರಜೋ
ಹೃತಾಶ್ಚ ದಾರಾಃ ಸುನೃಶಂಸಕೇನ ॥
ಸ ನಃ ಕಥಂ ರಕ್ಷತಿ ಶಾಸನಾತಿಗಾನ್
ನಿರಾಶ್ರಯಾನ್ದುರ್ಬಲಕಾನ್ಬಲೀ ಸ್ಥಿತಃ ॥೪೧॥

ಅ ॥ ಸಾಮ್ರಾಜ್ಯವನ್ನು ಇಚ್ಛಿಸತಕ್ಕ ಚೆನ್ನಾಗಿ ಹಿಂಸಕನಾದ ಯಾವ ಸುಗ್ರೀವನಿಂದ ಅಗ್ರಜನಾದ ವಾಲಿಯು ಸಂಹರಿಸಿಕೊಳ್ಳಲ್ಪಟ್ಟಿರುವನೋ, ಅಗ್ರಜನ ಹೆಂಡತಿಯಾದ ತಾರೆಯು ಅಪಹರಿಸಲ್ಪಟ್ಟಿರುವಳೋ, ಬಲದಲ್ಲಿರತಕ್ಕ (ರಾಮನ ಆಶ್ರಯದಿಂದ ಬಲವುಳ್ಳ) ಆ ಸುಗ್ರೀವನು ಆಜ್ಞೆಯನ್ನು ಅತಿಕ್ರಮಿಸಿರುವ ಆಶ್ರಯವಿಲ್ಲದಿರುವ, ಬಲವಿಲ್ಲದಿರುವ ನಮ್ಮನ್ನು ಹೇಗೆ ರಕ್ಷಿಸುತ್ತಾನೆ? ॥ ೪೧ ॥

ಮೂ ॥ ಇತೀರಿತೇ ಶಕ್ರಸುತಾತ್ಮಜೇನ
ತಥೇತಿ ಚೋ(ಕೊ)ಚುಃ ಸಹ ಜಾಂಬವನ್ಮುಖಾಃ ॥
ಸರ್ವೇऽಪಿ ತೇಷಾಮಥ ಚೈಕಮತ್ಯಂ
ದೃಷ್ಟ್ವೈಹನೂಮಾನಿದಮಾಬಭಾಷೆ ॥ ೪೨ ॥

ಅ ॥ ದೇವೇಂದ್ರನ ಮಗನಾದ ವಾಲಿಯ ಮಗನಾದ ಅಂಗದನಿಂದ ಈಪ್ರಕಾರ ಹೇಳಿಸಿಕೊಳ್ಳಲ್ಪಡುತ್ತಿರಲು ಜಾಂಬವಂತನೇ ಮೊದಲಾದವರೆಲ್ಲರೂ ಒಟ್ಟುಕೂಡಿ ಹಾಗೆಯೇ ಆಗಲಿ ಎಂದು ಹೇಳಿದರು. ಕಪಿಗಳ ವಿಚಾರಾನಂತರದಲ್ಲಿ ಹನುಮಂತನು ಅಂಗದಾದಿಗಳ ಏಕಕಾರ್ಯ ವಿಷಯದಲ್ಲಿ ಬುದ್ಧಿಯನ್ನು ತಿಳಿದು ಈ ಮಾತನ್ನು ಹೇಳಿದನು.— ॥ ೪೨ ॥

ಮೂ ॥ ವಿಜ್ಞಾತಮೇತದ್ಧಿ ಮಯಾಂಗದಸ್ಯ
ರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಂ ॥
ಸಾಧ್ಯಂ ನ ಚೈತನ್ನ ಹಿ ವಾಯುಸೂನೂ-
ರಾಮಪ್ರತೀಪಂ ವಚನಂ ಸಹೇತ ॥ ೪೩ ॥

ಅ ॥ ನನ್ನಿಂದ ಅಂಗದನಿಗೆ ಸಾಮ್ರಾಜ್ಯಪ್ರಾಪ್ತಿಗಾಗಿ ತಾರನಿಂದ ಹೇಳಲ್ಪಟ್ಟ ಈ ವಾಕ್ಯವು ತಿಳಿಯಲ್ಪಟ್ಟಿತಷ್ಟೆ! ತಾರನಿಂದ ಹೇಳಲ್ಪಟ್ಟ ಈ ವಾಕ್ಯವು ಸಾಧ್ಯವಲ್ಲ. ಏಕೆಂದರೆ-ವಾಯುಪುತ್ರನಾದ ಹನುಮಂತನು ರಾಮನಿಗೆ ಪ್ರತಿಕೂಲವಾದ ವಚನವನ್ನು ಸಹಿಸಲಾರನು. ಮುಖ್ಯಪ್ರಾಣನಿಗೆ ಅಚ್ಛಿನ್ನಧರ್ಮವು ಪ್ರಸಿದ್ಧವಾಗಿದೆ. ॥ ೪೩ ॥

ಹಾಗಾದರೆ ಉಪಾಯದಿಂದ ನಿನ್ನನ್ನೂಕೂಡ ನಮಗೆ ಅನುಕೂಲವಾದ ಬುದ್ಧಿಯುಳ್ಳವನನ್ನಾಗಿಮಾಡುವೆನು ಎಂದರೆ—

ಮೂ ॥ ನ ಚಾಹಮಾಕ್ರಷ್ಟುಮುಪಾಯತೋऽಪಿ
ಶಕ್ಯಃ ಕಥಂಚಿತ್ಸಕಲೈಃ ಸಮೇತೈಃ ॥
ಸನ್ಮಾರ್ಗತೋ ನೈವ ಹಿ(ಚ) ರಾಘವಸ್ಯ
ದುರಂತಶಕ್ತೇರ್ಬಿಲಮಪ್ರಧೃಷ್ಯಂ ॥ ೪೪ ॥

ಅ ॥ ನಾನು ಮಿಲಿತರಾದ ನೀತಿ ಮೊದಲಾದ ಕಲೆಗಳಿಂದ ಸಹಿತರಾದ ನಿಮ್ಮಿಂದ ರಾಮನಿಗೆ ಅನುಕೂಲವಾದ ಮಾರ್ಗಪ್ರದೆಯಿಂದ ಸಾಮಾದ್ಯುಪಾಯದಿಂದಲೂ ಬಲದಿಂದಲೂ ನಿಮ್ಮ ಬುದ್ಧಿಗೆ ಅನುಸಾರಿಯನ್ನಾಗಿ ಮಾಡಲಿಕ್ಕೆ ಯಾವಪ್ರಕಾರದಿಂದಲೂ ಸಮರ್ಥನು

ಆಗಲಾರೆನು. ('ನ ಚೇಹ ನಃ ಪೀಡಯಿತುಂ ಸ ಚಕ್ಷಮಃ' ಎನ್ನುವುದಕ್ಕೆ ಉತ್ತರವನ್ನು ಹೇಳುತ್ತಾರೆ.) ಅಪರಿಮಿತ ಶಕ್ತಿಯುಳ್ಳ ರಾಮನಿಗೆ ಬಿಲವು ಅಗಮ್ಯವಾದುದು ಅಲ್ಲವಷ್ಟೆ? ॥ ೪೪ ॥

ಮೂ ॥ ವಚೋ ಮಮೈತದ್ಯದಿಚಾದರೇಣ
ಗ್ರಾಹ್ಯಂ ಭವೇದ್ವಸ್ತದತಿಪ್ರಿಯಂ ಮೇ ॥
ನ ಚೇದ್ಬಲಾದಪ್ಯಯೋ ಪ್ರವೃತ್ತಾನ್
ಪ್ರಶಾಸ್ಯ ಸನ್ಮಾರ್ಗಗತಾನ್ಕರೋಮಿ ॥ ೪೫ ॥

ಅ ॥ ಯಾವ ಪಕ್ಷದಲ್ಲಿ ನನ್ನ ಈ ಮಾತು ನಿಮ್ಮಿಂದ ಸ್ನೇಹದಿಂದ ಅಂಗೀಕಾರಯೋಗ್ಯವಾದುದು ಆಗುವುದಾದರೆ ನನಗೆ ಅತ್ಯಂತ ಹರ್ಷವಾಗುವುದು. ನನ್ನ ಮಾತು ಗ್ರಾಹ್ಯವಾಗದೆ ಇದ್ದರೆ ಅನ್ಯಾಯದಲ್ಲಿ ಪ್ರವೃತ್ತರಾದವರನ್ನು ಶಿಕ್ಷಿಸಿ ಬಲಾತ್ಕಾರದಿಂದ ಸನ್ಮಾರ್ಗದಲ್ಲಿರತಕ್ಕವರನ್ನಾಗಿ ಮಾಡುತ್ತೇನೆ ॥ ೪೫ ॥

ಮೂ ॥ ಇತೀರಿತಂ ತತ್ಪವನಾತ್ಮಜಸ್ಯ
ಶ್ರುತ್ವಾತಿಭೀತಾ ಧೃತಮೂಕಭಾವಾಃ ॥
ಸರ್ವೇಽನುಜಗ್ಮುಸ್ತಮಥಾದ್ರಿಮುಖ್ಯಂ
ಮಾ (ಮ) ಹೇಂದ್ರಮಾಸೇದುರಗಾಧಬೋಧಾಃ ॥ ೪೬ ॥

ಅ ॥ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ವಾಯುಪುತ್ರನಾದ ಹನುಮಂತನ ಈ ಮಾತನ್ನು ಕೇಳಿ ಅತ್ಯಂತ ಭಯಗ್ರಸ್ತರಾದ, ಧರಿಸಲ್ಪಟ್ಟ ಮೂಕಸ್ವಭಾವವುಳ್ಳ ಎಲ್ಲಾ ಕಪಿಗಳೂ ಆ ಹನುಮಂತನನ್ನು ಅನುಸರಿಸಿ ಹೋದರು. ವಿಂಧ್ಯಪರ್ವತವನ್ನು ಬಿಟ್ಟ ಮೇಲೆ ಗಂಭೀರ ಜ್ಞಾನಿಗಳಾದ ಕಪಿಗಳು ಪರ್ವತಶ್ರೇಷ್ಠವಾದ ಮಾಹೇಂದ್ರ ಪರ್ವತವನ್ನು ಹೊಂದಿದರು ॥ ೪೬ ॥

ಮೂ ॥ ನಿರೀಕ್ಷ್ಯಸೇ ಸಾಗರಮಪ್ರಧೃಷ್ಯ-
ಮಪಾರಮೇಯಂ ಸಹಸಾ ವಿಷಣ್ಣಾಃ ॥
ದೃಢಂ ನಿರಾಶಾಶ್ಚ ಮತಿಂ ಹಿ ದಧ್ರುಃ
ಪ್ರಾಯೋಪವೇಶಾಯ ತಥಾ ಚ ಚಕ್ರುಃ ॥ ೪೭ ॥

ಅ ॥ ಆ ಕಪಿಗಳು ಬಲದಿಂದ ಆಚೆವಡಕ್ಕೆ ಹೋಗಲಿಕ್ಕೆ ಅಯೋಗ್ಯವಾದ ಪರತೀರದಿಂದ ತಿಳಿಯಲು ಯೋಗ್ಯವಾಗದಿರುವ ಸಮುದ್ರವನ್ನು ನೋಡಿ ಶ್ರಾಂತರಾದವರಾಗಿ ನಿಶ್ಚಯವಾಗಿ ಜೀವದಾಶೆಯನ್ನು ಬಿಟ್ಟವರಾಗಿ (ಸುಗ್ರೀವನು ಸಂಹರಿಸುವನು ಎಂದು ನಿಶ್ಚಯವನ್ನು) ಮಾಡಿದರು. ಮತ್ತು ನಿರಶನ ವ್ರತಕ್ಕಾಗಿ ಬುದ್ಧಿಯನ್ನು ಧರಿಸಿದರು. ಹಾಗೆಯೇ ಮನಸ್ಸಿನಲ್ಲಿ ಹೇಗೆ ಧರಿಸಲ್ಪಟ್ಟದೋ ಹಾಗೆ ನಿರಶನಪೂರ್ವಕವಾಗಿ ಮರಣಕ್ಕಾಗಿ ಕುಳಿತವರಾಗಿ ಮಾಡಿದರು ॥ ೪೭ ॥

ಮೂ ॥ ಪ್ರಾಯೋಪವಿಷ್ಟಾಶ್ಚ ಕಥಾಂ (ಥಾಃ) ವದಂತೋ
ರಾಮಸ್ಯ ಸಂಸಾರವಿಮುಕ್ತಿದಾತುಃ ॥
ಜಟಾಯುಷಃ ಪಾತನ ಮೂಚಿರೇ
ತತ್ಸಂಪಾತಿನಾಮ್ನಃ ಶ್ರವಣಂ ಜಗಾಮ ॥ ೪೮ ॥

ಅ ॥ ನಿರಶನ ವ್ರತದಲ್ಲಿರತಕ್ಕ ಕಪಿಗಳು ಸಂಸಾರದಿಂದ ಮೋಕ್ಷವನ್ನು ಕೊಡತಕ್ಕ ಶ್ರೀ ರಾಮನ ಕಥೆಯನ್ನು ಪರಸ್ಪರವಾಗಿ ಹೇಳುವವರಾಗಿ ಜಟಾಯುವಿನ ಪತನವನ್ನು(ಮರಣವನ್ನು)ಹೇಳಿದರು. ಆ ಮರಣವು ಸಂಪಾತಿನಾಮಕ ಗೃಧ್ರನ ಶ್ರೋತ್ರೇಂದ್ರಿಯವನ್ನು ಹೊಂದಿತು. (ಅಂದರೆ ಸಂಪಾತಿಯು ಜಟಾಯುವಿನ ಮರಣವನ್ನು ಕೇಳಿದನು) ॥ ೪೮ ॥

ಸಂಪಾತಿಯ ಸ್ವರೂಪವನ್ನು ಹೇಳುತ್ತಾರೆ—

ಮೂ ॥ ತಸ್ಯಾಗ್ರಜೋಽಸಾ ವರುಣಸ್ಯ ಸೂನುಃ
ಸೂರ್ಯಸ್ಯ ಬಿಂಬಂ ಸಹ ತೇನ ಯಾತಃ ॥
ಜವಂ ಪರೀಕ್ಷನ್ನಥ ತಂ ಸುತಪ್ತಂ
ಗುಪ್ತ್ವಾ ಪತತ್ರಕ್ಷಯಮಾಪ್ಯ ಚಾಪತತ್ ॥ ೪೯ ॥

ಅ ॥ ಈ ಸಂಪಾತಿಯು ಆ ಜಟಾಯುವಿನ ಅಣ್ಣನು. ಸೂರ್ಯಸಾರಥಿಯಾದ ಅರುಣನ ಮಗನು. ಗತಿವೇಗವನ್ನು ಪರೀಕ್ಷಿಸುತ್ತಾ ಆ ಜಟಾಯುವಿನಿಂದ ಕೂಡಿಕೊಂಡು ಸೂರ್ಯನ ಬಿಂಬವನ್ನು ಹೊಂದಿದನು. ಸೂರ್ಯಮಂಡಲವನ್ನು ಹೊಂದಿದ ಮೇಲೆ ಅತ್ಯಂತ ತಪ್ತನಾದ ಆ ಜಟಾಯುವನ್ನು ಸಂರಕ್ಷಿಸಿ (ಅಂದರೆ ತಾನು ಜಟಾಯುವಿನ ಮೇಲೆ ಆಗಿ ತನ್ನ ರೆಕ್ಕೆಯ ನೆರಳಿನಿಂದ ರಕ್ಷಿಸಿ) ಪಕ್ಷ (ರೆಕ್ಕೆ) ಗಳ ನಾಶವನ್ನು ಹೊಂದಿ ಮಾಹೇಂದ್ರ ಪರ್ವತದಲ್ಲಿ ತಕ್ಕ ಮರದ ಮೇಲೆ ಬಿದ್ದನು. ॥ ೪೯ ॥

ಮೂ ॥ ಸ ದಗ್ಧಪಕ್ಷಃ ಸವಿತೃಪ್ರತಾಪಾತ್
ಶ್ರುತ್ವೈವ ರಾಮಸ್ಯ ಕಥಾಂ ಸಪಕ್ಷಃ ॥
ಭೂತ್ವಾ ಪುನಶ್ಚಾಶು ಮೃತಿಂ ಜಟಾಯುಷಃ
ಶುಶ್ರಾವ ಪೃಷ್ಟ್ವಾ ಪುನರೇವ ಸಮ್ಯಕ್ ॥ ೫೦ ॥

ಅ ॥ ಆ ಸಂಪಾತಿಯು ಸೂರ್ಯನ ಪ್ರಕೃಷ್ಟವಾದ ತೇಜಸ್ಸಿನ ದೆಶೆಯಿಂದ ಸುಡಲ್ಪಟ್ಟ ರೆಕ್ಕೆಯುಳ್ಳವನಾಗಿ ಶ್ರೀರಾಮನ ಕಥೆಯನ್ನು ಕೇಳಿಯೇ ರೆಕ್ಕೆಗಳಿಂದ ಸಹಿತನಾಗಿ ಪುನಃ (ಕಪಿಗಳನ್ನು) ಚೆನ್ನಾಗಿ ಭಕ್ತಿಯಿಂದಲೇ ಕೇಳಿ ರೆಕ್ಕೆಗಳನ್ನು ಹೊಂದಿದ ಮೇಲೆಯೂ ಜಟಾಯುವಿನ ಮರಣವನ್ನು ಕೇಳಿದನು. (ಅಂದರೆ ರೆಕ್ಕೆಗಳನ್ನು ಹೊಂದಿದ ಮೇಲೆಯೂ ಭಕ್ತಿಯಿಂದ ಕೇಳಿದನು. ) ॥ ೫೦ ॥

ಮೂ ॥ ಸ ರಾವಣಸ್ಯಾಥ ಗತಿಂ ಸುತೋಕ್ತ್ವಾಂ
ನಿವೇದ್ಯ ದೃಷ್ಟ್ವಾ ಜನಕಾತ್ಮಜಾಕೃತಿಂ ॥
ಸ್ವಯಂ ತಥಾಶೋಕವನೇ ಶಿಷಣ್ಣಾ
ಮವೋಚದೇಭ್ಯೋ ಹರಿಪುಂಗವೇಭ್ಯಃ ॥ ೫೧ ॥

ಅ ॥ ಶ್ರೀ ರಾಮನ ಕಥೆಯನ್ನು ಕೇಳಿದ ಮೇಲೆ ಆ ಸಂಪಾತಿಯು (ರಾವಣನು ಸೀತೆಯನ್ನು ಹಿಡಿದುಕೊಂಡು ಇದೇ ಮಾರ್ಗದಿಂದ ಹೋಗಿರುತ್ತಾನೆ. ಎಂದು) ತನ್ನ ಮಗನಾದ ಸುಪಾರ್ಶ್ವನಿಂದ ಹೇಳಲ್ಪಟ್ಟ ರಾವಣನ ಗಮನವನ್ನು ತಿಳಿಸಿ ಹಾಗೆಯೇ ತಾನು ಅಶೋಕವನದಲ್ಲಿ ಕುಳ್ಳಿರತಕ್ಕ ಜನಕರಾಜನ ಮಗಳಾದ ಸೀತಾದೇವಿಯ ಆಕಾರವನ್ನು (ಮಾಹೇಂದ್ರ ಪರ್ವತದೆಶೆಯಿಂದಲೇ) ನೋಡಿ ಈ ಕಪಿಶ್ರೇಷ್ಠರಾದ ಅಂಗದಾದಿಗಳಿಗೋಸ್ಕರ (ಈ ಪ್ರದೇಶದಿಂದ ನನ್ನಿಂದ ಆ ಸೀತಾದೇವಿಯು ಕಾಣಲ್ಪಟ್ಟಳು ಎಂದು) ಹೇಳಿದನು. ॥ ೫೦ ॥

ಮೂ ॥ ತತಸ್ತು ತೇ ಬ್ರಹ್ಮಸುತೇನ ಪೃಷ್ಟಾ
ನ್ಯವೇದಯನ್ನಾತ್ಮಬಲಂ ಪೃಥಕ್ ಪೃಥಕ್ ॥
ದಶೈವ ಚಾರಭ್ಯ ದಶೋತ್ತರಸ್ಯ
ಕ್ರಮಾತ್ಪಥೋ ಯೋಜನತೋಽಭಿ (ತಿ) ಯಾನೆ ॥ ೫೧ ॥

ಅ ॥ ಸಂಪಾತಿಯ ವಾಕ್ಯವನ್ನು ಕೇಳಿದ ಮೇಲೆ ಬ್ರಹ್ಮನ ಪುತ್ರನಾದ ಜಾಂಬವಂತನಿಂದ ಲಂಕೆಯನ್ನು ಕುರಿತು ಹೋಗುವ ವಿಷಯದಲ್ಲಿ ಸಾಮರ್ಥ್ಯವನ್ನು ಕೇಳಲ್ಪಟ್ಟ ಆ ಕಪಿಗಳು ಹತ್ತು ಯೋಜನಗಳನ್ನು ಆರಂಭಿಸಿ ಕ್ರಮದಿಂದ ಹತ್ತು ಹತ್ತು ಅಧಿಕವಾಗಿರುವ ಮಾರ್ಗವನ್ನು ಅತಿಕ್ರಮಿಸಿ ಹೋಗುವ ವಿಷಯದಲ್ಲಿ (ಅಂದರೆ ಹಾರುವುದರಲ್ಲಿ) ತಮ್ಮ ಬಲವನ್ನು ಪ್ರತ್ಯೇಕ ಪ್ರತ್ಯೇಕವಾಗಿ ತಿಳಿಸಿದರು ॥ ೫೨ ॥

ಮೂ ॥ ಸನೀಲಮೈಂದವಿವಿದಾಃ ಸತಾರಾಃ
ಸರ್ವೇಽಪ್ಯಶೀತ್ಯಾಃ ಪರತೋ ನ ಶಕ್ತಾಃ ॥
ಗಂತುಂ ಯದಾಥಾತ್ತ ಬಲಂ ಸ ಜಾಂಬವಾನ್
ಜಗಾದ ತಸ್ಮಾತ್ಪುನರಷ್ಟಮಾಂಶಂ ॥ ೫೩ ॥

ಅ ॥ ನೀಲ, ಮೈಂದ ಮೊದಲಾದವರಿಂದ ಕೂಡಿರುವ ತಾರನಿಂದ ಸಹಿತರಾದ ಎಲ್ಲಾ ಕಪಿಗಳೂ ಎಂಭತ್ತು ಯೋಜನಗಳದೆಶೆಯಿಂದ ಮೇಲೆ ಹೋಗಲಿಕ್ಕೆ ಯಾವಾಗ ಶಕ್ತರಾಗಲಿಲ್ಲವೋ ಆಗ ಮೊದಲು ಯಾವಾತನು ಸಾಮರ್ಥ್ಯವನ್ನು ಪ್ರಶ್ನೆಮಾಡಿರುವನೋ ಅಂತಹ ಜಾಂಬವಂತನು ಎಂಭತ್ತು ಯೋಜನ ಪರಿಮಾಣ ಬಲದೆಶೆಯಿಂದಲೂ ಪುನಃ ಹೆಚ್ಚು ಎಂಟನೇ ಒಂದಂಶವನ್ನು ('ಅಷ್ಟಮಃ ಅಂಶಃ ದಶಸಂಖ್ಯಾಕೋ ಯಸ್ಯ ಬಲಸ್ಯ ಎನ್ನುವ' ವ್ಯುತ್ಪತ್ತಿಯಿಂದ) (ಅಂದರೆ- ಹತ್ತು ಯೋಜನಗಳಿಂದ ಹೆಚ್ಚಾದ ತನ್ನ ಬಲವನ್ನು ಹೇಳಿದನು.) (ತಥಾಚ ತೊಂಭತ್ತು ಯೋಜನ ಪರ್ಯಂತವಾಗಿ ಹಾರಲಿಕ್ಕೆ ಶಕ್ತಿಯನ್ನು ಹೇಳಿದನು) ॥ ೫೩ ॥

ನನಗೆ ಮೊದಲು ಇರುತ್ತಿದ್ದ ಬಲವು ಈಗ ಇಲ್ಲವೆಂದು ಹೇಳುವುದಕ್ಕಾಗಿ ಅದಕ್ಕೆ ಕಾರಣವನ್ನು ಹೇಳುತ್ತಾರೆ—

ಮೂ ॥ ಬಲೇರ್ಯದಾ ವಿಷ್ಣುರವಾಪ ಲೋಕಾನ್
ತ್ರಿಭಿಃ ಕ್ರಮೈರ್ನಂದಿರವಂ ಪ್ರಕುರ್ವತಾ ॥
ತದಾ ಮಯಾ ಭ್ರಾಂತಮಿದಂ ಜಗತ್ತ್ರಯಂ
ಸವೇದನಂ ಜಾನು ಮಮಾಸ ಮೇರುತಃ ॥ ೫೪ ॥

ಅ ॥ ವಾಮನ ರೂಪಿಯಾದ ಶ್ರೀಹರಿಯು ಪ್ರಹ್ಲಾದನ ಪೌತ್ರನಾದ ಬಲಿಚಕ್ರವರ್ತಿಯ ದೆಶೆಯಿಂದ ಭೂರಾದಿಲೋಕಗಳನ್ನು ಮೂರು ಪಾದವಿಕ್ಷೇಪಗಳಿಂದ ಯಾವಾಗ ಹೊಂದಿರುವನೋ ಆಗ ಸಂತೋಷ ಧ್ವನಿಯನ್ನು (ಅಂದರೆ ನಂದಃ=ಆನಂದಃ ಮೂಲಕಾರಣಂ ಅಸ್ತೀತಿ ಸಂದೀ ಸಂದೀಚಾಸೌ ರವಶ್ಚ ಎಂದು ವ್ಯುತ್ಪತ್ತಿಯು. ಆನಂದ ಪಾರವಶ್ಯದಿಂದ ಮಾಡಲ್ಪಟ್ಟ ದಿಕ್ಕಿನಲ್ಲಿ ಆ ಘೋಷಣವನ್ನು) ಮಾಡತಕ್ಕ ನನ್ನಿಂದ ಈ ಮೂರು ಲೋಕವು ಅತ್ತಿತ್ತ ಪರಿಭ್ರಮಿಸಲ್ಪಟ್ಟಿತು. ಮೇರು ಪರ್ವತ ಘಾತದೆಶೆಯಿಂದ ನನ್ನ ಮೊಣಕಾಲು ವ್ಯಥಾಸಹಿತವಾದುದು ಆಯಿತು ॥ ೫೪ ॥

ಮೂ ॥ ಅತೋ ಜವೋ ಮೇ ನ ಹಿ ಪೂರ್ವಸಮ್ಮಿತಃ
ಪುರಾ ತ್ವಹಂ ಷಣ್ಣವತಿಪ್ಲವೋಽಸ್ಮಿ ॥
ತತಃ ಕುಮಾರೋಽಂಗದ ಆಹ ಚಾಸ್ಮಾ-
ಚ್ಛತಂ ಪ್ಲವೇಯಂ ನ ತತೋಽಭಿಜಾನೇ ॥ ೫೫ ॥

ಅ ॥ ಆ ಕಾರಣದೆಶೆಯಿಂದ ಮೊದಲಿನ ವೇಗಕ್ಕೆ ಸದೃಶವಾದ ವೇಗವು ಇಲ್ಲವಷ್ಟೆ! ನಾನು ಮೊದಲು ಆದರೂ ತೊಂಭತ್ತಾರು ಯೋಜನಪರ್ಯಂತ ಹಾರತಕ್ಕವನು ಆಗಿರುತ್ತೇನೆ. ಜಾಂಬವತನ ಮೇಲೆ ಯುವರಾಜನಾದ ಅಂಗದನು ಹೇಳಿದನು ನಾನು ಮಹೇಂದ್ರಪರ್ವತ ದೆಶೆಯಿಂದ ನೂರು ಯೋಜನಪರ್ಯಂತ ಹಾರುವೆನು. ಮೇಲೆ ಏನುಮಾಡಲಿಕ್ಕೂ ನಾನು ತಿಳಿಯಲಾರೆನು. (ಅಂದರೆ ರಾವಣನ ದುರ್ಗವನ್ನು ಪ್ರವೇಶಮಾಡಲಿಕ್ಕೂ, ದೈತ್ಯರಿಂದ ಕೂಡಿ ಯುದ್ಧ ಮಾಡಲಿಕ್ಕೂ ಸೀತೆಯ ಅನ್ವೇಷಣಾದಿಗಳನ್ನು ಮಾಡಿ ವಾಪಸು ಬರಲಿಕ್ಕೆ ಶಕ್ತಿಯು ಬರುವುದೋ ಇಲ್ಲವೋ ಎಂದು ತಿಳಿಯಲಾರೆನು) ॥ ೫೫ ॥

ಮೂ ॥ ಆಪೂರಿತೇ ತೈಃ ಸಕಲೈಃ ಶತಸ್ಯ
ಗಮಾಗಮೇ ಶತ್ರುಬಲಂ ಚ ವೀಕ್ಷ್ಯ ॥
ಸುದುರ್ಗಮತ್ವಂ ಚ ನಿಶಾಚರೇಶ-
ಪುರ್ಯಾಃ ಸ ಧಾತುಃ ಸುತ ಆಬಭಾಷೇ ॥ ೫೬ ॥

ಅ ॥ ಎಲ್ಲಾ ಆ ಕಪಿಗಳಿಂದ ಶತಯೋಜನಾತ್ಮಕವಾದ ಮಾರ್ಗದ ಗಮನಾಗಮನವು ಸ್ವಲ್ಪ ಪೂರ್ಣವಾಗುತ್ತಿರಲು (ಅಂದರೆ ಅಂಗದನು ನೂರು ಯೋಜನಗಳನ್ನು ಪೂರ್ಣೀಕರಿಸಿದುದರಿಂದಲೂ ಬೇರೆ ಕಪಿಗಳು ಅದಕ್ಕಿಂತ ಕಡಿಮೆ ಪೂರ್ಣೀಕರಿಸಿದುದರಿಂದಲೂ ಗಮನಾಗಮನಗಳು ಸ್ವಲ್ಪ ಪೂರಿತಗಳಾದುವು.) ಬ್ರಹ್ಮನ ಮಗನಾದ ಜಾಂಬವಂತನು ರಾವಣನ ಬಲವನ್ನೂ, ಮತ್ತು ಗಮನಾಗಮನಗಳಿಗೆ ಶತ್ರುವಿನಿಂದ ಮಾರ್ಗದಲ್ಲಿ ಉಂಟಾಗತಕ್ಕ ವಿಘ್ನವನ್ನೂ ನೋಡಿ ರಾತ್ರಿಯಲ್ಲಿ ಸಂಚಾರಮಾಡತಕ್ಕ ರಾಕ್ಷಸರಿಗೆ ಸ್ವಾಮಿಯಾದ ರಾವಣನ ಪಟ್ಟಣಕ್ಕೆ ಅತ್ಯಂತ ಅಗಮ್ಯತ್ವವನ್ನೂ ನೋಡಿ ಹೇಳಿದನು. ॥ ೫೬ ॥

ಮೂ ॥ ಅಯಂ ಹಿ ಗೃಧ್ರಃ ಶತಯೋಜನಂ ಗಿರಿಂ
ತ್ರಿಕೂಟನಾಮಾಹೇತ ಉತಾತ್ರ ವಿಘ್ನಾಃ ॥
ಭವೇಯುರನ್ಯೇಽಪಿ ತತೋ ಹನೂಮಾ-
ನೇಕಃ ಸಮರ್ಥೋ ನ ಪರೋಽಸ್ತಿ ಕಶ್ಚಿತ್ ॥ ೫೭ ॥

ಅ ॥ ಈ ಸಂಪಾತಿನಾಮಕ ಗೃಧ್ರವು ನೂರುಯೋಜನ ವ್ಯವಧಾನದಲ್ಲಿರತಕ್ಕ, ಪಟ್ಟಣಕ್ಕೆ ಸುತ್ತಾಗಿರತಕ್ಕ ತ್ರಿಕೂಟನಾಮಕ ಪರ್ವತವನ್ನು ಹೇಳುತ್ತದೆ. ಮತ್ತು ವಿಷಯದಲ್ಲಿ ಬೇರೆ ವಿಘ್ನಗಳೂ ಉಂಟಾಗುವವು. ಆದಕಾರಣ ಹನುಮಂತನೊಬ್ಬನೇ ರ್ಥನು. ಅಲ್ಲದೆ ಬೇರೆ ಯಾವನೊಬ್ಬನೂ ಇಲ್ಲ. ॥ ೫೭ ॥

ಮೂ ॥ ಉಕ್ತ್ವಾಥ (ಸ) ಇತ್ಥಂ ಪುನರಾಹ ಸೂನುಂ
ಪ್ರಾಣಸ್ಯ ನಿಃಸೀಮಬಲಂ ಪ್ರಕಾಶ (ಸ) ಯನ್ ॥
ತ್ವಮೇಕ ಏವಾತ್ರ ಪರಂ ಸಮರ್ಥಃ
ಕುರುಷ್ವ ಚೈತತ್ಪರಿಪಾಹಿ ವಾನರಾನ್ ॥ ೫೮ ॥

ಅ ॥ ಆ ಜಾಂಬವಂತನು ಪೂರ್ವೋಕ್ತ ಪ್ರಕಾರ ಹೇಳಿ ಪುನಃ ನಿರವಧಿ ಸಾಮರ್ಥ್ಯವುಳ್ಳ ವಾಯುಪುತ್ರನಾದ ಹನುಮಂತನನ್ನು ಯಶಸ್ಸಿನಿಂದ ಪೂರ್ಣಗೊಳಿಸುವ ಸೀತಾನ್ವೇಷಣರೂಪವಾದ ಕಾರ್ಯದಲ್ಲಿ ಮುಖ್ಯವಾಗಿ ಸಮರ್ಥನಾದವನು ನೀನು ಒ ಈ ಕಾರ್ಯವನ್ನು ಮಾಡು; ಕಪಿಗಳನ್ನು ರಕ್ಷಿಸು. ॥ ೫೮ ॥

ಮೂ ॥ ಇತೀರಿತೋಽಸೌ ಹನುಮಾನ್ನಿಜೇಪ್ಸಿತಂ
ತೇಷಾಮಶಕ್ತಿಂ ಪ್ರಕಟಾಂ ವಿಧಾಯ ॥
ಅವರ್ಧತಾಶು ಪ್ರವಿಚಿಂತ್ಯ ರಾಮಂ
ಸುಪೂರ್ಣಶಕ್ತಿಂ ಚರಿತೋಽಸ್ಯ ದಾಜ್ಞಾಂ ॥ ೫೯ ॥

ಅ ॥ ಈ ಪ್ರಕಾರ ತಮ್ಮ ಅಭಿಲಷಿತವಾದುದನ್ನು ಮಾಡು ಎಂದು ಹೇಳಿಸಿಕೊಳ್ಳ ಈ ಹನುಮಂತನು ಆ ಕಪಿಗಳಿಗೆ ಅಶಕ್ತಿಯನ್ನು ಸ್ಪಷ್ಟವಾಗಿ ತೋರಿಸಿ ಅತೀ ಪರಿಪೂರ್ಣಶಕ್ತಿ ಶ್ರೀರಾಮನನ್ನು ಧ್ಯಾನಮಾಡಿ ಶ್ರೀರಾಮನ ಆಜ್ಞೆಯನು ನೆರವೇರಿಸುವುದಕ್ಕಾಗಿ ಬೆಳೆದನು ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾ (ಧ) ಚಾರ್ಯವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ಶ್ರೀ ರಾಮಚರಿತೇ
ಸಮುದ್ರತರಣ ನಿಶ್ಚಯೋನಾಮ ಷಷ್ಠೋಽಧ್ಯಾಯಃ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀ ರಾಮಚರಿತ್ರೆಯಲ್ಲಿ
ಸಮುದ್ರತರಣನಿಶ್ಚಯವೆನ್ನುವ ಆರನೇ ಅಧ್ಯಾಯವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

---

# ಏಳನೇ ಅಧ್ಯಾಯವು.

ಮೂ । ಓಂ ರಾಮಾಯಶಾಶ್ವತಸುವಿಸ್ತೃತಷಡ್ಗುಣಾಯ
ಸರ್ವೇಶ್ವರಾಯ ಬಲವೀರ್ಯ (ಸುಖಸಾರ) ಮಹಾರ್ಣವಾಯ ||
ನತ್ವಾ ಲಿಲಂಘಯಿಷುರರ್ಣವಮುತ್ಪಪಾತ
ನಿಷ್ಪೀಡ್ಯ ತಂ ಗಿರಿವರಂ ಪವನಸ್ಯ ಸೂನುಃ ॥ ೧ ||

ಅ ॥ ಸಮುದ್ರವನ್ನು ದಾಟಲಿಕ್ಕೆ ಇಚ್ಛಿಸಿದ ವಾಯುಪುತ್ರನಾದ ಹನುಮಂತನು ಶಶ್ವದೇಶಪ್ರಕಾರಗಳಾದ ಸರ್ವ ದೇಶಕಾಲಗಳಲ್ಲಿಯೂ ಪರಿಚ್ಛೇದಶೂನ್ಯಗಳಾದ ಐಶ್ವರ್ಯ ಮೊದಲಾದ ಆರು ಗುಣಗಳುಳ್ಳ, ಸರ್ವರಿಗೂ ನಿಯಾಮಕನಾದ ಬಲವೀರ್ಯಗಳಿಂದ ಮಹ ಸಮುದ್ರದಂತಿರುವ, ಅಥವಾ ಶ್ರೇಷ್ಠ ಸುಖದಿಂದ ಸಮುದ್ರದಂತೆ ಇರುವ ಶ್ರೀ ರಾಮನಿಗೋಸ್ಕರ ನಮಸ್ಕರಿಸಿ ಆ ಪರ್ವತಶ್ರೇಷ್ಠವಾದ ಮಾಹೇಂದ್ರವನ್ನು (ಕಾಲುಗಳಿಂದ) ಚೆನ್ನಾಗಿ ಪೀಡಿಸಿ (ಒದ್ದಿ ಕೊಂಡು) ಹಾರಿದನು ॥೧॥

ಮೂ ॥ ಚುಕ್ಷೋಭ ವಾರಿಧಿರನು ಪ್ರಯಯೌ ಚ ಶೀಘ್ರಂ
ಯಾದೋಗಣೈಃ ಸಹ ತದೀಯಬಲಾಭಿಕೃಷ್ಟಃ ॥
ವೃಕ್ಷಾಶ್ಚ ಪರ್ವತಗತಾಃ ಪವನೇನ ಪೂರ್ವಂ
ಕ್ಷಿಪ್ತೋಽರ್ಣವೇ ಗಿರಿರುದಾಗಮದಸ್ಯ ಹೇತೋಃ ॥೨॥

ಅ ॥ಹನುಮತ್ಸಂಬಂಧಿಯಾದ ಬಲದಿಂದ ಸೆಳೆಯಲ್ಪಟ್ಟ ಸಮುದ್ರವು ಕ್ಷೋಭವನ್ನು ಹೊಂದಿತು. (ಹನುಮಂತನು ದಾಟಿದ ವೇಗದಿಂದ ಸಮುದ್ರಜಲವು ಅಸ್ತವ್ಯಸ್ತ ಆಯಿತು.) ಜಲಚರಸಮೂಹಗಳಿಂದ ಕೂಡಿಕೊಂಡು ಹನುಮಂತನನ್ನು ಅನುಸರಿಸಿಯೇ ಶೀಘ್ರದಲ್ಲಿ ಹೋಯಿತು. ಮಾಹೇಂದ್ರಪರ್ವತದಲ್ಲಿರತಕ್ಕ ಮಾರಗಳೂ ಕೂಡ ಅನುಸರಿಸಿ ಹೋದವು. (ಮತ್ತು ಹನುಮಂತನ ಪ್ರಭಾವವನ್ನು ವರ್ಣಿಸುತ್ತಾರೆ.) ಮೊದಲು ಹನುಮಂತನಿಂದ ಸಮುದ್ರದಲ್ಲಿ ಬಿಸಾಡಲ್ಪಟ್ಟ ಮೈನಾಕ ಪರ್ವತವು ಹನುಮಂತನ ಶ್ರಮ ಪರಿಹಾರಕ್ಕಾಗಿ ಅಥವಾ ಹನುಮಂತನಿಗಾಗಿ ನೀರಿನಿಂದ ಮೇಲಕ್ಕೆ ಬಂತು ॥೨॥

ಹಾಗಾದರೆ ಪರ್ವತವನ್ನು ಏಕೆ ಸಮುದ್ರಕ್ಕೆ ಬಿಸಾಡಿದ್ದು? ಕ್ಷಿಪ್ತವಾದ ಪರ್ವತವು ಹನುಮಂತನ ವಿಶ್ರಾಂತಿಗಾಗಿ ಯಾವಕಾರಣದಿಂದ ಮೇಲಕ್ಕೆ ಬಂದಿತು ಎಂದರೆ—

ಮೂ । ಶಾ(ಸ್ಯಾ)ಲೋ ಹರಸ್ಯ ಗಿರಿಪಕ್ಷವಿನಾಶಕಾಲೇ
ಕ್ಷಿಪ್ತೋಽರ್ಣವೇ ಸ ಮರುತೋರ್ವರಿತಾತ್ಮಪಕ್ಷಃ||
ಹೈಮೋ ಗಿರಿಃ ಪವನಜಸ್ಯ ತು ವಿಶ್ರಮಾರ್ಥ-
ಮುದ್ಭಿದ್ಯ ವಾರಿಧಿಮವರ್ಧದನೇಕಸಾನುಃ ॥೩॥

ಅ ॥ ರುದ್ರನ ಹೆಂಡತಿಯ ಸಹೋದರವಾದುದು, ಇಂದ್ರನು ಮಾಡಿದ ಪರ್ವತದ ರೆಕ್ಕೆಯನ್ನು ಛೇದಿಸುವ ಕಾಲದಲ್ಲಿ ವಾಯುವಿನಿಂದ ಸಮುದ್ರದಲ್ಲಿ ಬಿಸಾಡಲ್ಪಟ್ಟದ್ದು, ರಕ್ಷಿಸಿಕೊಳ್ಳಲ್ಪಟ್ಟ ತನ್ನ ರೆಕ್ಕೆಗಳುಳ್ಳದ್ದು, ಅನೇಕ ಶೃಂಗಗಳುಳ್ಳದ್ದು, ಇಂತಹ ಹಿಮಾಚಲದ ಪುತ್ರನಾದ ಅಥವಾ ಸುವರ್ಣಮಯವಾದ ಆ ಮೈನಾಕ ಪರ್ವತವು ವಾಯುಪುತ್ರನಾದ ಹನುಮಂತನ ವಿಶ್ರಾಂತಿಗಾಗಿ ಸಮುದ್ರವನ್ನು ಛೇದಿಸಿ ಅಭಿವೃದ್ಧವಾಯಿತು. (ಅಂದರೆ ವಾಯುವಿನಿಂದ ರಕ್ಷಿಸಿಕೊಳ್ಳಲ್ಪಟ್ಟ ರೆಕ್ಕೆಗಳುಳ್ಳ ಮೈನಾಕಪರ್ವತವು ವಾಯುಪುತ್ರನಾದ ಹನುಮಂತನ ಉಪಕಾರಕ್ಕಾಗಿ ಬೆಳೆಯಿತು.) ॥ ೩ ॥

ಮೂ ॥ ನೈವಾತ್ರ ವಿಶ್ರಮ ಇಯೇಷ ನಿಜೇಚ್ಛಯಾಪಿ (ತನಿ) ಶ್ರಮೋಽಸೌ
ನಿಸ್ಸೀಮಪೌರುಷಬಲ (ಗುಣ) ಸ್ಯ ಕುತಃ ಶ್ರಮೋಽಸ್ಯ ॥
ಆಶ್ಲಿಷ್ಯ ಪರ್ವತವರಂ ಸ ದದರ್ಶ ಗಚ್ಛನ್
ದೇವೈಸ್ತು ನಾಗಜನನೀಂ ಪ್ರಹಿತಾ ವರೇಣ ॥ ೪ ॥

ಅ ॥ ವಿಶ್ರಮವಿಲ್ಲದಿರುವ ಈ ಹನುಮಂತನು ಈ ಮೈನಾಕಪರ್ವತದಲ್ಲಿ ವಿಶ್ರಾಂತಿಯನು ಇಚ್ಛಿಸಲೇ ಇಲ್ಲ ನಿರವಧಿಕವಾದ ಪರಾಕ್ರಮವೂ ಬಲವೂ ಇವುಗಳುಳ್ಳ ಈ ಹನುಮಂತನಿಗೆ ಶ್ರಮವು ಯಾವುದರಿಂದ? ಆ ಹನುಮಂತನು ಪರ್ವತಶ್ರೇಷ್ಠವಾದ ಮೈನಾಕಪರ್ವತವನ್ನು ಅಪ್ಪಿಕೊಂಡು ಹೋಗುತ್ತಾ ದೇವತೆಗಳಿಂದಲಾದರೂ ವರವನ್ನು ಕೊಟ್ಟು ಕಳುಹಿಸಿಕೊಡಲ್ಪಟ್ಟ ಕದ್ರೂದೇವಿಯನ್ನು ಕಂಡನು ॥ ೪ ॥

'ವರೇಣ' ಎಂದು ಹೇಳಿದ್ದನ್ನು ವಿವರಿಸುತ್ತಾರೆ

ಮೂ ॥ ಜಿಜ್ಞಾಸುಭಿರ್ನಿಜಬಲಂ ತವ ಭಕ್ಷ್ಯಮೇತು
ಯದ್ಯತ್ತ್ವಮಿಚ್ಛಸಿ ತದಿತ್ಯಮರೋದಿತಾಯಾಃ ॥
ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸೃತೋಽಸ್ಮಾ-
ದ್ದೇವಾನನಂದಯದುತ ಸ್ವೃತಮೇಷು ರಕ್ಷನ್ ॥ ೫ ॥

ಅ ॥ ತನ್ನ (ಹನುಮಂತನ) ಬಲವನ್ನು ತಿಳಿಯಲು ಇಚ್ಛಿಸುವ ದೇವತೆಗಳಿಂದ ಯಾವುದು ಯಾವುದನ್ನು (ಭಕ್ಷಿಸಲಿಕ್ಕೆ) ಇಚ್ಛಿಸುತ್ತೀಯೋ ಅದೆಲ್ಲವೂ ನಿನಗೆ ಆಸ್ಯವನ್ನು ಪ್ರವೇಶಮಾಡಲಿ. ಎಂದು (ವರವನ್ನು ಕೊಟ್ಟು ಕಳುಹಿಸಿಕೊಡಲ್ಪಟ್ಟ ಕದ್ರೂದೇವಿಯನ್ನು ಕಂಡನು.) ದರ್ಶನಾನಂತರದಲ್ಲಿ ಈ ದೇವತೆಗಳಲ್ಲಿ ಚೆನ್ನಾಗಿ ಸತ್ಯವನ್ನು ರಕ್ಷಿಸುತ್ತಾ ದೇವತೆಗಳಿಂದ ಕೊಡಲ್ಪಟ್ಟ ವರವುಳ್ಳ ಕದ್ರೂದೇವಿಯ ಆಸ್ಯವನ್ನು ಪ್ರವೇಶಮಾಡಿ ಈ ಆಸ್ಯದೆಶೆಯಿಂದ ಕ್ಷಣಮಾತ್ರದಿಂದಲೇ ಹೊರಗೆ ಹೊರಟವನಾಗಿ ದೇವತೆಗಳನ್ನು ಸಂತೋಷಪಡಿಸಿದನು ॥ ೫ ॥

ಮೂ ॥ ದೃಷ್ಟ್ವಾ ಸುರಪ್ರಣಯಿತಾಂ ಬಲಮಸ್ಯ ಚೋಗ್ರಂ
ದೇವಾಃ ಪ್ರತುಷ್ಟುವುರಮುಂ ಸುಮನೋಽಭಿವೃಷ್ಟ್ಯಾ ॥
ತೈರಾದೃತಃ ಪುನರಸೌ ವಿಯತೈವ ಗಚ್ಛನ್
ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಂ ॥ ೬ ॥

ಅ ॥ ದೇವತೆಗಳು ಈ ಹನುಮಂತನಿಗೆ ದೇವತೆಗಳಲ್ಲಿ ತಮ್ಮ ಮಾತನ್ನು ಸತ್ಯವನ್ನಾಗಿ ಮಾಡುವಿಕೆ ಎನ್ನುವ ಸ್ನೇಹವಿರುವಿಕೆಯನ್ನು ನೋಡಿ, ಈ ಹನುಮಂತನ ಕ್ರೂರವಾದ ಬಲವನ್ನೂ ನೋಡಿ ಪುಷ್ಪಗಳ ವೃಷ್ಟಿಯಿಂದ ಈ ಹನುಮಂತನನ್ನು ಸ್ತೋತ್ರಮಾಡಿದರು. ಪುನಃ ಆ ದೇವತೆಗಳಿಂದ ಪೂಜಿಸಿಕೊಳ್ಳಲ್ಪಟ್ಟ ಈ ಹನುಮಂತನು ಆಕಾಶದಿಂದಲೇ ಹೋದವನಾಗಿ ಸಿಂಹ್ಯಕ ಎಂದು ಹೆಸರುಳ್ಳ, ಛಾಯೆಯುಳ್ಳ ಪುರುಷನನ್ನು ಗ್ರಹಿಸತಕ್ಕವನನ್ನು ಕಂಡನು. (ಅಂತೂ ಛಾಯೆಯನ್ನು ಗ್ರಹಿಸತಕ್ಕ ಸಿಂಹ್ಯಕಾ ಎನ್ನುವ ರಾಕ್ಷಸಿಯನ್ನು ಕಂಡನು) ॥ ೬ ॥

ಮೂ ॥ ಲಂಕಾವನಾಯ ಸಕಲಸ್ಯ ಚ ನಿಗ್ರಹೇಽಸ್ಯಾಃ
ಸಾಮರ್ಥ್ಯಮಪ್ರತಿಹತಂ ಪ್ರದದೌ ವಿಧಾತಾ ॥
ಛಾಯಾಮವಾಕ್ಷಿಪದಸೌ ಪವನಾತ್ಮಜಸ್ಯ
ಸೋಽಸ್ಯಾಃ ಶರೀರಮನುವಿಶ್ಯ ಬಿಭೇದ ಶೀಘ್ರಂ ॥ ೭ ॥

ಅ ॥ ಲಂಕಾಪಟ್ಟಣವನ್ನು ರಕ್ಷಣೆಮಾಡುವುದಕ್ಕಾಗಿ ಎಲ್ಲಾ ವೀರರ ಸಮೂಹವನ್ನು ನಿರೋಧವಿಷಯದಲ್ಲಿ ಪ್ರತಿಹತಿಯಿಲ್ಲದಿರುವ (ಅಂದರೆ ಅವಿನಾಶ್ಯವಾದ) ಸಾಮರ್ಥ್ಯವನ್ನು ಈ ಸಿಂಹ್ಯಕಾ ಎನ್ನುವ ರಾಕ್ಷಸಿಗೆ ಬ್ರಹ್ಮನು ಕೊಟ್ಟಿರುವನು. ಈ ಸಿಂಹ್ಯಕಾ ರಾಕ್ಷಸಿಯು ವಾಯುಪುತ್ರನಾದ ಹನುಮಂತನ ನೆರಳನ್ನು ಸೆಳೆದಳು. ಆ ಹನುಮಂತನು ಈ ರಾಕ್ಷಸಿಯ ಶರೀರವನ್ನು ಪ್ರವೇಶಮಾಡಿ ಶೀಘ್ರದಲ್ಲಿ ಸೀಳಿದನು. ॥ ೭ ॥

ಮೂ ॥ ನಿಃಸೀಮಮಾತ್ಮಬಲಮಿತ್ಯನುದರ್ಶಯಾನೋ
ಹತ್ವೈವ ತಾಮಪಿ ವಿಧಾತೃವರಾಭಿಗುಪ್ತಾಂ ॥
ಲಂಬೇ ಸ ಲಂಬಶಿಖರೇ ನಿಪಪಾತ ಲಂಕಾ
ಪ್ರಾಕಾರರೂಪಕಗಿರಾವಥ ಸಂಚುಕೋಚ ॥ ೮ ॥

ಅ ॥ ತನ್ನ ಬಲವನ್ನು ಅಪರಿಮಿತವನ್ನಾಗಿ ತೋರಿಸುತ್ತಾ ಬ್ರಹ್ಮನ ವರದಿಂದ ರಕ್ಷಿಸಿಕೊಳ್ಳಲ್ಪಟ್ಟ ಆ ಸಿಂಹಿಕಾ ರಾಕ್ಷಸಿಯನ್ನು ಸಂಹಾರಮಾಡಿಯೇ ಜೋತಾಡತಕ್ಕ ಶಿಖರವುಳ್ಳ, ಲಂಕಾಪಟ್ಟಣಕ್ಕೆ ಪ್ರಾಕಾರರೂಪವಾದ ಗರಿಯಾದ ಲಂಬನಾಮಕವಾದ ಪ್ರದೇಶದಲ್ಲಿ ಅಥವಾ ಲಂಬನಾಮಕ ಗಿರಿಯಲ್ಲಿ ಹಾರಿದನು. (ಅಂದರೆ – ಮಾಹೇಂದ್ರ ಪರ್ವತದೆಶೆಯಿಂದ ತ್ರಿಕೂಟ ಪರ್ವತಕ್ಕೆ ಹಾರಿದನು.) ಆ ಮೇಲೆ ಸೂಕ್ಷ್ಮರೂಪವುಳ್ಳವನಾದನು. ಅಂದರೆ ಅಭಿವೃದ್ಧವಾದ ರೂಪವನ್ನು ಸಂಕೋಚಮಾಡಿಕೊಂಡನು )

ವಿಶೇಷಾಂಶ— ಯದ್ಯಪಿ ಹನುಮಂತ ಛಾಯೆಯನ್ನು ಗ್ರಹಣ ಮಾಡಿದಾಗ ಹನುಮಂತನು ಬರುತ್ತಾನೆ. ಆದಾಗ್ಯೂ ಬ್ರಹ್ಮನ ವರವನ್ನು ರಕ್ಷಿಸುವುದಕ್ಕಾಗಿಯೇ ಬಂದದ್ದು ॥೮॥

ಮೂ ॥ ಭೂತ್ವಾ ಬಿಡಾಲಸಮಿತೋ ನಿಶಿ ತಾಂ ಪುರೀಂ ಚ
ಪ್ರಾಪ್ಸ್ಯನ್ನದರ್ಶ ನಿಜರೂರವತೀಂ ಸ ಲಂಕಾಂ ॥
ರುದ್ಧೋಽನಯಾಽಥ ವಿಜಿತ್ಯ ಚ ತಾಂ ಸ್ವಮುಷ್ಟಿ
ಪಿಷ್ಟಾಂ ತಯಾನುಮತ ಏವ ವಿವೇಶ ಲಂಕಾಂ ॥ ೯ ॥

ಅ ॥ ಪರಿಮಾಣದಿಂದ ಆ ಹನುಮಂತನು ಮಾರ್ಜಾರಕ್ಕೆ ಸದೃಶನು ಆಗಿ ರಾತ್ರಿಕಾಲದಲ್ಲಿ ಆ ಲಂಕಾಪಟ್ಟಣವನ್ನು ಹೊಂದಲಿಚ್ಛಿಸಿದವನಾಗಿ ತನ್ನ ರೂಪವುಳ್ಳ, ಲಂಕಾಪಟ್ಟಣಕ್ಕೆ ಅಭಿಮಾನಿಯಾದ ದುರ್ಗೆಯ ಪರಿವಾರಭೂತಗಳಾದ ದೇವತೆಯನ್ನು ನೋಡಿದನು. ಈ ಲಂಕೆಯಿಂದ ಹೋಗಬೇಡವೆಂದು ತಡೆಯಲ್ಪಟ್ಟವನಾಗಿ ಆ ಮೇಲೆ ತನ್ನ ಮುಷ್ಟಿಗಳಿಂದ ಚೂರ್ಣೀಕರಿಸಲ್ಪಟ್ಟ ಲಂಕೆಯನ್ನು ಶೀಘ್ರದಲ್ಲಿ ಗೆದ್ದು, ಆ ಲಂಕೆಯಿಂದ ಸಮ್ಮತನಾಗಿಯೇ ಲಂಕಾಪಟ್ಟಣವನ್ನು ಪ್ರವೇಶಮಾಡಿದನು ॥೯॥

ಮೂ ॥ ಮಾರ್ಗಮಾಣೋ ಬಹಿಶ್ಚಾಂತಃ ಸೋಽಶೋಕವನಿಕಾತಲೇ॥
ದದರ್ಶ ಶಿಂಶುಪಾವೃಕ್ಷಮೂಲಸ್ಥಿತರಮಾಕೃತಿಂ ॥೧೦॥

ಅ ॥ ಲಂಕಾಪಟ್ಟಣದ ಒಳಗೂ ಹೊರಗೂ (ಉಪವನಾದಿಗಳಲ್ಲಿ) ಆ ಹನುಮಂತನು (ಸೀತೆಯ ಪ್ರತಿಕೃತಿಯನ್ನು) ಹುಡುಕುವವನಾಗಿ ಅಶೋಕವೃಕ್ಷಗಳ ವನದ ಸ್ಥಳದಲ್ಲಿ ಶಿಂಶುಪಾವೃಕ್ಷದ (ಕಂಟಕಯುಕ್ತವಾದ ಅಶೋಕವಿಶೇಷದ) ಬುಡದಲ್ಲಿರತಕ್ಕ (ಅಂದರೆ ಕೆಳಗೆ ಕುಳಿತಿರತಕ್ಕ) ಸೀತೆಯ ಪ್ರತಿಮೆಯನ್ನು ಕಂಡನು ॥೧೦॥

ಮೂ ॥ ನರಲೋಕವಿಡಂಬಸ್ಯ ಜಾನನ್ರಾಮಸ್ಯ ಹೃದ್ಗತಂ॥
ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಃ ॥೧೧॥
ತಾದೃಕ್ಚೇಷ್ಟಾಸಮೇತಾಯಾಅಂಗುಲೀಯಮದಾತ್ತತಃ ॥
ಸೀತಾಯಾ ಯಾನಿ ಚೈವಾಸನ್ನಾಕೃತೇಸ್ತಾನಿ ಸರ್ವಶಃ ॥
ಭೂಷಣಾನಿ ದ್ವಿಧಾ ಭೂತ್ವಾ ತಾನ್ಯೇವಾಸಂಸ್ತಥೈವ ಚ ॥೧೨॥
ಅಥ ಚೂಡಾಮಣಿಂ ದಿವ್ಯಂ ದಾತುಂ ರಾಮಾಯ ಸಾ ದದೌ ॥೧೩॥

ಅ ॥ ಮನುಷ್ಯಲೋಕದ ಅನುಕರಣವುಳ್ಳ, ರಾಮನ ಹೃದಯದಲ್ಲಿರತಕ್ಕ ಅಭಿಪ್ರಾಯವನ್ನು ತಿಳಿದಿರುವ (ಅಂದರೆ ಸರ್ವಜ್ಞನಾದ ಪ್ರಯುಕ್ತವೂ ಸಂಪಾತಿಯ ವಚನದಿಂದಲೂ ಉಪವನದಲ್ಲಿರುತ್ತಾಳೆಂದು ನೀನು ತಿಳಿದಾಗ್ಯೂ, ಬೇರೆ ಮನುಷ್ಯರಂತೆ ಲಂಕೆಯ ಒಳಗೂ ಹೊರಗೂ ಸೀತೆಯನ್ನು ಹುಡುಕಬೇಕು. ಯಾವ ಅಪೇಕ್ಷೆಯಿಲ್ಲದವನಾದಾಗ್ಯೂ, ನಾನು ಹೇಳಿದ ಪ್ರಿಯ ವಚನವನ್ನು ಸೀತಾದೇವಿಯ ಹತ್ತಿರ ಹೇಳಬೇಕು. ಮುದ್ರಿಕೆಯನ್ನು ಕೊಡಬೇಕು. ಸೀತೆಯು ಕೊಟ್ಟ ಚೂಡಾಮಣಿಯನ್ನು ತರಬೇಕು. ಇದು ಮೊದಲಾದುದು ಹೃದಯದಲ್ಲಿರತಕ್ಕ ಅಭಿಪ್ರಾಯವನ್ನು ತಿಳಿದಿರುವ) ಹನುಮಂತನು ರಾಮನ ಅಸುರಮೋಹನರೂಪವಾದ ಚೇಷ್ಟೆಯನ್ನು ಅನುಸರಿಸಿ ಅನ್ವೇಷಣಾದಿ ಚೇಷ್ಟೆಗಳನ್ನೂ ಇಷ್ಟವಾದ ವಿಚಾರವನ್ನೂ ಮಾಡಿ ಆ ಮೇಲೆ ರಾಮಚೇಷ್ಟಾಸದೃಶ ಚೇಷ್ಟೆಗಳಿಂದ ಯುಕ್ತಳಾದ ಸೀತಾದೇವಿಯಗೋಸ್ಕರ ಮುದ್ರಾಂಗುರವನ್ನು ಕೊಟ್ಟನು. (ಹಾಗಾದರೆ ರಾಮನಿಗೆ ವಿಶ್ವಾಸ ಹುಟ್ಟುವುದಕ್ಕಾಗಿ ಸೀತಾದೇವಿಯು ಆ ಕೃತಿಯು ಚೂಡಾಮಣಿಯನ್ನು ಕೊಟ್ಟಿತು. ಎಂದು ಮುಂದಕ್ಕೆ ಹೇಳುವರು. ಹಾಗಾದರೆ ಆ ಕೃತಿಗೆ ಸೀತಾದೇವಿಯ ಆಭರಣಪ್ರಾಪ್ತಿಯು ಹೇಗೆ ಎಂದರೆ–) ಮೂಲರೂಪಳಾದ ಸೀತಾದೇವಿಗೆ ಯಾವ ಆಭರಣಗಳು ಇರುತ್ತಿದ್ದವೋ, ಅವುಗಳೆಲ್ಲವೂ ಆಕೃತಿಗೂ ಇದ್ದವು. (ಮೂಲರೂಪ ಸೀತೆಗೆ ಇದ್ದವುಗಳು ಆಕೃತಿಗೂ ಹೇಗೆ ಆದವು ಎಂದರೆ) ಮೂಲರೂಪಳಾದ ಸೀತೆಯ ಆಭರಣಗಳೇ (ಸೀತಾದೇವಿಯ

ಸಾಮರ್ಥ್ಯದಿಂದ) ಎರಡು ಪ್ರಕಾರವಾಗಿ ಮೂಲರೂಪದ ಆಭರಣದಂತೆಯೇ ಪ್ರತಿರೂಪದ ಆಭರಣಕ್ಕಿಂತ ಸ್ವಲ್ಪವೂ ಕೂಡ ವೈಲಕ್ಷಣ್ಯವಿಲ್ಲದೆ ಆದವು. ಅನಂತರ ಆ ಸೀತಾದೇವಿಯು ದಿವ್ಯವಾದ ಶಿರೋರತ್ನವನ್ನು ರಾಮನಿಗೋಸ್ಕರ ಕೊಡುವುದಕ್ಕಾಗಿ ಕೊಟ್ಟಳು ॥೧೧-೧೨॥೧೩॥

ಮೂ ॥ ಯದ್ಯಪ್ಯೇತನ್ನ ಪಶ್ಯಂತಿ ನಿಶಾಚರಗಣಾಸ್ತು ತೇ ॥
ದ್ಯುಲೋಕಚಾರಿಣಃ ಸರ್ವೇ(ರ್ವಂ) ಪಶ್ಯಂತ್ಯೃಷಯ ಏವ ಚ ॥೧೪॥
ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯ ಚ ।
ಪಶ್ಯತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋ ಭವೇತ್ ॥೧೫॥

ಅ ॥ ಯದ್ಯಪಿ ಹನುಮಂತನು ಪ್ರಿಯವಚನಾದಿಗಳನ್ನು, ಸೀತಾಪ್ರಲಾಪಾದಿಗಳನ್ನು ಲಂಕೆಯಲ್ಲಿ ಹುಟ್ಟಿದ ಆ ರಾತ್ರಿ ಸಂಚಾರಕರಾದ ರಾಕ್ಷಸರ ಸಮೂಹಗಳಾದರೂ ಮದ್ಯ, ಆಮಿಷ ಭಕ್ಷಣಾದಿಗಳಿಂದ, ಸುಪ್ರತ್ಯಾಖ್ಯ ವಿಶೇಷದಿಂದ (ಅಂದರೆ ಮದ್ಯ ಮೊದಲಾದವುಗಳನ್ನು ಚೆನ್ನಾಗಿ ಕುಡಿದು ನಿದ್ರೆಪಟ್ಟವರಾದುದರಿಂದ) ನೋಡುವುದಿಲ್ಲ. ಆದಾಗ್ಯೂ ಸ್ವರ್ಗಲೋಕದಲ್ಲಿ ಸಂಚರಿಸ ತಕ್ಕ ಎಲ್ಲಾ ದೇವತೆಗಳೂ ಋಷಿಗಳೂ ಕೂಡ (ಅವರಿಗೆ ನಿದ್ರೆಯಿಲ್ಲದಿರುವುದರಿಂದ) ಎಲ್ಲವನ್ನೂ ನೋಡುತ್ತಾರೆ. (ಕಲಿಯೇ ಮೊದಲಾದ ದೈತ್ಯರೂ ಕೂಡ ಪಾಪಾದಿಗಳಿಗೆ ಪ್ರೇರಕವಾಗಿರುವುದ ರಿಂದ ನಿದ್ರೆಯಿಲ್ಲದಿದ್ದವರಾಗಿಯೇ ಎಲ್ಲಾ ಕಡೆಗಳಲ್ಲಿಯೂ ಇರುತ್ತಾರೆ. ಅವರೂ ಕೂಡ ನೋಡಿ ಕೊಂಡೇ ಇರುತ್ತಾರೆ. ಅವರಲ್ಲಿ) ದೇವಷ್ಯಾದಿಗಳಿಗೆ (ನಮ್ಮ ಅನುಕರಣಮಾತ್ರವನ್ನು ಮಾಡು ತ್ತಾನೆ. ಅಜ್ಞಾನಾದಿಗಳಿಂದ ಅಲ್ಲ. ಎಂದು) ವಿಡಂಬನ ವಿಷಯಕವಾದ ತತ್ವಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೇ (ವಂಚಿಸುವುದಕ್ಕಾಗಿ ಅಲ್ಲವೇ ಅಲ್ಲ). ನೋಡತಕ್ಕ ಕಲಿಯೇ ಪ್ರಧಾನ ನಾಗಿವುಳ್ಳ ದೈತ್ಯರಿಗೆ ಮಿಥ್ಯಾಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೇ (ಅಂದರೆ ೧ ಶ್ರೀ ರಾಮನು ಸೀತೆಯನ್ನು ನೋಡದೆ ಇದ್ದವನಾಗಿ ಒಳಗೂ ಹೊರಗೂ ಹುಡುಕುತ್ತಾನೆ. ೨ ಈ ರಾಮ ದೂತನು ಕಪಟಿಯೋ, ದೈತ್ಯನೋ ಎಂದು ಸೀತೆಯ ಸಂಶಯವನ್ನು ಪರಿಹರಿಸುವುದಕ್ಕಾಗಿ ಮುದ್ರಾಂಗುರನ್ನು ಕೊಡುತ್ತಾನೆ. ೩ ಸೀತೆಯನ್ನು ಕಂಡು ಹೇಳುತ್ತಾನೋ, ಸುಮ್ಮಗೆ ಹೇಳುತ್ತಾನೋ ಎಂದು ರಾಮನ ಮನಸ್ಸಿನಲ್ಲಿರತಕ್ಕ ಸಂಶಯವನ್ನು ಪರಿಹರಿಸುವುದಕ್ಕಾಗಿ ಸೀತಾದೇವಿಯು ತನ್ನ ಚೂಡಾಮಣಿಯನ್ನು ಕೊಟ್ಟಳು. ೪ ಶ್ರೀ ರಾಮನ ವಿಯೋಗದಿಂದ ಸೀತಾದೇವಿಯು ಮರುಗುತ್ತಾಳೆ. ಇದು ಮೊದಲಾದ ಮಿಥ್ಯಾಜ್ಞಾನವನ್ನು ಹುಟ್ಟಿಸುವು ದಕ್ಕಾಗಿಯೇ; ದೇವತೆಗಳಂತೆ ತತ್ವಜ್ಞಾನವನ್ನು ಹುಟ್ಟಿಸುವುದಕ್ಕಾಗಿ ಅಲ್ಲ). ಈ ವಿಡಂಬನವು ಮಾಡಲ್ಪಟ್ಟಿತು ॥೧೪॥೧೫॥

ಮೂ ॥ ಕೃತಾ ಕಾರ್ಯಮಿದಂ ಸರ್ವಂ ವಿಶಂಕಃ ಪವನಾತ್ಮಜಃ ॥
ಆತ್ಮಾವಿಷ್ಕರಣೇ ಚಿತ್ತಂ ಚಕ್ರೇ ಮತಿಮತಾಂ ವರಃ ॥೧೬॥

ಅ ॥ ಬುದ್ಧಿಯುಳ್ಳವರ ಮಧ್ಯದಲ್ಲಿ ಶ್ರೇಷ್ಠನಾದ, ರಾಕ್ಷಸಬಾಧೆಯ ಆಶಂಕೆಯಿಲ್ಲದವನಾದ, ವಾಯುಪುತ್ರನಾದ ಹನುಮಂತನು ಈ ಲಂಕೆಯಲ್ಲಿ ಮಾಡಲ್ಪಟ್ಟ ಮುದ್ರಿಕಾದಾನವೇ ಮೊದಲಾದ ಕಾರ್ಯವನ್ನು ಮಾಡಿ ತನ್ನನ್ನು ಪ್ರಕಟೀಕರಿಸುವ ವಿಷಯದಲ್ಲಿ ಬುದ್ಧಿಯನ್ನು ಮಾಡಿದನು ॥೧೬॥

ಮೂ ॥ ಅಥ ವನಮಖಿಲಂ ತದಾ್ರವಣಸ್ಯಾವಲುಂ(ಲು)ಪ್ಯ
ಕ್ಷಿತಿರುಹಮಿಮಮೇಕಂ ವರ್ಜಯಿತ್ವಾಶು ವಿ ರಃ ॥
ರಜನಿಚರವಿನಾಶಂ ಕಾಂಕ್ಷಮಾಣೊ ಽನೇಲಂ
ಮುಹುರತಿರವನಾದೀ ತೋರಣಂ ಚಾರುರೋಹ ॥೧೭ ॥

ಅ ॥ ಆ ಮೇಲೆ ಆರಬ್ಧಾಂತಗಾಮಿಯಾದ ರಾಕ್ಷಸರ ವಿನಾಶವನ್ನು ಇಚ್ಛಿಸತಕ್ಕ ಹನುಮಂತನು (ಸೀತಾದೇವಿಯ ಆಕಾರಕ್ಕೆ ಆಶ್ರಿತವಾದ) ಇದೊಂದು ಶಿಂಶುಪಾವೃಕ್ಷವನ್ನು ಬಿಟ್ಟು ಶೀಘ್ರದಲ್ಲಿ ರಾವಣನ ಸಂಪೂರ್ಣವಾದ ಅಶೋಕವನ್ನು ಛೇದಿಸಿ ಅತ್ಯಂತವಾಗಿ ಮತ್ತೂ ಮತ್ತು ಉತ್ಕೃಷ್ಟ ಶಬ್ದವು ಹೇಗೆ ಆದೀತೋ ಹಾಗೆ ಸಿಂಹನಾದವುಳ್ಳವನಾಗಿ ಗೃಹಪ್ರಾಕಾರ ದ್ವಾರವನ್ನು ಏರಿದನು ॥೧೭॥

ಮೂ ॥ ಅಥಾಶ್ರೃಣೋದ್ದಶಾನನಃ ಕಪೀಂದ್ರಚೇಷ್ಟಿತಂ ಪರಂ ॥
ದಿದೇಶ ಕಿಂಕರಾನ್ಬಹೂನ್ನಿಗೃಹ್ಯತಾಮಿತಿ ॥ ೧೮ ॥

ಅ ॥ ಆ ಮೇಲೆ ರಾವಣನು ವಿರೂಪವಾದ ಅಶೋಕವನವಿಲುಂಪನಾದಿ ಕರ್ಮವನ್ನು ಕೇಳಿದನು. ಕಪಿಯು ಕಟ್ಟಲ್ಪಡಲಿ ಎಂದು ಬಹುಮಂದಿ ಭೃತ್ಯರನ್ನು ಆಜ್ಞಾಪಿಸಿದನು ॥೧೮॥

ಮೂ ॥ ಸಮಸ್ತಶೋ ವಿಮೃತ್ಯವೋ ವರಾದ್ಧರಸ್ಯ ಕಿಂಕರಾಃ ॥
ಸಮಾಸದನ್ಮಹಾಬಲಂ ಸುರಾಂತರಾತ್ಮನೋಽಙ್ಗಜಂ ॥ ೧೯ ॥

ಅ ॥ ರುದ್ರನ ವರದಿಂದ ಮರಣರಹಿತರಾದ ಎಲ್ಲಾ ಭೃತ್ಯರೂ ದೇವತೆಗಳಿಗೆ ಅಂತರ್ಯಾಮಿಯಾದ ವಾಯುವಿನ ಮಗನಾದ ಮಹಾ ಪರಾಕ್ರಮವುಳ್ಳ ಹನುಮಂತನನ್ನು ಹೊಂದಿದರು ॥೧೯॥

ಮೂ ॥ ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಂ ॥
ಅನೇಕಹೇತಿಸಂಕುಲಂ ಕಪೀಂದ್ರಮಾವೃಣೋದ್ಬಲಂ ॥ ೨೦ ॥

ಅ ॥ ಎಂಬತ್ತು ಕೋಟಿ ಸೇನಾಪತಿಗಳುಳ್ಳ, ಅಗ್ರೇಸರವಾದ, ಅಷ್ಟಸಂಖ್ಯಾವುಳ್ಳ, ಹತ್ತು ಸಹಸ್ರವುಳ್ಳ, (ಅಂದರೆ ಎಂಭತ್ತು ಸಹಸ್ರಮಂದಿ ಪ್ರಧಾನರಾದ ಭಟರಿಂದ ಸಹಿತವಾದ) ನಾನಾಪ್ರಕಾರಗಳಾದ ಆಯುಧಗಳಿಂದ ನಿಬಿಡವಾದ, ಬಹುಸಂಖ್ಯಾಕವಾದ ಚತುರಂಗಬಲವು ಕಪಿಶ್ರೇಷ್ಠನಾದ ಹನುಮಂತನನ್ನು ಆವರಿಸಿತು. ॥೨೦॥

ಮೂ ॥ ಸಮಾವೃತಸ್ತಥಾಯುಧೈಃ ಸ ತಾಡಿತಶ್ಚ ತೈರ್ಭೃಶಂ ॥
ಚಕಾರ ತಾನ್ಸಮಸ್ತಶಸ್ತಲಪ್ರಹಾರಚೂರ್ಣಿತಾನ್ ॥ ೨೧ ॥

ಅ ॥ ಆ ಭೃತ್ಯರಿಂದ ಯುಕ್ತನಾದ ಹಾಗೆಯೇ ಭೃತ್ಯರಿಂದ ಆಯುಧಗಳಿಂದ ಹೊಡಿಸಿ ಕೊಳ್ಳಲ್ಪಟ್ಟ (ತಮ್ಮ ಶಕ್ತಿಯಿದ್ದಷ್ಟು ಹನುಮಂತನಿಗೆ ಹೊಡೆದರೂ ಪುಷ್ಪಮಾಲಿಕೆಯಿಂದ ಹೊಡೆಯಲ್ಪ ಮದೋನ್ಮತ್ತವಾದ ಆನೆಯಂತೆ ಲೋಮಾಗ್ರಹಕ್ಕೂ ಛೇದವುಂಟಾಗಲಿಲ್ಲ.)

ಆ ಹನುಮಂತನು ಎಲ್ಲಾ ರಾಕ್ಷಸರನ್ನೂ ಅತ್ಯಂತವಾಗಿ ಹಸ್ತತಲದ ಪೆಟ್ಟಿನಿಂದ ಚೂರ್ಣೀಕೃತರನ್ನಾಗಿ ಮಾಡಿದನು. ॥೨೧॥

ಮೂ ॥ ಪುನಶ್ಚ ಮಂತ್ರಿಪುತ್ರಕಾನ್ಸ ರಾವಣಪ್ರಚೋದಿತಾನ್ ॥
ಮಮರ್ದ ಸಪ್ತಪರ್ವತಪ್ರಭಾನ್ವರಾಭಿರಕ್ಷಿತಾನ್ ॥೨೨॥
ಬಲಾಗ್ರಗಾಮಿನಸ್ತಥಾ ಸ ಶರ್ವವಾಕ್ಸುಗರ್ವಿತಾನ್ ॥
ನಿಹತ್ಯ ಸರ್ವರಕ್ಷಸಾಂ ತೃತೀಯಭಾಗಮಕ್ಷಿಣೋತ್ ॥೨೩॥

ಅ ॥ ಮತ್ತೂ ಕೂಡ ಹನುಮಂತನು ಪರ್ವತಕ್ಕೆ ಸದೃಶರಾದ, ಬ್ರಹ್ಮನ ವರದಿಂದ ರಕ್ಷಿಸಿಕೊಳ್ಳಲ್ಪಟ್ಟ, ರಾವಣಬಲದ ಮುಂದೆ ಹೋಗತಕ್ಕ, ರುದ್ರನ ವರದಿಂದ ಅತ್ಯಂತ ಗರ್ವಯುಕ್ತರಾದ, ರಾವಣನಿಂದ ಕಳುಹಿಸಿಕೊಳ್ಳಲ್ಪಟ್ಟ ಏಳುಮಂದಿ ಮಂತ್ರಿಪುತ್ರರನ್ನು ಸಂಹಾರ ಮಾಡಿ (ಪಾದತಲದಿಂದ) ಮರ್ದಿಸಿದನು. ಆ ಹನುಮಂತನು ಎಲ್ಲಾ ರಾಕ್ಷಸರಲ್ಲಿ ಮೂರನೇ ಒಂದುಭಾಗವನ್ನು ನಾಶಮಾಡಿದನು. ॥೨೨-೨೩॥

ಮೂ ॥ ಅನೌಪಮಂ ಹರೇರ್ಬಲಂ ನಿಶಮ್ಯ ರಾಕ್ಷಸಾಧಿಪಃ ॥
ಕುಮಾರಮಕ್ಷಮಾತ್ಮನಃ ಸಮಂ ಸುತಂ ನ್ಯಯೋಜಯತ್ ॥೨೪॥

ಅ ॥ ರಾಕ್ಷಸರಿಗೆ ಅಧಿಪತಿಯಾದ ರಾವಣನು ಅಸದೃಶವಾದ ಕಪಿಯಾದ ಹನುಮಂತನ ಬಲವನ್ನು ಕೇಳಿ ತನಗೆ (ಬಲದಿಂದ) ಸದೃಶನಾದ, ತನ್ನ ಮಗನಾದ ಅಕ್ಷನಾಮಕ ಕುಮಾರನನ್ನು (ಯುದ್ಧಮಾಡುವುದಕ್ಕಾಗಿ) ಕಳುಹಿಸಿದನು. ॥೨೪॥

ಮೂ ॥ ಸ ಸರ್ವಲೋಕಸಾಕ್ಷಿಣಃ ಸುತಂ ಶರೈರ್ವವರ್ಷ ಹ ॥
ಶಿತೈರ್ವರಾಸ್ತ್ರಮಂತ್ರಿತೈರ್ನಚೈನಮಭ್ಯಚಾಲಯತ್ ॥೨೫॥

ಅ ॥ ಅಕ್ಷಕುಮಾರನು ಎಲ್ಲಾ ಲೋಕಗಳಿಗೂ ಅಂತರ್ಯಾಮಿಯಾಗಿ ಸಾಕ್ಷಿಯಾದ ವಾಯುವಿನ ಮಗನಾದ ಹನುಮಂತನನ್ನು ಬಾಣಗಳಿಂದ ಸುರಿಸಿದನು. (ಅಂದರೆ ಹನುಮಂತನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು) ತೀಕ್ಷ್ಣಗಳಾದ ಉತ್ತಮಗಳಾದ ಅಸ್ತ್ರಮಂತ್ರಗಳಿಂದ ಅಭಿಮಂತ್ರಿತಗಳಾದ ಅಸ್ತ್ರಗಳಿಂದಲೂ ಈ ಹನುಮಂತನನ್ನು ಹಂದಾಡಿಸಲಾಗಲಿಲ್ಲ ॥೨೫॥

ಮೂ ॥ ಸ ಮಂಡನುಧ್ಯಕಾ(ಗಾ)ಸುತಂ ಸಮೀಕ್ಷ್ಯ ರಾವಣೋಪಮಂ ॥
ತೃತೀಯ ಏಷ ಚಾಂಶಕೋ ಬಲಸ್ಯ ಹೀತ್ಯಚಿಂತಯತ್ ॥೨೬॥

ಅ ॥ ಆ ಹನುಮಂತನು ಮಂಡೋದರಿಯ ಮಗನಾದ (ಬಲದಿಂದ) ರಾವಣನಿಗೆ ಸದೃಶನಾದ ಅಕ್ಷಕುಮಾರನನ್ನು ನೋಡಿ ಈ ಅಕ್ಷಕುಮಾರನು ರಾವಣಬಲದ ಮೂರನೇಭಾಗವೇ ಎಂದು ಮೇಲೆ ಹೇಳುವ ಪ್ರಕಾರ ಯೋಚಿಸಿದನು. (ಅಂದರೆ-ರಾವಣನು ಬಲದ ಒಂದಂಶನು. ಇಂದ್ರಜಿತ್ ಎರಡನೇ ಅಂಶನು, ಅಕ್ಷಕುಮಾರನು ಮೂರನೇ ಅಂಶನು.) (ವರಬಲದಲ್ಲಿಯೂ, ಅಸ್ತ್ರಬಲದಲ್ಲಿಯೂ, ತನ್ನ ಬಲದಲ್ಲಿಯೂ, ಮೂರರಲ್ಲಿಯೂ ಸಾಮ್ಯವು ಪ್ರಸಿದ್ಧವು. )॥೨೬॥

ಮೂ ॥ ನಿಧಾರ್ಯ ಏವ ರಾವಣಃ ಸ ರಾಘವಾಯ (ನಸ್ಯ) ನಾನ್ಯಥಾ ॥
ಯದೀಂದ್ರಜಿನ್ಮಯಾ ಹತೋ ನ ಚಾಸ್ಯ ಶಕ್ತಿರೀಕ್ಷ್ಯತೇ ೨೭॥

ಅ ॥ ಆ ರಾವಣನು ರಾಮನಿಗೋಸ್ಕರ ಸ್ಥಾಪಿಸಲಿಕ್ಕೇನೇ ಅರ್ಹನು. (ಅಂದರೆ ರಾವಣನನ್ನು ರಾಮನಿಗೋಸ್ಕರ ಬಿಡುವುದೇ ಯೋಗ್ಯವು) ಬೇರೆಪ್ರಕಾರವಲ್ಲ. ಯಾವ ಪಕ್ಷದಲ್ಲಿ ನನ್ನಿಂದ ಇಂದ್ರಜಿತುವು ಸಂಹರಿಸಿಕೊಳ್ಳಲ್ಪಡುತ್ತಾನೋ, ಹಾಗಾದರೆ ಇಂದ್ರಜಿತುವಿನ ಶಸ್ತ್ರ-ಅಸ್ತ್ರ-ಶಾರೀರಬಲವು (ನಮ್ಮವರಿಂದ) ಕಾಣಲ್ಪಡುವುದಿಲ್ಲ. ॥೨೭॥

ಮೂ ॥ ಅತಸ್ತಯೋಃ ಸಮೋ ಮಯಾ ತೃತೀಯ ಏಷ ಹನ್ಯತೇ ॥
ವಿಚಾರ್ಯ ಚೈವಮಾಶು ತಂ ಪದೋಃ ಪ್ರಗೃಹ್ಯ ಪುಪ್ಲುವೇ ॥೨೪॥

ಅ ॥ ಆದಕಾರಣ ರಾವಣ ಇಂದ್ರಜಿತುಗಳಿಗೆ ಸದೃಶನಾದ ಮೂರನೇಯವನಾದ ಈ ಅಕ್ಷಕುಮಾರನು ಸಂಹರಿಸಿಕೊಳ್ಳಲ್ಪಡುತ್ತಾನೆ. ಹೀಗೆ ವಿಚಾರಮಾಡಿ ಶೀಘ್ರದಲ್ಲಿ ಆ ಅಕ್ಷ ಕುಮಾರನನ್ನು ಪಾದಗಳಲ್ಲಿ ಹಿಡಿದುಕೊಂಡು ಹಾರಿದನು. ॥೨೪॥

ಮೂ ॥ ಸ ಚಕ್ರವದ್ಭ್ರಮಾತುರಂ ವಿಧಾಯ ರಾವಣಾತ್ಮಜಂ ॥
ಅಪೋಥಯದ್ಧರಾತಲೇ ಕ್ಷಣೇನ ಮಾರುತೀತನುಃ ॥೨೯॥

ಅ ॥ ವಾಯುಸಂಬಂಧಿಯಾದ ಸ್ವರೂಪವುಳ್ಳ ಆ ಹನುಮಂತನು ರಾವಣನ ಮಗನಾದ ಅಕ್ಷಕುಮಾರನನ್ನು ಕುಲಾಲಚಕ್ರದಂತೆ ಭ್ರಮಣದಿಂದ ಸಂಭ್ರಾಂತನನ್ನಾಗಿಮಾಡಿ ಭೂತಲದಲ್ಲಿ ಕ್ಷಣದಿಂದ ಕೆಡಹಾಕಿ ಮರ್ದಿಸಿದನು. ॥೨೯॥

ಮೂ ॥ ವಿಚೂರ್ಣಿತೇ ಧರಾತಲೇ ನಿಜೇ ಸುತೇ ಸ ರಾವಣಃ ॥
ನಿಶಮ್ಯ ಶೋಕತಾಪಿತಸ್ತದಗ್ರಜಂ ಸಮಾದಿಶತ್ ॥೩೦॥

ಅ ॥ ಆ ರಾವಣನು ತನ್ನ ಮಗನಾದ ಅಕ್ಷಕುಮಾರನು ಭೂತಲದಲ್ಲಿ ಪುಡಿಮಾಡ ಲ್ಪಡುತ್ತಿರಲು ಆ ಮೇಲೆ ಅದನ್ನು (ಅಂದರೆ ಮಡಿದನೆಂಬ ವಾರ್ತೆಯನ್ನು) ಕೇಳಿ ಪುತ್ರಶೋಕ ದಿಂದ ಸಂತಾಪವನ್ನು ಹೊಂದಿದವನಾಗಿ ಅಕ್ಷಕುಮಾರನ ಅಣ್ಣನಾದ ಇಂದ್ರಜಿತುವನ್ನು ಕುರಿತು ಆಜ್ಞಾಪಿಸಿದನು. ॥೩೦॥

ಮೂ ॥ ಅಥೇಂದ್ರಜಿನ್ಮಹಾಶರೈರ್ವರಾಸ್ತ್ರಸಂಪ್ರಯೋಜಿತೈಃ ॥
ತತಕ್ಷ ವಾನರೋತ್ತಮಂ ನ ಚಾಶಕದ್ವಿಚಾಲನೇ ॥೩೧॥

ಅ ॥ ಆ ಮೇಲೆ ದಿವ್ಯ ಮಂತ್ರಗಳಿಂದ ಅಭಿಮಂತ್ರಿತಗಳಾದ ಮಹತ್ತಾದ ಬಾಣಗಳಿಂದ ಕಪಿಶ್ರೇಷ್ಠನಾದ ಹನುಮಂತನನ್ನು ಹೊಡೆದನು. (ಅಂದರೆ ಹಸ್ತಾದಿಗಳ ಛೇದಾದಿಗಳನ್ನು ಮಾಡಿ ಹನುಮಂತನ ಅಂಗಗಳನ್ನು ಅಲ್ಪೀಕರಿಸಬೇಕೆನ್ನುವ ಇಚ್ಛೆಯಿಂದ ಬಾಣಗಳ ಪ್ರಯೋಗದನ್ನು ಮಾಡಿದನು.) ಮತ್ತು ಹನುಮಂತನನ್ನು ಹಂದಾಡಿಸುವ ವಿಷಯದಲ್ಲಿಯೂ ಸಮರ್ಥ ನಾಗಲಿಲ್ಲ ॥೩೧॥

ಮೂ ॥ ಅಥಾಸ್ತ್ರಮುತ್ತಮಂ ವಿಧೇರ್ಯುಯೋಜ ಸರ್ವದುಸ್ಸ (ಷ್ಟ) ಹಂ ॥
ಸ ತೇನ ತಾಡಿತೋ ಹರಿರ್ವ್ಯಚಿಂತಯನ್ನಿರಾಕುಲಃ ॥೩೨॥

ಅ ॥ ಆ ಮೇಲೆ ಇಂದ್ರಜಿತು ಎನ್ನುವವನು ಶಿವಾದಿಗಳಿಂದ ಸಹಿಸಲಿಕ್ಕೆ ಅಶಕ್ಯವಾದ ಉತ್ತಮವಾದ ಬ್ರಹ್ಮನ ಅಸ್ತ್ರವನ್ನು ಕೂಡಿಸಿದನು. (ಅಂದರೆ ಬಿಟ್ಟನು) ಆ ಬ್ರಹ್ಮಾಸ್ತ್ರದಿಂದ ಹೊಡೆಯಲ್ಪಟ್ಟ, ಮೋಹ ರಹಿತನಾದ ಆ ಹನುಮಂತನು ಆಲೋಚಿಸಿದನು ॥೩೨॥

ಮೂ ॥ ಮಯಾ ವರಾ ವಿಲಂಘಿತಾ ಹ್ಯನೇಕಶಃ ಸ್ವಯಂಭುವಃ ॥
ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಂ ॥೩೩॥

ಅ ॥ ನನ್ನಿಂದ ಬ್ರಹ್ಮನ ಅನೇಕ ವರಗಳು ಉಲ್ಲಂಘಿಸಲ್ಪಟ್ಟಿವೆ. ನನ್ನಿಂದ ಆ ಬ್ರಹ್ಮನು ಬಹುಮಾನಿಸಿಕೊಳ್ಳಲಿಕ್ಕೆ ಅರ್ಹನೇ ಆಗಿರುತ್ತಾನೆ. ಆದಕಾರಣ ನಾನು ಇಂದ್ರಜಿತು ಬಿಟ್ಟ ಬ್ರಹ್ಮಾಸ್ತ್ರದಲ್ಲಿ (ಬ್ರಹ್ಮನನ್ನು) ಮಾನಿಸುತ್ತೇನೆ.

ವಿಶೇಷಾಂಶ— (1) ಲಂಕಾಪಟ್ಟಣದಲ್ಲಿ ಸಂಹರಿಸಿಕೊಳ್ಳಲ್ಪಟ್ಟ ಅಕ್ಷಕುಮಾರನಿಗೆ ಈತನ ವರವೊಂದು ಹೇಳದೆ ಇದ್ದುದರಿಂದ ಬ್ರಹ್ಮನ ವರದಿಂದಲೇ ಶಕ್ತಿಯು. (2) ಮಂತ್ರಿ ಪುತ್ರರಿಗೂ ೨೨ನೇ ಶ್ಲೋಕದಲ್ಲಿ 'ವರಾಭಿರಕ್ಷಿತಾನ್' ಎಂದು ಸಾಮಾನ್ಯವಾಗಿಯೇ ವರವೆಂದು ಹೇಳಿದುದರಿಂದ ಬ್ರಹ್ಮನ ವರದಿಂದಲೇ ಶಕ್ತಿಯು. (3) ಸಮುದ್ರದ ಮಧ್ಯದಲ್ಲಿ ಸಂಹರಿಸಿಕೊಳ್ಳಲ್ಪಟ್ಟ ಸಿಂಹಿಕೆಗೆ ಅಪ್ರತಿಹತವಾದ ಸಾಮರ್ಥ್ಯವನ್ನು ಬ್ರಹ್ಮನು ಕೊಟ್ಟನು ಎಂದು ಸ್ಪಷ್ಟವಾಗಿ ಹೇಳಿದುದರಿಂದ ಬ್ರಹ್ಮನ ವರದಿಂದಲೇ ಶಕ್ತಿಯು ಎನ್ನುವ ಅಭಿಪ್ರಾಯದಿಂದ 'ಸ್ವಯಂಭುವಃ ವರಾಃ ವಿಲಂಘಿತಾಃ' ಎಂದು ಹೇಳಲ್ಪಟ್ಟಿದೆ ॥೩೩॥

ಮೂ ॥ ಇಮೇ ಚ ಕುರ್ಯುರತ್ರ ಕಿಂ ಪ್ರಹೃಷ್ಟರಕ್ಷಸಾಂ ಗಣಾಃ ॥
ಇತೀಹ ಲಕ್ಷ್ಯಮೇವ ಮೇ ಸ ರಾವಣಶ್ಚ ದೃಶ್ಯತೇ ॥೩೪॥

ಅ ॥ ಈ ಬಂಧುನಾದ್ಮ ಕಾರ್ಯವಾಗೋಣ ಅತಿ ಸಂತುಷ್ಟರಾದ ರಾಕ್ಷಸರ ಈ ಸಮೂಹಗಳು ಏನು ಮಾಡುವುವ? ಎಂದು ನೋಡತಕ್ಕದು ಇಲ್ಲಿ (ನನಗೆ ಬಂಧನವಾಗೋಣ ಆ ರಾವಣನೂ ಕೂಡ ನನ್ನಿಂದ ಕಾಣಿಸಿಕೊಳ್ಳಲ್ಪಡುತ್ತಾನೆ. (ಆದಕಾರಣ ಕಟ್ಟಲ್ಪಟ್ಟವನಂತೆ ಇರುವೆನು.) ॥೩೪॥

ಮೂ ॥ ಇದಂ ಸಮೀಕ್ಷ್ಯ ಬದ್ಧವತ್ಸ್ಥಿತಂ ಕಪೀಂದ್ರಮಾಶು ತೇ ॥
ಬಬಂಧುರನ್ಯಪಾಶಕೈರ್ಜಗಾಮ ಚಾಸ್ತ್ರಮಸ್ಯ ತತ್ ॥೩೫॥

ಅ ॥ ಈ ಕಾರ್ಯಗಳೆರಡನ್ನು ವಿಚಾರಮಾಡಿ ಕಟ್ಟಲ್ಪಟ್ಟವನಂತೆ ಇರತಕ್ಕ ಕಪಿಶ್ರೇಷ್ಠನಾದ ಹನುಮಂತನನ್ನು ಶೀಘ್ರದಲ್ಲಿ ಆ ರಾವಣಭೃತ್ಯರು ಇಂದ್ರಜಿತುವಿನಿಂದ ಪ್ರಯೋಗಿಸಲ್ಪಟ್ಟ ನಾಗಪಾಶದಿಂದ ಅತಿರಿಕ್ತಗಳಾದ ಲೌಕಿಕ ಪಾಶ(ಹಗ್ಗ)ಗಳಿಂದ ಕಟ್ಟಿ ಹಾಕಿದರು. ಈ ಇಂದ್ರಜಿತುವಿನ ಆ ಬ್ರಹ್ಮಾಸ್ತ್ರವು (ಬ್ರಹ್ಮಲೋಕವನ್ನು ಕುರಿತು) ಹೋಯಿತು.

ವಿಶೇಷಾಂಶ— (1) ಹನುಮಂತನಲ್ಲಿ ಬ್ರಹ್ಮಾಸ್ತ್ರವು ನಿಷ್ಫಲವು ಆಯಿತು. ಆದುದರಿಂದಲೇ ಇಂದ್ರಜಿತುವು ಎಲ್ಲಾ ಕಪಿಗಳನ್ನೂ ನಾಗಪಾಶದಿಂದ ಬಂಧಿಸಿದಾಗ್ಯೂ ಹನುಮಂತನನ್ನು ಬಂಧಿಸಲಿಕ್ಕೆ ಸಮರ್ಥನಾಗಲಿಲ್ಲ ॥೩೫॥

ಮೂ ॥ ಅಥ ಪ್ರಗೃಹ್ಯ ತಂ ಕಪಿಂ ಸಮೀಪಮಾಸಯಂಶ್ಚ ತೇ ॥
ನಿಶಾಚರೇಶ್ವರಸ್ಯ ತಂ ಪ್ರ (ಸ) ಪ್ರಪ್ಛವಾನ್ಸ ರಾವಣಃ ॥೩೭॥

ಅ ॥ ಆ ಮೇಲೆ ರಾವಣನ ಭೃತ್ಯರು ಆ ಹನುಮಂತನನ್ನು ಹಿಡಿದುಕೊಂಡು ರಾಕ್ಷಸರಿಗೆ ಸ್ವಾಮಿಯಾದ ರಾವಣನ ಸಮೀಪವನ್ನು ಕುರಿತು ಕರೆದುಕೊಂಡು ಬಂದರು. ಆ ರಾವಣನು ಆ ಹನುಮಂತನನ್ನು ಪ್ರಶ್ನೆಮಾಡಿದನು ॥೩೭॥

ಮೂ ॥ ಕಪೇ ಕುತೋಽಸಿ ಕಸ್ಯ ವಾ ಕಿಮರ್ಥಮೀದೃಶಂ ಕೃತಂ ॥
ಇತೀರಿತಃ ಸ ಚಾವದತ್ಪ್ರಣಮ್ಯ ರಾಮಮೀಶ್ವರಂ ॥೩೭॥

ಅ ॥ ಎಲೋ ಕಪಿಯೇ! ಯಾವ ದ್ವೀಪದಿಂದ ಬಂದವನಾಗಿರುತ್ತೀ? ಯಾರ ದೂತನಾಗಿರುತ್ತಿ? ಇಂತಹ ವನಭಂಗ ರಾಕ್ಷಸನಾಶರೂಪವಾದ ಕರ್ಮವು ಯಾವುದಕ್ಕಾಗಿ (ನಿನ್ನಿಂದ) ಮಾಡಲ್ಪಟ್ಟಿತು? ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಆ ಹನುಮಂತನು ಸರ್ವಸ್ವಾಮಿಯಾದ ಶ್ರೀ ರಾಮನನ್ನು ನಮಸ್ಕರಿಸಿ ಹೇಳಿದನು ॥೩೭॥

ಮೂ ॥ ಅವೈಹಿ ದೂತಮಾಗತಂ ದುರಂತವಿಕ್ರಮಸ್ಯ ಮಾಂ ॥
ರಘೂತ್ತಮಸ್ಯ ಮಾರುತಿಂ ಕುಲಕ್ಷಯೇ ತವೇಶ್ವರಂ ॥೩೮॥

ಅ ॥ ಅವಧಿರಹಿತವಾದ ಪರಾಕ್ರಮವುಳ್ಳ ಶ್ರೀ ರಾಮನ ದೂತನಾಗಿ ಬಂದಿರತಕ್ಕ ಹನುಮಂತನಾದ ನನ್ನನ್ನು ನಿನ್ನ ಕುಲವನ್ನು ನಾಶಪಡಿಸುವುದರಲ್ಲಿ ಸಮರ್ಥನನ್ನಾಗಿ ತಿಳಿ ॥೩೮॥

ಮೂ ॥ ನ ಚೇತ್ಪ್ರದಾಸ್ಯಸಿ ತ್ವರನ್ರಘೂತ್ತಮಪ್ರಿಯಾಂ ತದಾ ॥
ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ ॥೩೯॥

ಅ ॥ ನೀನು ವೇಗಯುಕ್ತನಾಗಿ ರಾಮನ ಪ್ರಿಯಳಾದ ಸೀತಾದೇವಿಯನ್ನು ಶ್ರೀ ರಾಮನಿಗೆ ಒಪ್ಪಿಸದೆ ಇದ್ದ ಪಕ್ಷದಲ್ಲಿ ಆಗ ನಿನ್ನ ಮಕ್ಕಳೂ ಮಿತ್ರರೂ ಬಾಂಧವರೂ ಇವರಿಂದ ಕೂಡಿದವನಾಗಿ ವಿನಾಶವನ್ನು ಶೀಘ್ರದಲ್ಲಿ ಹೊಂದುವಿ. ॥೩೯॥

ಮೂ ॥ ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾ ಅಪಿ ॥
ವಿರಿಂಚಶರ್ವಪೂರ್ವಕಾಃ ಕಿಮು ತ್ವಮಲ್ಪಸಾರಕಃ ॥೪೦॥

ಅ ॥ ಶ್ರೀ ರಾಮನ ಬಾಣವನ್ನು ಧರಿಸುವ ವಿಷಯದಲ್ಲಿ ಬ್ರಹ್ಮ ರುದ್ರ ಮೊದಲಾದ ದೇವಶ್ರೇಷ್ಠರೂ ಕೂಡ ಸಮರ್ಥರಲ್ಲ. ಅಲ್ಪ ವೀರ್ಯವುಳ್ಳ ನೀನು ಸಮರ್ಥನಲ್ಲವೆಂದು ಏನು ಹೇಳಬೇಕು? (ಅಂದರೆ ಬೇರೆ ಹೇಳಬೇಕಾಗಿಲ್ಲ.) ॥೪೦॥

ಮೂ ॥ ಪ್ರಕೋಪಿತಸ್ಯ ತಸ್ಯ ಕಃ ಪುರಸ್ಥಿತೌ ಕ್ಷಮೋ ಭವೇತ್ ॥
ಸುರಾಸುರೋರಗಾದಿಕೇ ಜಗತ್ಯಚಿಂತ್ಯಕರ್ಮಣಃ ॥೪೧॥

ಅ || ಅತ್ಯಂತ ಕೋಪಯುಕ್ತವಾದ ಅತರ್ಕ್ಯವಾದ ಕರ್ಮವುಳ್ಳ ಆ ರಾಮನ ಮುಂದೆ ನಿಲ್ಲಲಿಕ್ಕೆ ದೇವತೆಗಳೂ ಅಸುರರೂ ಸರ್ಪಗಳೂ ಇವುಗಳೇ ಮೊದಲಾಗಿ ಉಳ್ಳ ಜಗತ್ತಿನಲ್ಲಿ ಸಮರ್ಥರಾದವನು ಯಾರು ಆದಾರು? (ಯಾರೂ ಸಮರ್ಥರಾಗಲಾರರು)

ವಿಶೇಷಾಂಶ — (1) ಪ್ರಕೋಪಿತಸ್ಯ ಎಂದು ಹೇಳಿದರಿಂದ ದಯಾಳುವಾದುದರಿಂದ ಅಲ್ಪವಾದ ಅಪರಾಧವನ್ನು ಸಹಿಸುತ್ತಾನೆ. ಯಾರಾದರೂ ಪ್ರಬಲವಾದ ಅಪರಾಧವನ್ನು ಮಾಡಿದರೆ ಅಪರಾಧವನ್ನು ಅನುಸರಿಸಿ ಸಂಹರಿಸುವ ವಿಷಯದಲ್ಲಿ ಇಚ್ಛಾರೂಪವಾದ ಕೋಪವನ್ನೇ ಆತನಲ್ಲಿ ಮಾಡುತ್ತಾನೆ. ಸ್ವಾಭಾವಿಕವಾಗಿ ಕೋಪವಿಲ್ಲವೆಂದು ಸೂಚಿತವಾಯಿತು ||೪೧||

ಮೂ || ಇತೀರಿತೇ ವಧೋದ್ಯತಂ ನ್ಯವಾರಯದ್ವಿಭೀಷಣಃ ||
ಸ ಪುಚ್ಛದಾಹಕರ್ಮಣಿ ನ್ಯಯೋಜಯನ್ನಿಶಾಚರಾನ್ ||೪೨||

ಅ || ಈ ಪ್ರಕಾರ (ಹನುಮಂತನು) ಹೇಳುತ್ತಿರಲು, ವಿಭೀಷಣನು ಹನುಮಂತನನು ಸಂಹರಿಸುವುದಕ್ಕೋಸ್ಕರ ಉದ್ಯುಕ್ತನಾದ ರಾವಣನನ್ನು ತಡೆದನು. ಆ ರಾವಣನು ಬಾಲದ ಭಸ್ಮೀಕರಣರೂಪವಾದ ಕರ್ಮದಲ್ಲಿ ರಾಕ್ಷಸರನ್ನು ಆಜ್ಞಾಪಿಸಿದನು. ||೪೨||

ಮೂ || ಅಥಾಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಮಗ್ನಯೇ ||
ದದುರ್ದದಾಹ ನಾಸ್ಯತನ್ಮರುತ್ಸಖೋ ಹುತಾಶನಃ ||೪೩||

ಅ || ಆ ಮೇಲೆ ಈ ಹನುಮಂತನ ಬಾಲವನ್ನು ವಸ್ತ್ರಗಳ ಸಮೂಹಗಳಿಂದ ಆಚ್ಛಾದನೆ ಮಾಡಿ (ರಾವಣನನ ಭೃತ್ಯರು) ಅಗ್ನಿಗೋಸ್ಕರ ಕೊಟ್ಟರು. (ಅಂದರೆ ಅದಕ್ಕೆ ಅಗ್ನಿಯನ್ನು ಕೊಟ್ಟರು.) ವಾಯುವಿಗೆ ಸಖನಾದ ಅಗ್ನಿಯು ಈ ಹನುಮಂತನ ಬಾಲವನ್ನು ಸುಡಲಿಲ್ಲ ||೪೩||

ಮೂ || ಮಮರ್ಷ ಸರ್ವಚೇಷ್ಟಿತಂ ಸ ರಕ್ಷಸಾಂ ನಿರಾಮಯಃ ||
ಬಲೋದ್ಧತಶ್ಚ ಕೌತುಕಾತ್ಪ್ರದಗ್ಧುಮೇವ ತಾಂ ಪುರೀಂ ||೪೪||

ಅ || ಬಲದಿಂದ ಉತ್ಕೃಷ್ಟವಾದ, ಛೇದ ಭೇದ ಮೊದಲಾದ ದುಃಖದಿಂದ ವಿರಹಿತನಾದ ಆ ಹನುಮಂತನು ಆ ಲಂಕಾಪಟ್ಟಣವನ್ನು ಸುಡುವುದಕ್ಕಾಗಿ ಕುತೂಹಲ (ಸಂತೋಷ) ದಿಂದಲೇ (ಅಶಕ್ತಿಯಿಂದ ಅಲ್ಲ) ರಾಕ್ಷಸರ ತಾಡನ, ಬಾಲವೇಷ್ಟನ ಮೊದಲಾದ ಕರ್ಮವನ್ನು ಸಹಿಸಿಕೊಂಡನು. ||೪೪||

ಮೂ || ದದಾಹ ಚಾಖಿಲಾಂ (ಲಂ) ಪುರೀಂ (ರಂ) ಸ್ವಪುಚ್ಛಗೇನ ವಹ್ನಿನಾ ||
ಕೃತಿಸ್ತು ವಿಶ್ವಕರ್ಮಣೋಽಪ್ಯದಹ್ಯತಾಸ್ಯ ತೇಜಸಾ ||೪೫||

ಅ || (ಹನುಮಂತನು) ತನ್ನ ಬಾಲದಲ್ಲಿರತಕ್ಕ ಬೆಂಕಿಯಿಂದ ಎಲ್ಲಾ ಲಂಕಾಪಟ್ಟಣವನ್ನೂ ಕೂಡ ಸುಟ್ಟುಬಿಟ್ಟನು. ದೇವತೆಗಳ ಬಡಗಿಯಾದ ವಿಶ್ವಕರ್ಮನ ನಿರ್ಮಾಣವೂ ಕೂಡ ಹನುಮಂತದೇವರ ಪ್ರಭಾವದಿಂದ ಸುಡಲ್ಪಟ್ಟಿತು. ||೪೫||

ಮೂ ॥ ಸುವರ್ಣರತ್ನಕಾರಿತಾಂ ಸ ರಾಕ್ಷಸೋತ್ತಮೈಃ ಸಹ ॥
ಪ್ರದಹ್ಯ ಸರ್ವತಃ (ಶಃ) ಪುರೀಂ ಮುದಾನ್ವಿತೋ ಜಗರ್ಜ ಚ ॥೪೬॥

ಅ ॥ ಹನುಮಂತನು ಸುವರ್ಣದಿಂದಲೂ ರತ್ನದಿಂದಲೂ ಮಾಡಲ್ಪಟ್ಟ ಇಡೀ ಪಟ್ಟಣವನ್ನು ರಾಕ್ಷಸ ಶ್ರೇಷ್ಠರುಗಳಿಂದ ಕೂಡಿಕೊಂಡು ಸುಟ್ಟು ಸಂತೋಷದಿಂದ ಯುಕ್ತನಾಗಿ ಸಿಂಹ ಧ್ವನಿಯನ್ನು ಮಾಡಿದನು. ॥೪೬॥

ಮೂ ॥ ಸ ರಾವಣಂ ಸುಪುತ್ರಕಂ ತೃಣೋಪಮಂ ವಿಧಾಯ ಚ ॥
ತಯೋಃ ಪ್ರಪಶ್ಯತೋಃ ಪುರೀಂ (ರಂ) ವಿಧಾಯ ಭಸ್ಮಸಾದ್ಯಯೌ ॥೪೭॥

ಅ ॥ ಹನುಮಂತನು ಮಕ್ಕಳಿಂದಕೂಡಿದ ರಾವಣನನ್ನು ಹುಲ್ಲಿಗೆ ಸದೃಶನನ್ನಾಗಿ ಮಾಡಿ, ರಾವಣ-ಇಂದ್ರಜಿತು ಇವರಿಬ್ಬರೂ ನೋಡಿಕೊಂಡಿರುವಾಗಲೇ (ಅಂದರೆ ನೋಡುತ್ತಿರುವ ರಾವಣ–ಇಂದ್ರಜಿತು ಇವರಿಬ್ಬರನ್ನು ಲಕ್ಷೀಕರಿಸದೆ) ಲಂಕಾಪಟ್ಟಣವನ್ನು ಭಸ್ಮಾಧೀನವನ್ನಾಗಿಮಾಡಿ ಹೋದನು. ॥೪೭॥

ಮೂ ॥ ವಿಲಂಘ್ಯ ಚಾರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ ॥
ಪ್ರಭಕ್ಷ್ಯ ವಾನರೇಶಿತುರ್ಮಧುಪ್ರಭುಂ ಸಮೇಯಿವಾನ್ ॥೪೮॥

ಅ ॥ (ಹನುಮಂತನು) ಸಮುದ್ರವನ್ನು ಪುನಃ ದಾಟಿ ತನ್ನ ಜಾತಿಯುವರಾದ ಕಪಿಗಳಿಂದ ಪೂಜಿಸಿಕೊಳ್ಳಲ್ಪಟ್ಟವನಾಗಿ ಕಪಿಗಳಿಗೆ ಸ್ವಾಮಿಯಾದ ಸುಗ್ರೀವನ ಮಧುವನದಲ್ಲಿರತಕ್ಕ ಹಣ್ಣು ಹಂಪಲುಗಳನ್ನು ತಿಂದು ಸ್ವಾಮಿಯಾದ ರಾಮಚಂದ್ರದೇವರನ್ನು ಹೊಂದಿದನು. ॥೪೮॥

ಮೂ ॥ ರಾಮಂ ಸುರೇಶ್ವರಮಗಣ್ಯಗುಣಾಭಿರಾಮಂ
ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ ॥
ಚೂಡಾಮಣಿಂ ಪವನಜಃ ಪದಯೋರ್ನಿಧಾಯ
ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ ॥೪೯॥

ಅ ॥ ವಾಯುಪುತ್ರನಾದ ಹನುಮಂತನು ಎಲ್ಲಾ ಕಪಿಶ್ರೇಷ್ಠರುಗಳಿಂದ ಕೂಡಿಕೊಂಡು ದೇವತೆಗಳಿಗೆ ಸ್ವಾಮಿಯಾದ ಅಪರಿಮಿತವಾದ ಗುಣಗಳಿಂದ ಮನೋಹರನಾದ ರಾಮಚಂದ್ರದೇವರನ್ನು ಹೊಂದಿ ಶಿರೋರತ್ನವನ್ನು ಪಾದದ್ವಯಗಳಲ್ಲಿ ಇಟ್ಟು ಎಲ್ಲಾ ಅವಯವಗಳಿಂದ ರಾಮಚಂದ್ರದೇವರಿಗೆ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹದಿಂದ ನಮಸ್ಕಾರವನ್ನು ಮಾಡಿದನು. ॥೪೯॥

ಮೂ ॥ ರಾಮೋಽಪಿ ನಾನ್ಯದನುದಾತುಮಮುಷ್ಯ ಯೋಗ್ಯ-
ಮತ್ಯಂತಭಕ್ತಿಭರಿತ (ಪರಮ) ಸ್ಯ ವಿಲಕ್ಷ್ಯ ಕಿಂಚಿತ್ ॥
ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ
ಕುರ್ವನ್ಸಮಾಶ್ಲಿಷದಮುಂ ಪರಮಾಭಿತುಷ್ಟಃ ॥೫೦॥

ಅ ॥ (ವಾಯುದೇವರ ಭಕ್ತಿಯಿಂದ) ಅತ್ಯಂತ ಸಂತುಷ್ಟರಾದ ರಾಮಚಂದ್ರದೇ ವಾವರೂ (ಸ್ತ್ರೀಪುತ್ರಾದ್ಯಪೇಕ್ಷೆಯಿಂದ) ಅಧಿಕವಾದ ಸ್ನೇಹದಿಂದ ಕೂಡಿದ ಹನುಮಂತನಿಗೆ ನಮಸ್ಕಾರಾನಂತರದಲ್ಲಿ ಕೊಡುವುದಕ್ಕೋಸ್ಕರ ಯೋಗ್ಯವಾದುದು ತನ್ನನ್ನೇ ಕೊಡಬೇಕಲ್ಲದೆ ಬೇರೆ ವಸ್ತುವು ಸ್ವಲ್ಪವೂ ಕೂಡ ಇಲ್ಲವೆಂದು ತಿಳಿದು ವಾಯಪುತ್ರನಾದ ಹನುಮಂತನಿಗೆ ಎಲ್ಲ ರಿಂದಲೂ ಶ್ರೇಷ್ಠವಾದ ತನ್ನ ಪ್ರದಾನವನ್ನು ಮಾಡಿದವನಾಗಿ ಈ ಹನುಮಂತನನ್ನು ಆಲಿಂಗಿಸಿ ದರು. ಅಂದರೆ ಹನುಮಂತನಿಗೆ ತನ್ನನ್ನೇ ಕೊಟ್ಟರು ॥೫೦॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ದ)ವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಶ್ರೀ ರಾಮಚರಿತೇ ಸುಂದರಕಾಂಡಕಥಾನಿರೂಪಣಂ
(ಹನುಮತ್ಪ್ರತಿಯಾನಂ) ನಾಮ ಸಪ್ತಮೋಽಧ್ಯಾಯಃ

ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀರಾಮಚರಿತ್ರೆಯಲ್ಲಿ
ಸುಂದರಕಾಂಡದ ಕಥೆಯನ್ನೊಳಗೊಂಡ ಏಳನೇ ಅಧ್ಯಾಯವು
ಸಂಪೂರ್ಣವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

---

॥ ಶ್ರೀಃ ॥

# ಎಂಟನೇ ಅಧ್ಯಾಯವು.

---

ಮೂ ॥ ಓಂ ಶ್ರುತ್ವಾ ಹನೂಮದುದಿತಂ ಕೃತಮಸ್ಯ ಸರ್ವಂ
ಪ್ರೀತಃ ಪ್ರಯಾಣಮಭಿರೋಚಯತೇ ಸ ರಾಮಃ ।
ಆರುಹ್ಯ ವಾಯುಸುತಮಂಗದಗೇನ ಯುಕ್ತಃ ॥
ಸೌಮಿತ್ರಿಣಾ ಸರವಿಜಃ ಸಹ ಸೇನಯೋಗಾತ್ ॥೧॥

ಅ ॥ ಆ ರಾಮಚಂದ್ರದೇವರು ಹನುಮಂತನಿಂದ ಹೇಳಲ್ಪಟ್ಟ ವನವಿನಾಶಾದಿ ಎಲ್ಲಾ ಈ ಹನುಮಂತನ ಕರ್ಮವನ್ನು ಕೇಳಿ ಸಂತುಷ್ಟರಾಗಿ ಲಂಕಾಯಾತ್ರೆಯನ್ನು ಮಾಡುವುದಕ್ಕೋಸ್ಕರ ಉತ್ಸಾಹಿತರಾಗಿರುತ್ತಾರೆ. ಅಂಗದನಲ್ಲಿರತಕ್ಕ (ಅಂದರೆ ಅಂಗದನ ಹೆಗಲನ್ನು ಏರಿದ) ಲಕ್ಷ್ಮಣನಿಂದ ಯುಕ್ತರಾದ ರಾಮಚಂದ್ರದೇವರು ವಾಯುಪುತ್ರನಾದ ಹನುಮಂತನನ್ನು ಏರಿ (ಅಂದರೆ ಹನುಮಂತನ ಹೆಗಲನ್ನು ಏರಿ.) ಸುಗ್ರೀವನಿಂದ, ಸೇನೆಗಳಿಂದ ಕೂಡಿಕೊಂಡು ಹೋದರು ।೧॥

ಮೂ ॥ ಸಂಪ್ರಾಪ್ಯ ದಕ್ಷಿಣಮಪಾಂನಿಧಿಮತ್ರ ದೇವಃ
ಶಿಶ್ಯೇ ಜಗದ್ಗುರುತಮೋಽಪ್ಯವಿಷಹ್ಯ (ಚಿಂತ್ಯ) ಶಕ್ತಿಃ ।
ಅಗ್ರೇ ಹಿ ಮಾರ್ದವಮನುಪ್ರಥಯನ್ಸ ಧರ್ಮಂ
ಪಂಥಾನಮರ್ಥಿತುಮಪಾಂಪತಿತಃ ಪ್ರತೀತಃ ॥೨॥

ಅ ॥ ಜಗತ್ತುಗಳಿಗೆ ಮುಖ್ಯಗುರುಗಳಾದಾಗ್ಯೂ ಪ್ರಸಿದ್ಧರಾದ, ಸಹಿಸಲಿಕ್ಕೆ ಶಕ್ಯವಾದ ಶಕ್ತಿಯುಳ್ಳ ಕ್ರೀಡಾದಿಗುಣವಿಶಿಷ್ಟರಾದ ರಾಮಚಂದ್ರದೇವರು ದಕ್ಷಿಣದಿಕ್ಕಿನಲ್ಲಿರತಕ್ಕ ಸಮುದ್ರವನ್ನು ಹೊಂದಿ, ಸಮುದ್ರದತೀರದಲ್ಲಿ ಆದಿಯಲ್ಲಿ ಮೃದುತ್ವರೂಪವಾದ ಧರ್ಮವನ್ನು ಪ್ರಸಿದ್ಧೀಕರಿಸುವವರಾಗಿ, ಜಲಗಳಿಗೆ ಸ್ವಾಮಿಯಾದ ಸಮುದ್ರರಾಜನದ್ವೆಸೆಯಿಂದ ಮಾರ್ಗವನ್ನು ಪ್ರಾರ್ಥಿಸುವದಕ್ಕೋಸ್ಕರ ಮಲಗಿದರು. ॥೨।

ವಿಶೇಷಾಂಶ— ಸಮರ್ಥರಾದವರಿಗೂ ಕೂಡ ಆದಿಯಲ್ಲಿ ಮೃದುಧರ್ಮವನ್ನು ತೋರಿಸುವುದೇ ಧರ್ಮವು ಎಂದು ಪ್ರಸಿದ್ಧೀಕರಿಸುವವರಾಗಿ ಮಾರ್ಗವನ್ನು ಬೇಡುವುದಕ್ಕಾಗಿ ಮಲಗಿದ್ದರು. ಅಶಕ್ತರಾದವುಯುಕ್ತವಲ್ಲ.

ಮೂ ॥ ತತ್ರಾಜಗಾಮ ಸ ವಿಭೀಷಣನಾಮಧೇಯೋ
ರಕ್ಷಃಪತೇರವರಜೋಽಪ್ಯಥ ರಾವಣೇನ ।
ಭಕ್ತ್ಯೋಽಧಿಕಂ ರಘುಪತಾವಿ (ವ) ತಿ ಧರ್ಮನಿಷ್ಠ-
ಸ್ತ್ಯಕ್ತೋ ಜಗಾಮ ಶರಣಂ ಚ ರಘೂತ್ತಮಂ ತಂ ॥೩॥

ಅ ॥ ಮಲಗಿದನಂತರದಲ್ಲಿ ರಾವಣನ ತಮ್ಮನಾದಾಗ್ಯೂ ರಾಮಚಂದ್ರದೇವರಲ್ಲಿ ಅತ್ಯಂತ ಭಕ್ತಿಯುಕ್ತನಾದ ಅತ್ಯಂತವಾಗಿ ಧರ್ಮದಲ್ಲಿ ಆಸಕ್ತನಾದ ಕಾರಣದಿಂದಲೇ ಈ ರಾವಣನಿಂದ ಬಿಡಲ್ಪಟ್ಟ ಆ ವಿಭೀಷಣ ಎಂದು ಹೆಸರುಳ್ಳವನು ಶ್ರೀರಾಮನು ಮಲಗಿಕೊಂಡಿದ್ದ ಸ್ಥಳಕ್ಕೆ ಬಂದನು. ಆ ರಘುಶ್ರೇಷ್ಠರಾದ ರಾಮಚಂದ್ರದೇವರನ್ನು ರಕ್ಷಕರನ್ನಾಗಿಯೂ ಕೂಡ ಹೊಂದಿದನು ॥೩॥

ಮೂ ॥ ಬ್ರಹ್ಮಾತ್ಮಜೇನ ರವಿಜೇನ ಬಲಪ್ರಣೇತ್ರಾ
ನೀಲೇನ ಮೈಂದವಿವಿದಾಂಗದತಾರಪೂರ್ವೈಃ
ಸರ್ವೈಶ್ಚ ಶತ್ರುಸದನಾದುಪಯಾತ ಏಷ
ಭ್ರಾತಾಸ್ಯ ನ ಗ್ರಹಣಯೋಗ್ಯ ಇತಿ ಸ್ಥಿರೋಕ್ತಃ ॥೪॥

ಅ ॥ ಬ್ರಹ್ಮಪುತ್ರನಾದ ಜಾಂಬವಂತರಿಂದಲೂ, ಸೂರ್ಯ ಪುತ್ರನಾದ ಸುಗ್ರೀವ ನಿಂದಲೂ, ಬಲಪ್ರೇರಕನಾದ (ಅಂದರೆ ಸೇನಾಪತಿಯಾದ) ನೀಲನಿಂದಲೂ, ಮೈಂದ, ವಿವಿದ, ಅಂಗದ, ತಾರ ಇವರೇ ಮೊದಲಾಗಿ ಉಳ್ಳ ಎಲ್ಲಾ ಕಪಿಗಳಿಂದಲೂ, ಶತ್ರುವಾದ ರಾವಣನ ಮನ ದ್ದೆಶೆಯಿಂದ ಬಂದ ಈ ವಿಭೀಷಣನು ರಾವಣನ ಸಹೋದರನು (ಇವನನ್ನು) ಸ್ವೀಕಾರ ಮಾಡ ಕೂಡದು. ಈ ಪ್ರಕಾರ ಸ್ಥಿರವಾಗಿ ಹೇಳಲ್ಪಟ್ಟನು. (ಅಂದರೆ ಜಾಂಬವಂತನೇ ಮೊದಲಾಗಿ ಉಳ್ಳವರು ವಿಭೀಷಣನನ್ನು ಸ್ವೀಕಾರಮಾಡಕೂಡದು. ಎಂದು ಹೇಳಿದರು) ॥೪॥

ಮೂ ॥ ಅತ್ರಾಹ ರೂಪಮಪರಂ ಬಲದೇವತಾಯಾ
ಗ್ರಾಹ್ಯಃ ಸ ಏವ ನಿತರಾಂ ಶರಣಂ ಪ್ರಸನ್ನಃ ॥
ಭಕ್ತಶ್ಚ ರಾಮಪದಯೋರ್ವಿನಿಶಿಷ್ಟು ರಕ್ಷೋ
ವಿಜ್ಞಾಯ ರಾಜ್ಯಮುಪಭೋಕ್ತುಮಿಹಾಭಿಯಾತಃ ॥೫॥

ಅ ॥ ಅದೇ ಸಮಯದಲ್ಲಿ ಸಾಮರ್ಥ್ಯಕ್ಕೆ ದೇವತೆಯಾದ ವಾಯುದೇವರ ಎರಡನೆ ಯದ್ದಾದ ರೂಪವು(ಅಂದರೆ ಅವತಾರ ಭೂತವಾದ ಹನುಮದ್ರೂಪವು) ವಿಭೀಷಣನ ವಿಷಯದಲ್ಲಿ ಹೇಳಿತು. (ಅಂದರೆ ಹನುಮಂತನು ಹೇಳಿದನು) ಆ ವಿಭೀಷಣನು ರಕ್ಷಕನನ್ನಾಗಿ ಹೊಂದಿದ ವನೂ ರಾಮಪಾದಗಳಲ್ಲಿ ಅತ್ಯಂತ ಭಕ್ತಿಯುಳ್ಳವನೂ ಕೂಡ ಆಗಿರುತ್ತಾನೆ. ಶೀಘ್ರದಲ್ಲಿ ನಾಶವನ್ನು ಹೊಂದತಕ್ಕ ರಾಕ್ಷಸನಾದ ರಾವಣನನ್ನು ತಿಳಿದು (ಅಂದರೆ ರಾವಣನು ಶೀಘ್ರದಲ್ಲಿ ಸಾಯುತ್ತಾ ನೆಂದು ತಿಳಿದು) (ಲಂಕಾ ಪಟ್ಟಣದಲ್ಲಿ) ರಾಜ್ಯವನ್ನು ಭೋಗಿಸುವುದಕ್ಕೋಸ್ಕರ ರಾಮಸಮೀಪ ಕುರಿತು ಬಂದಿದ್ದಾನೆ. (ಆದುದರಿಂದ ಇವನು ಸ್ವೀಕಾರಮಾಡುವುದಕ್ಕೋಸ್ಕರ ಯೋಗ್ಯನ ವನು ಎಂದು ಹೇಳಿದನು.) ॥೫॥

ಮೂ ॥ ಇತ್ಯುಕ್ತವತ್ಯಥ ಹನೂಮತಿ ದೇವದೇವಃ
ಸಂಗೃಹ್ಯ ತದ್ವಚನಮಾಹ ಯಥೈವ ಪೂರ್ವಂ ॥
ಸುಗ್ರೀವಹೇತುತ ಇಮಂ ಸ್ಥಿರಮಾಗ್ರಹೀಷ್ಯೇ
ಪಾದಪ್ರಸನ್ನಮಿದಮೇವ ಸದಾ ವ್ರತಂ ಮೇ ॥೬॥

ಅ ॥ ಈ ಪ್ರಕಾರ ಹನುಮಂತನು ಹೇಳುತ್ತಿರಲು, ಹನುಮಂತನು ಹೇಳಿದ ಮೇಲೆ ದೇವತೆ ಗಿಗೂ ಸ್ವಾಮಿಯಾದ ರಾಮಚಂದ್ರ ದೇವರು ಹೇಗೆ ಮೊದಲು ಸುಗ್ರೀವ ನಿಮಿತ್ತವಾಗಿ ಹನುಮಂತನ

ವಚನವನ್ನು (ಕೇಳಿದ್ದಾನೋ ಹಾಗೆಯೇ ಹನುಮಂತದೇವರ ವಚನವನ್ನು ವಿಭೀಷಣನ ಸ್ವೀಕಾರ ವಿಷಯದಲ್ಲಿಯೂ) ಸ್ವೀಕಾರಮಾಡಿ ಪಾದಗಳಲ್ಲಿ ಶರಣಾಗತನಾದ (ಅಂದರೆ ರಾಮಚಂದ್ರದೇವರ ದಾಸನಾದ) ವಿಭೀಷಣನನ್ನು ನಿಶ್ಚಯವಾಗಿಯೂ ಸ್ವೀಕಾರಮಾಡುತ್ತೇನೆ (ಅಂದರೆ ಶರಣಾಗತ ರನ್ನು ಸ್ವೀಕಾರಮಾಡತಕ್ಕದ್ದೇ ಯಾವಾಗಲೂ ನನ್ನ ವ್ರತವು) ||೬||

ಮೂ || ಸಬ್ರಹ್ಮಕಾಃ ಸುರಗಣಾಃ ಸಹದೈತ್ಯಮರ್ತ್ಯಾಃ
ಸರ್ವೇ ಸಮೇತ್ಯ ಚ ಪದಾಂಗುಲಿಚಾಲನೇ ಽಪಿ ।
ನೇಶಾ ಭಯಂ ನ ಮಮ ರಾತ್ರಿಚರಾದಮುಷ್ಮಾ-
ಚ್ಛುದ್ಧಸ್ವಭಾವ ಇತಿ ಚೈನಮಹಂ ವಿಜಾನೇ ||೭||

ಅ || ದೈತ್ಯರು ಮನುಷ್ಯರು ಇವರುಗಳಿಂದ ಕೂಡಿದ, ಬ್ರಹ್ಮದೇವರಿಂದಲೂ ಕೂಡಿದ ದೇವತೆಗಳ ಸಮೂಹಗಳು ಎಲ್ಲರೂ ಮಿಲಿತರಾಗಿ ಬಂದರೂ ಕೂಡ ನನ್ನ ಬೆರಳನ್ನು ಹಂದಾಡಿ ಸುವ ವಿಷಯದಲ್ಲಿಯೂ ಕೂಡ ಸಮರ್ಥರಾಗಲಾರರು. (ಆದುದರಿಂದ) ಈ ರಾತ್ರಿಚರ ನಾದ ವಿಭೀಷಣನ ದೆಶೆಯಿಂದ ನನಗೆ ಭಯವಿಲ್ಲ. (ಈಗ ತನಗೆ ಭಯವಿಲ್ಲವೆಂದು ಹೇಳಿ ಕಪಿ ಗಳ ಭಯವನ್ನು ಪರಿಹರಿಸುತ್ತಾರೆ.) (ಇವನು) ನಿಷ್ಕಪಟವಾದ ಸ್ವಭಾವವುಳ್ಳವನು. ಈ ಪ್ರಕಾರ ವಾಗಿ ವಿಭೀಷಣನನ್ನು ನಾನು ತಿಳಿಯುತ್ತೇನೆ. ||೭||

ಮೂ || ಇತ್ಯುಕ್ತವಾಕ್ಯ ಉತ ತಂ ಸ್ವಜನಂ ವಿಧಾಯ
ರಾಜ್ಯೇಽಭ್ಯಷೇಚಯದಪಾರಸುಸತ್ವರಾಶಿಃ ||
ಮತ್ವಾ ತೃಣೋಪಮಮಶೇಷಸದಂತಕಂ ತಂ
ರಕ್ಷಃಪತೇರ (ತಿಂತ್ವ) ವರಜಸ್ಯ ದದೌ ಸ ಲಂಕಾಂ ||೮||

ಅ || ಈ ಪ್ರಕಾರವಾಗಿ ಹೇಳಲ್ಪಟ್ಟ ಮಾತುಳ್ಳ ಅಪರಿಮಿತವಾದ ಸ್ವಾಭಾವಿಕವಾದ ಬಲಕ್ಕೆ ರಾಶಿಭೂತನಾದ ರಾಮನು ಆ ವಿಭೀಷಣನನ್ನು ತನ್ನ ಸೇವಕನನ್ನಾಗಿ ಮಾಡಿ ಅನಂತರ ದಲ್ಲಿ ರಾವಣನ ರಾಜ್ಯದಲ್ಲಿ ಅಭಿಷೇಕ ಮಾಡಿದನು. (ಹಾಗಾದರೆ ಅಣ್ಣನಾದ ರಾವಣನು ಜೀವಿಸಿ ಕೊಂಡು ಇರುವಾಗಲೇ ಪಟ್ಟಾಭಿಷೇಕ ಹೇಗೆ ಮಾಡಿದರು ಎಂದರೆ-) ರಾಮನು ಎಲ್ಲಾ ಸಜ್ಜನರು ಗಳಿಗೆ ನಾಶಕನಾದ ರಾವಣನನ್ನು ಹುಲ್ಲಿಗೆ ಸದೃಶನನ್ನಾಗಿ ತಿಳಿದು ರಾಕ್ಷಸಸ್ವಾಮಿಯಾದ ರಾವಣನ ತಮ್ಮನಾದ ವಿಭೀಷಣನಿಗೆ ಲಂಕಾಪಟ್ಟಣವನ್ನು ಕೊಟ್ಟನು ||೮||

ಮೂ || ಕಲ್ಪಾಂತಮಸ್ಯ ನಿಶಿಚಾರಪತಿತ್ವಪೂರ್ವಂ
ಆಯುಃ ಪ್ರದಾಯ ನಿಜಲೋಕಗತಿಂ ತದಂತೇ ||
ರಾತ್ರಿತ್ರಯೇಽಪ್ಯನುಪಗಾಮಿನಮೀಕ್ಷ್ಯ ಸೋಽಬ್ಧಿಂ
ಚುಕ್ರೋಧ ರಕ್ತನಯನಾಂತಮಯುಂಜದಬ್ಧೌ ||೯||

ಅ || ವಿಭೀಷಣನಿಗೆ ರಾಕ್ಷಸಸ್ವಾಮಿತ್ವವನ್ನೂ, ಮೊದಲು ಹೇಗೆ ಇತ್ತೋ ಹಾಗೆಯೇ ಬ್ರಹ್ಮದಿನಕಲ್ಪಪರ್ಯಂತರವಾದ ಆಯುಷ್ಯವನ್ನು ಕೊಟ್ಟು, ಬ್ರಹ್ಮಪ್ರಲಯದ ಅವ್ಯಹಿತ ಪೂರ್ವದಿನದಲ್ಲಿ (ಅಂದರೆ ವಿಭೀಷಣನ ಆಯುಷ್ಯಾನಂತರದಲ್ಲಿ) ತನ್ನ ಲೋಕಗಮನವನು

ಕೊಟ್ಟು ಮೂರು ರಾತ್ರಿಯಾದರೂ ಬಾರದೆ ಇರತಕ್ಕ ಸಮುದ್ರರಾಜನನ್ನು ನೋಡಿ ರಾಮನು ಕೋಪಗೊಂಡನು. ಕೆಂಪಾದ ಕಡೆಗಣ್ಣನ್ನು ಸಮುದ್ರದಲ್ಲಿ ನಿಯೋಗಿಸಿದನು.) (ಅಂದರೆ ಕೋಪದಿಂದ ಕೆಂಪಾದ ಕಣ್ಣಿನಿಂದ ಸಮುದ್ರರಾಜನನ್ನು ನೋಡಿದನು.) ॥೯॥

ಮೂ ॥ ಸಕ್ರೋಧದೀಪ್ತನಯನಾಂತಹತಃ ಪರಸ್ಯ
ಶೋಷಂ ಕ್ಷಣಾದುಪಗತೋ ದನುಜಾದಿಸತ್ತ್ವೈಃ ॥
ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ
ಪಾದಾರವಿಂದಮುಪಗಮ್ಯ ಬಭಾಷ ಏತತ್ ॥೧೦॥

ಅ ॥ ಸರ್ವೋತ್ತಮನಾದ ರಾಮನ ಕೋಪದಿಂದ ಪ್ರಕಾಶಮಾನವಾದ ಕಡೆಗಣ್ಣಿನಿಂದ ಸಂಪರಿಶಿಕೊಳ್ಳಲ್ಪಟ್ಟ ಆ ಸಮುದ್ರರಾಜನು ದಾನವರೇ ಮೊದಲಾಗಿ ಉಳ್ಳ ಜಲಚರ ಪ್ರಾಣಿಗಳಿಂದ (ಕೂಡಿಕೊಂಡು) ಒಣಗುವಿಕೆಯನ್ನು ಕ್ಷಣಮಾತ್ರದ್ದೆಶೆಯಿಂದ ಪ್ರಾಪಿಸಿ ವರುಣರೂಪವನ್ನು ತಾಳಿ ಶಿರಸ್ಸಿನಲ್ಲಿ ಪೂಜಾ ಸಾಹಿತ್ಯವನ್ನು ಹಿಡಿದುಕೊಂಡು (ರಾಮಚಂದ್ರ ದೇವರ) ಪಾದದ ಬಾಪವನ್ನು ಹೊಂದಿ ಈ ಮಾತನ್ನು ಹೇಳಿದನು. ॥೧೦॥

ಮೂ ॥ ಶಂ ತ್ವಾ ವಯಂ ಜಡಧಿಯೋ ನ ವಿದಾಮ ಭೂಮನ್
ಕೂಟಸ್ಥಮಾದಿಪುರುಷಂ ಜಗತಾಮಧೀಶಂ ॥
ತ್ವಂ ಸತ್ತ್ವತಃ ಸುರಗಣಾನ್ರಜಸೋ ಮನುಷ್ಯಾಂ
ಸ್ತಾಮಸತೋಽಸುರಗಣಾನಭಿತಸ್ತಥಾಸ್ರಾಃ ॥೧೧॥

ಅ ॥ ಪೂರ್ಣನಾದ ಶ್ರೀಹರಿಯೇ! ಜಡಕ್ಕೆ ಸದೃಶವಾದ ಬುದ್ಧಿಯುಳ್ಳ ನಾವು ನಿರ್ವಿಕಾರನಾದ ಪ್ರಸಿದ್ಧನಾದ ಲೋಕಗಳಿಗೆ ಸ್ವಾಮಿಯಾದ ಆದಿಪುರುಷನಾದ ನಿನ್ನನ್ನು ತಿಳಿಯುವುದಿಲ್ಲ. ನೀನು ಸತ್ವಗುಣದ್ದೆಶೆಯಿಂದ ದೇವಗಣಗಳನ್ನು ಸೃಷ್ಟಿಮಾಡಿದ್ದಿ. ರಜೋಗುಣದ್ದೆಶೆಯಿಂದ ಮನುಷ್ಯರನ್ನು (ಸೃಷ್ಟಿಮಾಡಿದ್ದಿ.) ಮೂರನೇ ಗುಣದ್ದೆಶೆಯಿಂದ (ಅಂದರೆ ತಮೋಗುಣದೆಶೆಯಿಂದ) ದೈತ್ಯಸಮೂಹವನ್ನು ಸರ್ವ ಕಲ್ಪಗಳಲ್ಲಿಯೂ ಸೃಷ್ಟಿಮಾಡಿದ್ದಿ.

**ವಿಶೇಷಾಂಶ** — ಸತ್ವಗುಣದೆಶೆಯಿಂದ ಸೃಷ್ಟಿಸಲ್ಪಟ್ಟ ದೇವತೆಗಳಲ್ಲಿ ತಮೋಗುಣದ ಕಾರ್ಯವಾದ ಅಜ್ಞಾನವು ಅಸುರಾವೇಶನಿಮಿತ್ತವು, ಸ್ವಾಭಾವಿಕವಲ್ಲವೆಂದು ಸೂಚಿಸುವುದಕ್ಕಾಗಿ 'ತ್ವಂ ಸತ್ವತಃ' ಇತ್ಯಾದಿಯು ಹೇಳಲ್ಪಟ್ಟಿತು ॥೧೧॥

ಮೂ ॥ ಕಾಮಂ ಪ್ರಯಾಹಿ ಜಹಿ ವಿಶ್ರವಸೋಽವಮೇಹಂ
ತ್ರೈಲೋಕ್ಯರಾವಣಮವಾಪ್ನುಹಿ ವೀರಪತ್ನೀಂ ॥
ಬಧ್ನೀಹಿ ಸೇತುಮಿಹ ತೇ ಯಶಸೋ ವಿತತ್ಯೈ
ಗಾಯಂತಿ ದಿಗ್ವಿಜಯಿನೋಽಯಮುಪೇತ್ಯ ಭೂಪಾಃ ॥೧೨॥

ಅ ॥ ಇಚ್ಛಾನುಸಾರವಾಗಿ (ಲಂಕಾಪಟ್ಟಣವನ್ನು ಕುರಿತು) ಹೋಗು. ಎಲೋ ವೀರನೇ ಮೂರು ಲೋಕವನ್ನು ಶಬ್ದಮಾಡಿಸತಕ್ಕ ಅಂದರೆ ರೋದನಮಾಡಿಸತಕ್ಕ ವಿಶ್ರವಸುನಮಗನಾದ

ಮೇಧ್ಯಸ್ಥಾನೀಯನಾದ (ಅಂದರೆ ಋಷಿಯ ಹೊಟ್ಟೆಯಿಂದ ಅಮೇಧ್ಯವಂತೆ ಕೆಳಗೆ ಬಿದ್ದಿರುತ್ತಾನೆ. ಪುತ್ರತ್ವಕ್ಕೆ ಯೋಗ್ಯನಲ್ಲ. ಇಂತಹ) ಆ ರಾವಣನನ್ನು ಸಂಹಾರಮಾಡು. ಹೆಂಡತಿಯಾದ ಸೀತಾಕೃತಿಯನ್ನು ಹೊಂದು. ನಿನ್ನ ಯಶಸ್ಸಿನ ವಿಸ್ತಾರಕ್ಕೋಸ್ಕರ ನಾನು ಇರತಕ್ಕ ಸಮುದ್ರದಲ್ಲಿ ಸೇತುವನ್ನು ಬಂಧನಮಾಡು. ಯಾವ ಸೇತುವನ್ನು (ಅಂದರೆ ನೀನು ಕಟ್ಟಿದ ಸೇತುವನ್ನು) ಸಮಸ್ತ ದಿಕ್ಕುಗಳಲ್ಲಿಯೂ ಜಯವುಳ್ಳ ರಾಜರು ಹೊಂದಿ (ಸೇತುವೆಯನ್ನು ಕಟ್ಟಿಸಿದ ನಿನ್ನ ಯಶಸ್ಸನ್ನು) ಸ್ತೋತ್ರಮಾಡುತ್ತಾರೆ. (ಈ ಪ್ರಕಾರ ವರುಣರೂಪವನ್ನು ಧರಿಸಿ ಹೇಳಿದನು)॥೧೨॥

ಮೂ ॥ ಇತ್ಯುಕ್ತವಂತಮನುಮಮಾಸ್ಯನುಗೃಹ್ಯ ಬಾಣಂ
ತಸ್ಯೈ ಧೃತಂ ದಿತಿಸುತಾತ್ಮಸು ಚಾಂತ್ಯಜೇಷು ॥
ಶಾರ್ವಾದ್ವರಾದ್ವಿಗತಮೃತ್ಯುಷು ದುರ್ಜಯೇಷು
ನಿಃಸಂಖ್ಯಕೇಷ್ವಮುಚದಾಶು ದದಾಹ ಸರ್ವಾನ್ ॥೧೩॥

ಅ ॥ (ರಾಮನು) ಈ ಪ್ರಕಾರ ಹೇಳತಕ್ಕ ಈ ಸಮುದ್ರರಾಜನನ್ನು ಬೇಗನೆ ಅನುಗ್ರಹಮಾಡಿ ಆ ಸಮುದ್ರರಾಜನಿಗೋಸ್ಕರ (ಅಂದರೆ ಸಮುದ್ರಕ್ಕೆ ಬಿಡುವುದಕ್ಕೋಸ್ಕರ ಸ್ವೀಕಾರ ಮಾಡಲ್ಪಟ್ಟ ಬಾಣವನ್ನು) ರುದ್ರದೇವರ ವರದೆಶೆಯಿಂದ ಮೃತ್ಯುವಿಲ್ಲದೆ ಇರತಕ್ಕ ಜಯಿಸುವುದಕ್ಕೋಸ್ಕರ ಅಶಕ್ಯರಾದ, ಅಪರಿಮಿತವಾದ, ದೈತ್ಯಸ್ವರೂಪರಾದ ಚಂಡಾಲರಲ್ಲಿ ಬಿಟ್ಟನು. ಬೇಗನೆ (ಅಂದರೆ ಬಿಟ್ಟಕೂಡಲೆ) ಎಲ್ಲಾ ಅಂತ್ಯಜರನ್ನೂ ಕೂಡ ಸುಟ್ಟಿತು. (ಅಂದರೆ ತಾನು ಎತ್ತಿದ ಬಾಣದಿಂದ ಆ ಚಂಡಾಲರನ್ನೆಲ್ಲಾ ಸಂಹಾರಮಾಡಿದನು.) ॥೧೩॥

ಮೂ ॥ ಕೃತ್ವೇರಿಣಂ ತದಥ ಮೂಲಫಲಾನಿ ಚಾತ್ರ
ಸಮ್ಯಗ್ವಿಧಾಯ ಭವತಪ್ತುರಮೋಘಚೇಷ್ಟಃ ॥
ಬದ್ಧುಂ ದಿದೇಶ ಸುರವರ್ಧಕಿನೋऽವತಾರಂ
ತಜ್ಜಂ ನಲಂ ಹರಿವರಾನಪರಾಂಶ್ಚ ಸೇತುಂ ॥೧೪॥

ಅ ॥ ಸಂಸಾರಕ್ಕೆ ನಾಶಕನಾದ (ಅಂದರೆ ತನ್ನಿಂದ ಮಾಡಲ್ಪಟ್ಟ ಕರ್ಮಶ್ರವಣಾದಿಗಳಿಂದ ಭಕ್ತರ ಸಂಸಾರವನ್ನು ನಾಶಮಾಡತಕ್ಕ) ಅಮೋಘವಾದ ವ್ಯಾಪಾರವುಳ್ಳ ರಾಮನು ಪ್ರಸಿದ್ಧ ಹೊಯಿಗೆ ಪ್ರದೇಶವನ್ನು (ಅಂದರೆ ಮರುಭೂಮಿಯನ್ನು) ಸಮೀಚೀನ ಭೂಮಿಯನ್ನಾಗಿ ಮಾಡಿ (ಅಂದರೆ ಒಳ್ಳೇ ಪ್ರದೇಶಮಾಡಿ) ಈ ಭೂಮಿಯಲ್ಲಿ ಗೆಡ್ಡೆ-ಗೆಣಸುಗಳನ್ನೂ ಕೂಡ ಚೆನ್ನಾಗಿ ಬೆಳೆಯಿಸಿ ಅಥವಾ ಈ ದಕ್ಷಿಣ ಸಮುದ್ರತೀರದಲ್ಲಿ ಪ್ರಸಿದ್ಧವಾದ ಕಂಟಕತೃಣವನ್ನು (ಕೃತ್ವಾ) ಛೇದಿಸಿ ಚೆನ್ನಾಗಿ ಮೂಲ ಫಲಗಳನ್ನು ಬೆಳೆಯಿಸಿ ಸೇತುವೆಯನ್ನು ಕಟ್ಟುವುದಕ್ಕೋಸ್ಕರ ದೇವತೆಗಳ ಬಡಗಿಯಾದ ವಿಶ್ವಕರ್ಮನ ಅವತಾರಭೂತನಾದ ಆ ವಿಶ್ವಕರ್ಮನಿಂದ ಹುಟ್ಟಿದ ನಲ ನಾಮಕ ಕಪಿಯನ್ನೂ ಬೇರೆ ಕಪಿಶ್ರೇಷ್ಠರನ್ನೂ ಕೂಡ ಅಪ್ಪಣೆಕೊಟ್ಟನು. ॥೧೪॥

ಮೂ ॥ ಬದ್ಧ್ವೋದಧೌ ರಘುಪತಿರ್ವಿವಿಧಾದ್ರಿ ಕೂಟೈಃ
ಸೇತುಂ ಕಪೀಂದ್ರಕರಕಂಪಿತಭೂರುಹಾಂಗೈಃ ॥
ಸುಗ್ರೀವನೀಲಹನುಮತ್ಪ್ರಮುಖೈರನೇ (ನೀ) ಕೈ-
ರ್ಲಂಕಾಂ ವಿಭೀಷಣದೃಶಾವಿಶದಾಶು ದಗ್ಧಾಂ ॥೧೫॥

ಅ ॥ ರಾಮಚಂದ್ರದೇವರು ಕಪಿಶ್ರೇಷ್ಠರ ಕೈಗಳಿಂದ ಪಂದಾಡಿಸಲ್ಪಟ್ಟ ಮರಗಳು ಅಂಗಗಳಲ್ಲಿ (ಅಂದರೆ ತನ್ನ ಅವಯವಸ್ಥಾನೀಯಗಳಾದ ಪ್ರದೇಶಗಳಲ್ಲಿ) ಉಳ್ಳ ನಾನಾಪ್ರಕಾರ ಗಳಾದ ಪರ್ವತಶಿಖರಗಳಿಂದ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ, ಸುಗ್ರೀವ-ನೀಲ-ಹನುಮಂತ ಇವರೇ ಮೊದಲಾಗಿವುಳ್ಳ ಸೈನ್ಯಗಳಿಂದ (ಕೂಡಿಕೊಂಡು) ವಿಭೀಷಣನು ತೋರಿಸಿದ ಮಾರ್ಗ ದಿಂದ ಕ್ರುದ್ಧನಾದ ವಿಭೀಷಣನ ದೃಷ್ಟಿಯಿಂದ ಸುಡಲ್ಪಟ್ಟಂತೆಯೇ ಆದ ಲಂಕಾಪಟ್ಟಣವನ್ನು ಅಥವಾ ವೈರಿಗಳಿಗೆ ಭಯಂಕರವಾದ ಕಣ್ಣಿನಿಂದ ಹನುಮಂತನಿಂದ ಸುಡಲ್ಪಟ್ಟ ಲಂಕಾಪಟ್ಟಣ ವನ್ನು ಬೇಗನೆ ಪ್ರವೇಶಮಾಡಿದನು. (ಅಂದರೆ ಸೇತುವೆ ಕಟ್ಟಿ ಎಲ್ಲರೂ ಲಂಕಾಪಟ್ಟಣವನ್ನು ಹೊಂದಿದರು.) ॥೧೫॥

ಮೂ ॥ ಪ್ರಾಪ್ತಂ ನಿಶಾಮ್ಯ ಪರಮಂ ಭುವನೈಕಸಾರಂ
ನಿಃಸೀಮಪೌರುಷಮನಂತಮಸೌ ದಶಾಸ್ಯಃ ॥
ತ್ರಾಸಾದ್ವಿಷಣ್ಣಹೃದಯೋ ನಿತರಾಂ ಬಭೂವ
ಕರ್ತವ್ಯ ಕರ್ಮವಿಷಯೇ ಚ ವಿಮೂಢಚೇತಾಃ ॥೧೬॥

ಅ ॥ ಹತ್ತು ತಲೆಯುಳ್ಳ ರಾವಣನು ಲೋಕಶ್ರೇಷ್ಠನಾದ (ಅಂದರೆ ಕೇವಲ ಬಲಸ್ವರೂಪ ನಾದ) ಅವಧಿಯಿಲ್ಲದ ಇರತಕ್ಕ ಪೌರುಷವುಳ್ಳ ನಾಶರಹಿತನಾದ ಸರ್ವೋತ್ತಮನಾದ ರಾಮಚಂದ್ರ ನನ್ನ ಬಂದವನನ್ನಾಗಿ ಕೇಳಿ (ಅಂದರೆ ರಾಮಚಂದ್ರದೇವರು ಲಂಕಾಪಟ್ಟಣಕ್ಕೆ ಬಂದರು ಎಂದು ಕೇಳಿ) ಭಯದಿಂದ ದುಃಖಯುಕ್ತವಾದ ಮನಸ್ಸುಳ್ಳವನಾದನು, (ಅಂದರೆ ಭಯದಿಂದ ಅತ್ಯಂತ ದುಃಖವನ್ನು ಹೊಂದಿದನು) ಮುಂದೆ ಮಾಡತಕ್ಕ ಕೆಲಸವಿಷಯದಲ್ಲಿಯೂ ಸ್ಮೃತಿ ರಹಿತವಾದ ಮನಸ್ಸುಳ್ಳವನಾಗಿಯೂ ಕೂಡ ಆದನು (ಅಂದರೆ ಇನ್ನು ಮುಂದಕ್ಕೆ ಯಾವ ಕೆಲಸ ವನ್ನು ಮಾಡಬೇಕಂತ ಅವನಿಗೆ ತಿಳಿಯಲಿಲ್ಲ.) ॥೧೬॥

ಮೂ ॥ ಪ್ರಸ್ಥಾಪ್ಯ ವಾಲಿಸುತಮೇವ ಚ ರಾಜನೀತ್ಯೈ
ರಾಮಸ್ತದುಕ್ತವಚನೇಽಪ್ಯಮುನಾಽಗೃಹೀತೇ ॥
ದ್ವಾರೋ ರುರೋಧ ಸ ಚತಸ್ರ ಉದೀರ್ಣಸೈನ್ಯೋ
ರಕ್ಷಃಪತೇಃ ಪುರ ಉದಾರಗುಣಃ ಪರೇಶಃ ॥೧೭॥

ಅ ॥ ಉತ್ಕೃಷ್ಟವಾದ ಸೈನ್ಯವುಳ್ಳ, ಉತ್ತಮವಾದ ಗುಣವುಳ್ಳ, ಸರ್ವೋತ್ತಮರಾದ ಲಕ್ಷ್ಮ್ಯಾದಿಗಳಿಗೂ ಸ್ವಾಮಿಯಾದ ರಾಮಚಂದ್ರದೇವರು ರಾಜರ ನೀತಿಗೋಸ್ಕರವೇ (ಅಂದರೆ ಸಂಧಾನವಚನವನ್ನು ಕೇಳುವುದಿಲ್ಲವೆಂದು ಮೊದಲೇ ತಿಳಿದಿರುತ್ತಾನೆ.) ಅಂಗದನನ್ನು ಕಳುಹಿಸಿಕೊಟ್ಟರೂ ಈ ರಾವಣನಿಂದ ಅಂಗದನಿಂದ ಹೇಳಲ್ಪಟ್ಟ ವಚನವು ಸ್ವೀಕಾರಮಾಡ ಲ್ಪಡದೆ ಇರುತ್ತಿರಲು ರಾವಣನ ಪಟ್ಟಣದ ನಾಲ್ಕು ಬಾಗಿಲುಗಳನ್ನೂ ಕೂಡ ತಡೆದನು. ॥೧೭॥

ಮೂ ॥ ದ್ವಾರಾಂ ನಿರೋಧಸಮಯೇ ಸ ದಿದೇಶ ಪುತ್ರಂ
ನಾರಾಂತಕೇರ್ದಿಶಿ ಸುರೇಶ್ವರಶತ್ರುಮುಗ್ರಂ ॥
ಪ್ರಾಚ್ಯಾಂ ಪ್ರಹಸ್ತಮುದೀಚ್ಯದಿಶಿ ವಜ್ರದಂಷ್ಟ್ರಂ
ಪ್ರೇತಾಧಿಪಸ್ಯ ಶಶಿನಃ ಸ್ವಯಮೇವ ಚಾಗಾತ್ ॥೧೮॥

ಅ || ಆ ರಾವಣನು ಪಟ್ಟಣದ ಬಾಗಿಲುಗಳನ್ನು ತಡಿಯುವ ಸಮಯದಲ್ಲಿ ನೀರುಗಳಿಗೆ ಸ್ವಾಮಿಯಾದ ವರುಣನ ದಿಕ್ಕಿನಲ್ಲಿ (ಅಂದರೆ ಪಶ್ಚಿಮದಿಕ್ಕಿನಲ್ಲಿ) ದೇವಶ್ರೇಷ್ಠನಾದ ಇಂದ್ರನಿಗೆ ಶತ್ರುಭೂತನಾದ ಸಹಿಸಲಿಕ್ಕೆ ಅಶಕ್ಯನಾದ ತನ್ನ ಮಗನಾದ ಇಂದ್ರಜಿತುವನ್ನು ಅಪ್ಪಣೆಕೊಟ್ಟನು. ಪೂರ್ವದಿಕ್ಕಿನಲ್ಲಿ ಪ್ರಹಸ್ತನನ್ನು ಆಜ್ಞಾಪಿಸಿದನು. ದಕ್ಷಿಣದಿಕ್ಕಿನಲ್ಲಿ ವಜ್ರದಂಷ್ಟ್ರನನ್ನು ಅಪ್ಪಣೆ ಕೊಟ್ಟನು. ಉತ್ತರದಿಕ್ಕಿಗೆ ತಾನೇ ಹೋದನು. ||೧೮||

ಮೂ || ವಿಜ್ಞಾಯ ತತ್ಸ ಭಗವಾನ್ಹನುಮಂತಮೇವ
ದೇವೇಂದ್ರಶತ್ರುವಿಜಯಾಯ ದಿದೇಶ ಚಾಶು ||
ನೀಲಂ ಪ್ರಹಸ್ತನಿಧನಾಯ ಚ ವಜ್ರದಂಷ್ಟ್ರಂ
ಹಂತುಂ ಸುರೇಂದ್ರಸುತಸೂನುಮಥಾದಿದೇಶ ||೧೯||

ಅ || ಆ ರಾಮಚಂದ್ರದೇವರು ಅದನ್ನು ತಿಳಿದು (ಅಂದರೆ ರಾವಣನು ಇಂಥಾ ದಿಕ್ಕಿನಲ್ಲಿ ಇಂಥವರನ್ನು ಆಜ್ಞಾಪಿಸಿದ್ದಾನೆ ಎಂದು ತಿಳಿದು) ಇಂದ್ರಶತ್ರುವಾದ ಇಂದ್ರಜಿತುವನ್ನು ಗೆಲ್ಲುವುದ ಕ್ಕೋಸ್ಕರ ಬೇಗನೆ ಹನುಮಂತನನ್ನೇ ಅಪ್ಪಣೆಕೊಟ್ಟನು. ಪ್ರಹಸ್ತನನ್ನು ಕೊಲ್ಲುವುದಕ್ಕೋಸ್ಕರ ನೀಲನನ್ನೂ, ವಜ್ರದಂಷ್ಟ್ರನನ್ನು ಕೊಲ್ಲುವುದಕ್ಕೋಸ್ಕರ ಇಂದ್ರನ ಮಗನಾದ ವಾಲಿಯಪುತ್ರನಾದ ಅಂಗದನನ್ನೂ ಅಪ್ಪಣೆಕೊಟ್ಟನು. (ಅಂದರೆ ಇಂದ್ರನ ಮಗನು ವಾಲಿಯು; ಅವನ ಮಗನಾದ ಅಂಗದನನ್ನು ವಜ್ರದಂಷ್ಟ್ರನನ್ನು ಕೊಲ್ಲುವುದಕ್ಕೋಸ್ಕರ ಕಳುಹಿಸಿದನು.)

**ವಿಶೇಷಾಂಶ**—(1) ಹನುಮಂತನ ಎದುರಿನಲ್ಲಿ ಇಂದ್ರಜಿತುವು ಹೆದರಿಕೆಯಿಂದ ಓಡಿಯೇ ಹೋಗುತ್ತಾನೆ. ಪ್ರಕೃತ ಇಂದ್ರಜಿತುವಿಗೆ ವಧವಿಲ್ಲವೆಂದು ಸೂಚಿಸುವುದಕ್ಕಾಗಿ 'ಇಂದ್ರಶತ್ರು ವಿಜಯಾಯ' ಎಂದು ಹೇಳಿದ್ದು. (2) ಪ್ರಹಸ್ತ-ವಜ್ರದಂಷ್ಟ್ರರಿಗೆ ಸಂಹಾರವೇ ಆಗುತ್ತದೆ; ಎನ್ನುವ ಅಭಿಪ್ರಾಯದಿಂದ 'ಪ್ರಹಸ್ತ ನಿಧನಾಯ' 'ವಜ್ರದಂಷ್ಟ್ರಂ ಹಂತುಂ' ಎಂದು ಹೇಳಿದ್ದು ||೧೯||

ಮೂ || ಮಧ್ಯೇ ಹರೀಶ್ವರವಧಿಜ್ಯಧನುರ್ನಿಯುಜ್ಯ
ಯಸ್ಯಾಂ ಸ ರಾಕ್ಷಸಪತಿರ್ದಿಶಮೇವ ತಾಂ ಹಿ ||
ಉದ್ದಿಶ್ಯ ಸಂಸ್ಥಿತ ಉಪಾತ್ತಶರಃ ಸ ಖಡ್ಗೀ
ದೇದೀಪ್ಯಮಾನವಪುರುತ್ತಮಪೂರುಷೋऽಸೌ ||೨೦||

ಅ || ಅಧಿರೋಪಿತವಾದ ಧನುಸ್ಸುಳ್ಳ ಬತ್ತಳಿಕೆಯಿಂದ ತೆಗೆಯಲ್ಪಟ್ಟ ಬಾಣವುಳ್ಳ ಖಡ್ಗ ದಿಂದ ಕೂಡಿದ ಪ್ರಕಾಶಮಾನವಾದ ಶರೀರವುಳ್ಳ ಪುರುಷಶ್ರೇಷ್ಠನಾದ ರಾಮಚಂದ್ರನು ಸುಗ್ರೀವ ನನ್ನು ಪೂರ್ವ-ದಕ್ಷಿಣದಿಕ್ಕಿನ ಮಧ್ಯದಲ್ಲಿ (ಅಂದರೆ ಆಗ್ನೇಯ ದಿಕ್ಕಿನಲ್ಲಿ ತನ್ನ ಸೈನ್ಯದ ಮಧ್ಯದಲ್ಲಿ) ಕೂಡಿಸಿ, ಯಾವ ಉತ್ತರ ದಿಕ್ಕಿನಲ್ಲಿ ರಾಕ್ಷಸಪತಿಯಾದ ರಾವಣನು ಇದ್ದಾನೋ ಆ ದಿಕ್ಕನ್ನೇ ಉದ್ದೇಶಿಕರಿಸಿಕೊಂಡು ನಿಂತನು. (ಅಂದರೆ ತಾನು ರಾವಣನ ಹತ್ತಿರ ಯುದ್ಧ ಮಾಡಲಿಕ್ಕೆ ಉತ್ತರದಿಕ್ಕಿನಲ್ಲಿಯೇ ನಿಂತನು) ||೨೦||

ಮೂ || ವಿದ್ರಾವಿತೋ ಹನುಮತೇಂದ್ರಜಿದಾಶು ಹಸ್ತಂ
ತಸ್ಯ ಪ್ರಸನ್ನ ಇವ ವೀರ್ಯಮಮುಷ್ಯ ಜಾನನ್ ||
ನೀಲೋ ವಿಭೀಷಣ ಉಭೌ ಶಿಲಯಾ ಚ ಶಕ್ತ್ಯಾ
ಸಂಚಕ್ರತುರ್ಯಮವಶಂ ಗಮಿತಂ ಪ್ರಹಸ್ತಂ ||೨೧||

ಅ ॥ ಈ ಹನುಮಂತನ ಸಾಮರ್ಥ್ಯವನ್ನು ತಿಳಿದ (ಅಂದರೆ ಲಂಕಾದಹನ ಮಾಡುವ ಕಾಲದಲ್ಲಿಯೇ ತಿಳಿದಿದ್ದ) ಇಂದ್ರಜಿತುವು ಬೇಗನೇ ಹನುಮಂತನ ಕೈಯನ್ನು ಹೊಂದಿದವನಂತೆ ಮಾಡಿ ಹನುಮಂತನಿಂದ ಓಡಿಸಿಕೊಳ್ಳಲ್ಪಟ್ಟನು. (ಅಂದರೆ ಹನುಮಂತನು ಓಡಿಸಿದನು) ನೀಲನು ಕಲ್ಲಿನಿಂದಲೂ, ವಿಭೀಷಣನು ಶಕ್ತಿಯಿಂದಲೂ ಕೂಡ ಇವರಿಬ್ಬರು ಪ್ರಹಸ್ತನನ್ನು ಯಮ ವಶಕ್ಕೆ ಹೋದವನನ್ನಾಗಿ ಮಾಡಿದರು. (ಅಂದರೆ ಪ್ರಹಸ್ತನನ್ನು ಕೊಂದರು) ॥೨೦॥

ಮೂ ॥ ನೀಲಸ್ಯ ನೈವ ವಶಮೇತಿ ಸ ಇತ್ಯನೋಘ
ಶಕ್ತ್ಯಾ ವಿಭೀಷಣ ಇಮಂ ಪ್ರಜಹಾರ ಸಾಕಂ ।
ತಸ್ಮಿನ್ಹತೇಽಂಗದ ಉಪೇತ್ಯ ಜಘಾನ ವಜ್ರ-
ದಂಷ್ಟ್ರಂ ನಿಪಾತ್ಯ ಭುವಿ ಶೀರ್ಷಮುಪಾಂಪ್ಯ ಮೃತ್ಯನ್ ॥೨೨॥

ಅ ॥ ಆ ಪ್ರಹಸ್ತನು ನೀಲನಾಮಕನಾದ ಕಪಿಯ. ಅಧೀನವನ್ನು ಹೊಂದುವುದಿಲ್ಲ. ವಿಭೀಷಣನು ಈ ಪ್ರಕಾರ (ತಿಳಿದು) ನೀಲನಿಂದ ಕೂಡಿಕೊಂಡೇ ಅಮೋಘವಾದ ಶಕ್ತ್ಯಾಖ್ಯ ಆಯುಧದಿಂದ ಪ್ರಹಸ್ತನನ್ನು ಸಂಹಾರಮಾಡಿದನು. ಪ್ರಹಸ್ತನು ಸತ್ತ ಕೂಡಲೇ ಅಂಗದನು ವಜ್ರದಂಷ್ಟ್ರನನ್ನು ಹೊಂದಿ, ಭೂಮಿಯಲ್ಲಿ ಕೆಡಹಾಕಿ, ಈ ವಜ್ರದಂಷ್ಟ್ರನ ಶಿರಸ್ಸನ್ನು ಮರ್ದಿಸುವವನಾಗಿ ಸಂಹಾರಮಾಡಿದನು ॥೨೨॥

ಮೂ ॥ ಸರ್ವೇಷು ತೇಷು ನಿಹತೇಷು ದಿದೇಶ ಧೂಮ್ರ-
ನೇತ್ರಂ ಸ ರಾಕ್ಷಸಪತಿಃ ಸ ಚ ಪಶ್ಚಿಮೇನ ॥
ದ್ವಾರೇಣ ಮಾರುತಸುತಂ ಸಮುಪೇತ್ಯ ದಗ್ಧೋ
ಗುಪ್ತೋಽಪಿ ಶೂಲಿವಚನೇನ ದುರಂತಶಕ್ತಿಂ ॥೨೩॥

ಅ ॥ ಆ ಪ್ರಹಸ್ತನೇ ಮೊದಲಾಗಿವುಳ್ಳವರೆಲ್ಲಾ ಸಂಹೃತರಾದ ಮೇಲೆ ಆ ರಾಕ್ಷಸ ಶ್ರೇಷ್ಠನಾದ ರಾವಣನು ಧೂಮ್ರನೇತ್ರನನ್ನು ಅಪ್ಪಣೆ ಕೊಟ್ಟನು. ಆಧೂಮ್ರನೇತ್ರನು ಪಶ್ಚಿಮ ದ್ವಾರದಿಂದ ಅಪರಿಮಿತವಾದ ಶಕ್ತಿಯುಳ್ಳ ಹನುಮಂತನನ್ನು ಹೊಂದಿ, ರುದ್ರವರದಿಂದ ರಕ್ಷಿತನಾದಾಗ್ಯೂ ಸುಡಲ್ಪಟ್ಟನು. (ಅಂದರೆ ಹನುಮಂತ ಧೂಮ್ರನೇತ್ರನನ್ನು ಸಂಹರಿಸಿದನು) ॥೨೩॥

ಮೂ ॥ ಅಕಂಪನೋಽಪಿ ರಾಕ್ಷಸೋ ನಿಶಾಚರೇಶಚೋದಿತಃ ॥
ಉಮಾಪತೇರ್ವರೋದ್ಧತಃ ಕ್ಷಣಾದ್ಧತೋ ಹನೂಮತಾ ॥೨೪॥

ಅ ॥ ರುದ್ರದೇವರ ವರದಿಂದ ದೃಪ್ತನಾದ ರಾವಣನಿಂದ ಪ್ರೇರಿತನಾದ ಅಕಂಪನ ನಾಮಕ ರಾಕ್ಷಸನು ಹನುಮಂತನಿಂದ ಕ್ಷಣಮಾತ್ರದಿಂದ ಸಂಹರಿಸಲ್ಪಟ್ಟನು ॥೨೪॥

ಮೂ ॥ ಅಥಾಸ್ತ್ರಸಂಪ್ರದೀಪಿತೈಃ ಸಮಸ್ತಕೋ ಮಹೋಲ್ಮುಕೈಃ ॥
ರಘುಪ್ರವೀರಚೋದಿತಾಃ ಪುರಂ ನಿಶಿ ಸ್ವದಾಹಯನ್ ॥೨೫॥

ಅ ॥ ಅನಂತರದಲ್ಲಿ ಅಗ್ನ್ಯಸ್ತ್ರದಿಂದ ಪ್ರಕಾಶಮಾನವಾದ ಮಹತ್ತಾದ ಉಲ್ಮುಖ (ಸೂಟೆ) ಗಳಿಂದ ರಾಮಚಂದ್ರದೇವರಿಂದ ಪ್ರೇರಿಸಿಕೊಳ್ಳಲ್ಪಟ್ಟ ಎಲ್ಲಾ ಕಪಿಗಳು ರಾತ್ರಿಕಾಲದಲ್ಲಿ ಲಂಕಾಪಟ್ಟಣವನ್ನು ಸುಟ್ಟವು ॥೨೫॥

ಮೂ ॥ ತತಸ್ತೌ ನಿಕುಂಭೋಽಥ ಕುಂಭಶ್ಚ ಕೋಪಾ-
ತ್ಪ್ರದಿಷ್ಟೌ ದಶಾಸ್ಯೇನ ಕುಂಭಶ್ರುತೇರ್ಹಿ ।
ಸುತೌ ಸುಪ್ರಹೃಷ್ಟೌ ರಣಾಯಾಭಿಯಾತೌ
ಕಪೀಂಸ್ತಾನ್ಬಹಿಃ ಸರ್ವಶೋ ಯಾಪ (ತ) ಯಿತ್ವಾ ॥೨೬॥

ಅ ॥ ಅನಂತರದಲ್ಲಿ ಪಟ್ಟಣಸುಟ್ಟ ಕೋಪದಿಂದ ರಾವಣನಿಂದ ಆಜ್ಞಾಪಿಸಿಕೊಳ್ಳಲ್ಪಟ್ಟ ಕುಂಭಕರ್ಣನ ಮಕ್ಕಳಾದ, ಯುದ್ಧಪ್ರಾಪ್ತವಾಯಿತೆಂದು ಅತಿ ಸಂತೋಷಯುಕ್ತರಾದ ನಿಕುಂಭ ಮತ್ತು ಕುಂಭ ಇವರಿಬ್ಬರು ಎಲ್ಲಾ ಆ ಕಪಿಗಳನ್ನು ಪ್ರಾಕಾರದ್ದೆಶೆಯಿಂದ ಹೊರಗೆ ಕಳುಹಿಸಿ, ಯುದ್ಧಕ್ಕೋಸ್ಕರ ಬಂದರು ॥೨೬॥

ಮೂ ॥ ಸ ಕುಂಭೋ ವಿಧಾತುಃ ಸುತಂ ತಾರನೀಲೌ
ನಲಂ ಚಾಶ್ವಿಪುತ್ರೌ ಜಿಗಾಯಾಂಗದಂ ಚ ॥
ಸುಯುದ್ಧಂ ಚ ಕೃತ್ವಾ ದಿನೇಶಾತ್ಮಜೇನ
ಪ್ರಣೀತೋ ಯಮಸ್ಯಾಶು ಲೋಕಂ ಸುಪಾಪಃ ॥೨೭॥

ಅ ॥ ಅತಿ ಪಾಪಿಷ್ಠನಾದ ಆ ಕುಂಭನು ಬ್ರಹ್ಮದೇವರ ಮಕ್ಕಳಾದ ಜಾಂಬವಂತರನ್ನೂ, ನೀಲನನ್ನೂ, ನಲನನ್ನೂ, ಅಶ್ವಿನೀದೇವತೆಗಳ ಪುತ್ರರಾದ ಮೈಂದ-ದ್ವಿವಿದರನ್ನೂ, ಅಂಗದನನ್ನೂ ಕೂಡ ಗೆದ್ದು, ಸುಗ್ರೀವನಿಂದ ಸುಯುದ್ಧವನ್ನು ಮಾಡಿ ಬೇಗನೆ ಯಮಲೋಕವನ್ನು ಕುರಿತು ಕಳುಹಿಸಲ್ಪಟ್ಟನು (ಅಂದರೆ ಸುಗ್ರೀವನು ಕುಂಭನನ್ನು ಸಂಹರಿಸಿದನು.) ॥೨೭॥

ಮೂ ॥ ತತೋ ನಿಕುಂಭೋಽದ್ರಿವರಪ್ರದಾರಣಂ
ಮಹಾಂತಮುಗ್ರಂ ಪರಿಘಂ ಪ್ರಗೃಹ್ಯ ॥
ಸಸಾರ ಸೂರ್ಯಾತ್ಮಜಮಾಶು ಭೀತಃ
ಸ ಪುಪ್ಲುವೇ ಪಶ್ಚಿಮತೋ ಧನುಃ ಶತಂ ॥೨೮॥

ಆ ॥ ಅಕಂಪನ ರಾಕ್ಷಸಸಂಹಾರಾನಂತರದಲ್ಲಿ ನಿಕುಂಭನು ಪರ್ವತ ಶ್ರೇಷ್ಠಗಳನ್ನು ಸೀಳಿಸತಕ್ಕ ಮಹತ್ತಾದ ಕ್ರೂರವಾದ ಮುಸಲಾಖ್ಯವಾದ (ಅಂದರೆ ಲೋಹ ಬಂಧರಹಿತವಾದ) ಆಯುಧವನ್ನು ಹಿಡಿದುಕೊಂಡು ಸುಗ್ರೀವನನ್ನು ಕುರಿತು ಓಡಿಬಂದನು. ಆ ಸುಗ್ರೀವನು ಬೇಗನೆ ಹೆದರಿ ಪೃಷ್ಠಭಾಗದ್ದೆಶೆಯಿಂದ ನೂರು ಧನುಸ್ಸಿನ ಪರ್ಯಂತರ ಓಡಿದನು. (ಅಂದರೆ ನಾಲ್ಕು ಮೊಳಕ್ಕೆ ದಂಡಕ ಎಂದು ಹೆಸರು. ಹನ್ನೆರಡು ಮೊಳಕ್ಕೆ ಧನುಃ ಎಂದುಹೆಸರು. ಇಷ್ಟು ದೂರಕ್ಕೆ ಓಡಿದನು) ॥೨೮॥

ಮೂ ॥ ತಂ ಭ್ರಾಮಯಿತ್ವಾಶು ಭುಜೇನ ವೀರೇ
ಭ್ರಾಂತಾ ದಿಶೋ ದ್ಯೌಶ್ಚ ಸಚಂದ್ರಸೂರ್ಯಾಃ ॥
ಸುರಾಶ್ಚ ತಸ್ಯೋರುಬಲಂ ವರಂ ಚ
ಶರ್ವೋದ್ಭವಂ ವೀಕ್ಷ್ಯ ವಿಷೇದುರೀಷತ್ ॥೨೯॥

ಅ ॥ ಪರಾಕ್ರಮ ಶಾಲಿಯಾದ ನಿಕುಂಭನು ಆ ಪರಿಘಾಖ್ಯ ಆಯುಧವನ್ನು ಬೇಗನೆ ಭುಜದಿಂದ ತಿರುಗಾಡಿಸುತ್ತಿರಲು ಚಂದ್ರಸೂರ್ಯರಿಂದ ಕೂಡಿದ ದಿಕ್ಕಿಗೆ ಅಭಿಮಾನಿಗಳಾದ ದೇವತೆಗಳೂ, ಸ್ವರ್ಗಲೋಕಕ್ಕೆ ಅಭಿಮಾನಿಯಾದ ದೇವಿಯೂ ಕೂಡ ಅತ್ತಿತ್ತ ತಿರುಗಾಡಿದರು. ದಿಕ್ಕುಗಳು ತಿರುಗಿದವು. ದೇವತೆಗಳಾದರೂ ಆ ನಿಕುಂಭನ ಉತ್ಕೃಷ್ಟವಾದ ರುದ್ರನಿಂದುಂಟಾದ ವರವನ್ನೂ, ಬಲವನ್ನೂ ಕೂಡ ನೋಡಿ ಸ್ವಲ್ಪ ದುಃಖವನ್ನು ಹೊಂದಿದರು ॥೨೯॥

ಮೂ ॥ ಅನನ್ಯಸಾಧ್ಯಂ ತಮುಭೋ ನಿರೀಕ್ಷ್ಯ
ಸಮುತ್ಪಪಾತಾಶು ಪುರೋಽಸ್ಯ ಮಾರುತಿಃ ॥
ಪ್ರಕಾಶ್ಯ ಬಾಹ್ವಂತರಮಾಹ ಚೈನಂ
ಕಿಮೇಭಿರತ್ರ ಪ್ರಹರಾಯುಧಂ ತೇ ॥೩೦॥

ಅ ॥ ವಾಯುಪುತ್ರನಾದ ಹನುಮಂತನು ಇನ್ನೊಬ್ಬರಿಂದ ಕೊಲ್ಲಲಿಕ್ಕೆ ಅಶಕ್ಯನಾದ ನಿಕುಂಭನನ್ನು ನೋಡಿ, ಈ ನಿಕುಂಭನ ಮುಂಭಾಗದಲ್ಲಿ ಹಾರಿಬಂದನು. ಭುಜಗಳ ಮಧ್ಯವಾದ ಹೃದಯವನ್ನು ತೋರಿಸಿ, ಈ ನಿಕುಂಭನನ್ನು ಕುರಿತು ಹೇಳಿದನು. ನಿನಗೆ ಈ ಕಪಿಗಳಿಂದ ಏನು ಪ್ರಯೋಜನವು? ನಿನ್ನ ಪರಿಘಾಖ್ಯ ಆಯುಧವನ್ನು ಈ ನನ್ನ ಹೃದಯದಲ್ಲಿ ಹೊಡಿ ಎಂದನು ॥೩೦॥

ಮೂ ॥ ಇತೀರಿತನಸ್ತೇನ ಸ ರಾಕ್ಷಸೋತ್ತಮೋ
ವರಾದಮೋಘಂ ಪ್ರಜಹಾರ ವಕ್ಷಸಿ ॥
ವಿಚೂರ್ಣಿತೋಽಸೌ ತದುರಸ್ಯಭೇದ್ಯೇ
ಯಥೈವ ವಜ್ರೋ ವಿಪತೌ ವೃಥಾಽಭವತ್ ॥೩೧॥

ಅ ॥ ಈ ಪ್ರಕಾರವಾಗಿ ಆ ಹನುಮಂತನಿಂದ ಹೇಳಿಸಿಕೊಳ್ಳಲ್ಪಟ್ಟ ರಾಕ್ಷಸ ಶ್ರೇಷ್ಠನಾದ ನಿಕುಂಭನು ವರದಿಂದ ಅಮೋಘವಾದ ಪರಿಘಾಖ್ಯವಾದ ಆಯುಧವನ್ನು (ಹನುಮಂತನ) ವಕ್ಷಸ್ಥಳದಲ್ಲಿ ಹೊಡೆದನು. ಈ ಪರಿಘವು ಅಭೇದ್ಯವಾದ ಅವನ ವಕ್ಷಸ್ಥಳದಲ್ಲಿ ಹೇಗೆ ವಜ್ರಾಯುಧವು ಪಕ್ಷಿಗಳಿಗೆ ಸ್ವಾಮಿಯಾದ ಗರುಡನಲ್ಲಿ ವ್ಯರ್ಥವಾಗುವುದೋ ಹಾಗೆ ಪುಡಿಪುಡಿಯಾಯಿತು ॥೩೧॥

ಮೂ ॥ ವಿಚೂರ್ಣಿತೇ ನಿಜಾಯುಧೇ ನಿಕುಂಭ ಏತ್ಯ ಮಾರುತಿಂ ॥
ಪ್ರಗೃಹ್ಯ ಚಾತ್ಮನೋಽಂಸಕೇ ನಿಧಾಯ ಜಗ್ಮಿವಾನ್ದ್ರುತಂ ॥೩೨॥

ಅ ॥ ನಿಕುಂಭನು ತನ್ನ ಆಯುಧವು ಪುಡಿಯಾಗುತ್ತಿರಲು ಹನುಮಂತನ ಸಮೀಪಕ್ಕೆ ಹೋಗಿ ತನ್ನ ಹೆಗಲಮೇಲೆ (ಅವನನ್ನು) ಹಿಡಿದು ಕುಳ್ಳಿರಿಸಿ ಶೀಘ್ರದಲ್ಲಿ ಹೋದನು ॥೩೨॥

ಮೂ ॥ ಪ್ರಗೃಹ್ಯ ಕಂಠಮಸ್ಯ ಸ ಪ್ರಧಾನಮಾರುತಾತ್ಮಜಃ ॥
ಸ್ವಮಾಶು ಮೋಚಯಂಸ್ತತೋ ನ್ಯಪಾತಯದ್ಧರಾತಲೇ ॥೩೩॥

ಅ ॥ ಪ್ರಧಾನ ವಾಯುವಿನ ಪುತ್ರನಾದ ಆ ಹನುಮಂತನು ಈ ನಿಕುಂಭನ ಕುತ್ತಿಗೆಯನ್ನು ಹಿಡಿದು ಆ ನಿಕುಂಭನಿಂದ ತನ್ನನ್ನು ಶೀಘ್ರದಲ್ಲಿ ಬಿಡಿಸಿ ಕೊಂಡವನಾಗಿ ಆತನನ್ನು ಭೂತಲದಲ್ಲಿ ಕೆಡಹಾಕಿದನು ॥೩೩॥

ಮೂ || ಚಕಾರ ತಂ ರಣಾತ್ಮಕೇ ಮಖೇ ರಮೇಶದೈವತೇ ।
ಪಶುಂ ಪ್ರಭಂಜನಾತ್ಮಜೋ ವಿನೇದುರತ್ರ ದೇವತಾಃ ||೩೪||

ಅ || ವಾಯುವಿನ ಪುತ್ರನಾದ ಹನುಮಂತನು ಲಕ್ಷ್ಮೀಪತಿಯಾದ ಶ್ರೀರಾಮನೇ ದೇವತೆಯಾಗಿಯುಳ್ಳ ಯುದ್ಧವೆಂಬ ಯಜ್ಞದಲ್ಲಿ ಆ ನಿಕುಂಭನನ್ನು ಪಶುವನ್ನಾಗಿ ಮಾಡಿದನು. ಈ ಯುದ್ಧವೆಂಬ ಯಜ್ಞದಲ್ಲಿ (ಆಕಾಶದಲ್ಲಿರತಕ್ಕ ದೇವತೆಗಳು) 'ಆಶ್ರಾವಯ' ಇದು ಮೊದಲಾದ ಮಂತ್ರಧ್ವನಿಯನ್ನು ಮಾಡಿದರು. ದೇವತೆಗಳು ಉದ್ಗಾತ್ರಾದಿ ಕರ್ಮವನ್ನು ಮಾಡಿದರು ||೩೪||

ಮೂ || ಸುಪ್ತಘ್ನೋ ಯಜ್ಞಕೋಪಶ್ಚ ಶಕುನಿರ್ದೇವತಾಪನಿಃ (ನಃ) ।
ವಿದ್ಯುಜ್ಜಿಹ್ವಃ ಪ್ರಮಾಥೀ ಚ ಶುಕಸಾರಣಸಂಯುತಾಃ ||೩೫||
ರಾವಣಪ್ರೇರಿತಾಃ ಸರ್ವೇ (ರ್ವಾನ್) ಮಥ್ನಂ (ಥಂ) ತಃ ಕಪಿಕುಂಜರಾನ್ ।
ಅನಥ್ಯಾ ಬ್ರಹ್ಮವರತೋ ನಿಹತಾ ರಾಮಸಾಯಕೈಃ ||೩೬||

ಅ || ಬ್ರಹ್ಮನ ವದೆರಪೆಯಿಂದ ಸಂಹರಿಸಿಕೊಳ್ಳಲ್ಪಡದಿರುವ ಸುಪ್ತಘ್ನನು, ಯಜ್ಞಕೋಪನು, ಶಕುನಿಯು, ದೇವತಾಪನಿಯು, ವಿದ್ಯುಜ್ಜಿಹ್ವನು, ಪ್ರಮಾಥಿಯು ಇವರೆಲ್ಲರೂ ಶುಕ, ಸಾರಣ ಇವರಿಬ್ಬರಿಂದ ಕೂಡಿದವರಾಗಿ ರಾವಣನಿಂದ ಪ್ರೇರಿಸಿಕೊಳ್ಳಲ್ಪಟ್ಟವರಾಗಿ ಎಲ್ಲಾ ಕಪಿಶ್ರೇಷ್ಠರನ್ನು ಸಂಭ್ರಾಂತರನ್ನಾಗಿ ಮಾಡುವವರಾಗಿ ರಾಮನ ಬಾಣಗಳಿಂದ ಸಂಹರಿಸಿಕೊಳ್ಳಲ್ಪಟ್ಟರು ||೩೫||೩೬||

ಮೂ || ಯುದ್ಧೋನ್ಮತ್ತಶ್ಚ ಮತ್ತಶ್ಚ ದೇವಾಂತಕನರಾಂತಕೌ ।
ತ್ರಿಶಿರಾ ಅತಿಕಾಯಶ್ಚ ನಿರ್ಯಯೂ ರಾವಣಾಜ್ಞಯಾ ||೩೭||

ಅ || ಯುದ್ಧೋನ್ಮತ್ತನೂ, ಮತ್ತನೂ, ದೇವಾಂತಕನೂ, ನರಾಂತಕನೂ, ತ್ರಿಶಿರನೂ ಅತಿಕಾಯನೂ ಈ ಆರು ಮಂದಿ ರಾವಣನ ಆಜ್ಞೆಯಂತೆ (ಯುದ್ಧಕ್ಕಾಗಿ) ಹೊರಟರು ||೩೭||

ಮೂ || ನರಾಂತಕೋ ರಾವಣಜೋ ಹಯವರ್ಯೋಪರಿ ಸ್ಥಿತಃ ।
ಅಭೀಃ ಸಸಾರ ಸಮರೇ ಪ್ರಾಸೋದ್ಯತಕರೋ ಹರೀನ್ ||೩೮||

ಅ || ರಾವಣನಿಂದ ಹುಟ್ಟಿದ ನರಾಂತಕನು ಶ್ರೇಷ್ಠವಾದ ಕುದುರೆಯ ಮೇಲೆ ಕುಳಿತವನಾಗಿ ಯುದ್ಧದಲ್ಲಿ ಭಯರಹಿತನಾಗಿ ಪ್ರಾಸವೆಂಬ ಆಯುಧವಿಶೇಷದಿಂದ ಉದ್ಯುಕ್ತವಾದ ಕೈಗಳುಳ್ಳವನಾಗಿ ಕಪಿಗಳನ್ನು ಹೊಂದಿದನು. ||೩೮||

ಮೂ || ತಂ ದಹಂತಮನೀಕಾನಿ ಯುವರಾಜೋಽಂಗದೋ ಬಲೀ ।
ಉತ್ಪಪಾತ ನಿರೀಕ್ಷ್ಯಾಶು ಸಮದರ್ಶಯದಪ್ಯುರಃ ||೩೯||

ಅ || ಸೈನ್ಯಗಳನ್ನು ಸುಡತಕ್ಕ ಆ ನರಾಂತಕನನ್ನು ಬಲಿಷ್ಠನಾದ, ಯುವರಾಜನಾದ ಅಂಗದನು ನೋಡಿ ಶೀಘ್ರದಲ್ಲಿ ನರಾಂತಕನ ಸಮೀಪಕ್ಕೆ ಹಾರಿದನು. (ನರಾಂತಕನಿಗೆ) ವಕ್ಷಸ್ಥಳವನ್ನೂ ಕೂಡ ತೋರಿಸಿದನು ||೩೯||

ಮೂ ॥ ತಸ್ಯೋರಸಿ ಪ್ರಾಸವರಂ ಪ್ರಜಹಾರ ಸ ರಾಕ್ಷಸಃ ॥
ದ್ವಿಧಾ ಸಮಭವತ್ತತ್ತು ವಾಲಿಪುತ್ರಸ್ಯ ತೇಜಸಾ ॥೪೦॥

ಅ ॥ ಆ ರಾಕ್ಷಸನಾದ ನರಾಂತಕನು ಅಂಗದನ ವಕ್ಷಸ್ಥಳದಲ್ಲಿ ಪ್ರಾಸಾಖ್ಯ ಆಯುಧ ಶ್ರೇಷ್ಠವನ್ನು ಹೊಡೆದನು. ಆ ಪ್ರಾಸಾಖ್ಯ ಆಯುಧಶ್ರೇಷ್ಠವಾದರೂ ವಾಲಿಪುತ್ರನಾದ ಅಂಗದನ ಸಾಮರ್ಥ್ಯದಿಂದ ಎರಡು ಪ್ರಕಾರವುಆಯಿತು. (ಅಂದರೆ ತುಂಡಾದದ್ದಾಯಿತು) ॥೪೦॥

ಮೂ ॥ ಅಥಾಸ್ಯ ಹಯಮಾಸ್ಯೇವ ನಿಜಘಾನ ಮಹೋ ಕಪಿಃ ॥
ಸೇತತಶ್ಚಾಕ್ಷಿಣೀ ತಸ್ಯ ಸ ಪಪಾತ ಮಮಾರ ಚ ॥೪೧॥

ಅ ॥ ಆ ಮೇಲೆ ಹನುಮಂತನು ನರಾಂತಕನ ಕುದುರೆಯನ್ನು (ಅಂದರೆ ಕುದುರೆಯ ಕಪೋಲದಲ್ಲಿ) ಶೀಘ್ರದಲ್ಲೇ ಹೊಡೆದನು. ಆ ಕುದುರೆಯ ಕಣ್ಣುಗಳು ಬಿದ್ದವು. ಕುದುರೆಯು ಬಿತ್ತು. ಮತ್ತು ಸತ್ತುಹೋಯಿತು ॥೪೧॥

ಮೂ ॥ ಸ ಖಡ್ಗವರಮಾದಾಯ ಪ್ರಸಸಾರ ರಣೇ ಕಪಿಂ ॥
ಆಚ್ಛಿದ್ಯ ಚಾಸ್ಯ ಖಡ್ಗಂ ತಂ(ಖಡ್ಗಮಸ್ಯೈವ) ನಿಹತೋ
ವಾಲಿಸೂನುನಾ ॥೪೨॥

ಅ ॥ ಆ ನರಾಂತಕನು ಖಡ್ಗಶ್ರೇಷ್ಠವನ್ನು ಹಿಡಿದು ಯುದ್ಧದಲ್ಲಿ ಅಂಗದನನ್ನು ಹೊಂದಿದನು. ವಾಲಿಪುತ್ರನಾದ ಅಂಗದನಿಂದ ಈ ನರಾಂತಕನ ಆ ಖಡ್ಗವನ್ನು ಬಲತ್ಕಾರದಿಂದ ಸೆಳೆದುಕೊಂಡು ಆ ನರಾಂತಕನು ಸಂಹರಿಸಲ್ಪಟ್ಟನು ॥೪೨॥

ಮೂ ॥ ಗಂಧರ್ವಕನ್ಯಕಾಸೂತೇ ನಿಹತೇ ರಾವಣಾತ್ಮಜೇ ॥
ಆಜಗಾಮಾಗ್ರಜಸ್ತಸ್ಯ ಸೋದರ್ಯೋ ದೇವತಾಂತಕಃ ॥೪೩॥

ಅ ॥ ಗಂಧರ್ವಕನ್ನಿಕೆಯಲ್ಲಿ ಹುಟ್ಟಿದ ರಾವಣನ ಪುತ್ರನಾದ ನರಾಂತಕನು ಸಂಹರಿಸಿ ಕೊಳ್ಳಲ್ಪಡುತ್ತಿರಲು ಆ ನರಾಂತಕನ ಅಣ್ಣನಾದ ಸಮಾನೋದರನಾದ (ಅಂದರೆ ಒಂದೇ ತಾಯಿಯಾಗಿವುಳ್ಳ) ದೇವಾಂತಕನು ಬಂದನು ॥೪೩॥

ಮೂ ॥ ತಸ್ಯಾಪತತ ಏವಾಶು ಶರವರ್ಷಪ್ರತಾಪಿತಾಃ॥
ಪ್ರದುದ್ರುವುರ್ಭಯಾತ್ಸರ್ವೇ ಕಪಯೋ ಜಾಂಬವನ್ಮುಖಾಃ ॥೪೪॥

ಅ ॥ ಮುಂಭಾಗದಲ್ಲಿಯೇ ಬರತಕ್ಕ ಆ ದೇವಾಂತಕನ ಬಾಣವರ್ಷದಿಂದ ಸಂತಾಪವನ್ನು ಹೊಂದಿದ ಜಾಂಬವಂತನೇ ಮೊದಲಾದ ಎಲ್ಲಾ ಕಪಿಗಳು ಭಯದಿಂದ ಓಡಿಹೋದುವು ॥೪೪॥

ಮೂ ॥ ಸ ಶರಂ ತರಸಾದಾಯ ರವಿಪುತ್ರಾಯಮೋಘೋಪಮಂ ॥
ಅಂಗದಂ ಪ್ರಜಹಾರೋರಸ್ಯಪತತ್ಸ ಮುಮೋಹ ಚ ॥೪೫॥

ಅ ॥ ಆ ದೇವಾಂತಕನು ವೇಗದಿಂದ ಸೂರ್ಯನ ಮಗನಾದ ಯಮನ ಆಯುಧ (ದಂಡ)ಕ್ಕೆ ಸದೃಶವಾದ ಬಾಣವನ್ನು ಹಿಡಿದುಕೊಂಡು ಅಂಗದನನ್ನು ವಕ್ಷಸ್ಥಳದಲ್ಲಿ ಹೊಡೆದನು. ಆ ಅಂಗದನು ಬಿದ್ದನು, ಮೋಹವನ್ನೂ ಹೊಂದಿದನು. ॥೪೫॥

ಮೂ ॥ ಅಥ ತಿಗ್ಮಾಂಶುತನಯಃ ಶೈಲಂ ಪ್ರಚಲಪಾದಪಂ ॥
ಅಭಿದುದ್ರಾವ ಸಂಗೃಹ್ಯ ಚಿಕ್ಷೇಪ ಚ ನಿಶಾಚರೇ ॥೪೬॥

ಅ ॥ ಆ ಮೇಲೆ ಸೂರ್ಯ ಪುತ್ರನಾದ ಸುಗ್ರೀವನು ಹಂದಾಡತಕ್ಕ ವೃಕ್ಷಗಳುಳ್ಳ ಪರ್ವತವನ್ನು ಹಿಡಿದುಕೊಂಡು ಓಡಿಹೋದನು. ಮತ್ತು ಆ ರಾಕ್ಷಸನಾದ ದೇವಾಂತಕನಲ್ಲಿ ಬಿಸಾಡಿದನು ॥೪೬॥

ಮೂ ॥ ತಮಾಪತಂತಮಾಲಕ್ಷ್ಯ ದೂರಾಚ್ಛರವಿದಾರಿತಂ ॥
ಸುರಾಂತಕಶ್ಚಕಾರಾಶು ದಧಾರ ಚ ಪರಂ ಶರಂ ॥೪೭॥

ಅ ॥ ದೇವಾಂತಕನು ತನ್ನನ್ನು (ಕೊಲ್ಲಲಿಕ್ಕೆ) ಹಾರಿಬರುತ್ತಿರುವ ಆ ಪರ್ವತವನ್ನು ದೂರದಿಂದ ನೋಡಿ ಬಾಣದಿಂದ ಸೀಳಲ್ಪಟ್ಟದ್ದನ್ನಾಗಿ ಮಾಡಿದನು, ಶೀಘ್ರದಲ್ಲಿ ಮತ್ತೊಂದು ಬಾಣವನ್ನೂ ಹಿಡಿದನು. ॥೪೭॥

ಮೂ ॥ ಸ ತಮಾಕರ್ಣಮಾಕೃಷ್ಯ ಯಮದಂಡೋಪಮಂ ಶರಂ ॥
ಅವಿದ್ಧ್ಯದ್ಧೃದಯೇ ರಾಜ್ಞಃ ಕಪೀನಾಂ ಸ ಪಪಾತ ಹ ॥೪೮॥

ಅ ॥ ಆ ದೇವಾಂತಕನು ಯಮದಂಡಕ್ಕೆ ಸದೃಶವಾದ ಆ ಬಾಣವನ್ನು ಕಿವಿಯ ಪರ್ಯಂತರವಾಗಿ ಸೆಳೆದು ಕಪಿಗಳಿಗೆ ರಾಜನಾದ ಸುಗ್ರೀವನ ಹೃದಯದಲ್ಲಿ ಹೊಡೆದನು. ಆ ಸುಗ್ರೀವನು ಕಷ್ಟದಲ್ಲಿ, ಬಿದ್ದನು ॥೪೮॥

ಮೂ ॥ ಬಲಮಪ್ರತಿಮಂ ವೀಕ್ಷ್ಯ ಸುರಶತ್ರೋಸ್ತು ಮಾರುತಿಃ ॥
ಆಹ್ವಯಾಮಾಸ ಯುದ್ಧಾಯ ಕೇಶವಃ ಕೈಟಭಂ ಯಥಾ ॥೪೯॥

ಅ ॥ ವಾಯುಪುತ್ರನಾದ ಹನುಮಂತನು ದೇವತೆಗಳಿಗೆ ಶತ್ರುವಾದ ದೇವಾಂತಕನ ಅಸದೃಶವಾದ ಬಲವನ್ನು ನೋಡಿ ಕೇಶವನು ಕೈಟಭನನ್ನಂತೆ ಯುದ್ಧಕ್ಕಾಗಿ ಕರೆದನು ॥೪೯॥

ಮೂ ॥ ತಮಾಪತಂತಮಾಲೋಕ್ಯ ರಥಂ ಸಹಯ ಸಾರಥಿಂ ॥
ಚೂರ್ಣಯಿತ್ವಾ ಧನುಶ್ಚಾಸ್ಯ ಸಮಾಚ್ಛಿದ್ಯ ಬಭಂಜ ಹ ॥೫೦॥

ಅ ॥ ವಾಯುಪುತ್ರನಾದ ಹನುಮಂತನು ಯುದ್ಧಕ್ಕಾಗಿ ಹಾರಿ ಬರುತ್ತಿರುವ ಆ ದೇವಾಂತಕನನ್ನು ನೋಡಿ ಕುದುರೆಗಳೂ, ಸಾರಥಿಯೂ ಇವರಿಂದ ಕೂಡಿದ ರಥವನ್ನು ಪುಡಿಮಾಡಿ ಈ ದೇವಾಂತಕನ ಧನುಸ್ಸನ್ನು ಬಲಾತ್ಕಾರದಿಂದ ಸೆಳೆದುಕೊಂಡು ಮುರಿದನು ಪ್ರಸಿದ್ಧವು ॥೫೦॥

ಮೂ ॥ ಅಥ ಖಡ್ಗಂ ಸಮಾದಾಯ ಪುರ ಆಪತತೋ ರಿಪೋಃ ॥
ಹರಿಃ ಪ್ರಗೃಹ್ಯ ಕೇಶೇಷು ಪಾತಯಿತ್ವೈನಮಾಹವೇ ॥೫೧॥

ಶಿರೋ ಮಮರ್ದ ತರಸಾ ಪವಮಾನಾತ್ಮಜಃ ಪದಾ ॥
ತಮೀಶಾನಗಿರಾವಧ್ಯಂ (ವರದಾನಾದವಧ್ಯಂ ತಂ) ನಿಹತ್ಯ
ಪವನಾತ್ಮಜಃ ೫೨॥
ಸಮೀಡಿತಃ ಸುರವರ್ಯೈಃ ಪ್ಲವಂ(ವ)ಗೈರ್ವೀಕ್ಷಿತೋ ಮುದಾ ॥
ವಿದ್ರಾವಿತಾಖಿಲಕಪಿಂ ವರಾತ್ತ್ರಿಶಿರಸಂ ವಿಭೋಃ ॥
ಭಙ್ಕ್ತ್ವಾ ರಥಂ ಧನುಃ ಖಡ್ಗಮಾಚ್ಛಿದ್ಯಾಶಿರಸಂ ವ್ಯಧಾತ್ ॥೫೩॥

ಅ ॥ ವಾಯುಪುತ್ರನಾದ ಹನುಮಂತನು ಆ ಮೇಲೆ (ತನಗೆ)ಇದಿರಾಗಿ ಬರತಕ್ಕ ಶತ್ರುವಾದ ದೇವಾಂತಕನ ಖಡ್ಗವನ್ನು ಹಿಡಿದುಕೊಂಡು ಶತ್ರುವಿನ ತಲೆಕೂದಲುಗಳಲ್ಲಿ ಹಿಡಿದು ಯುದ್ಧದಲ್ಲಿ ಈ ದೇವಾಂತಕನನ್ನು ಬೀಳಿಸಿ, ಶೀಘ್ರದಲ್ಲಿ ಕಾಲಿನಿಂದ ಶಿರಸ್ಸನ್ನು ಮರ್ದಿಸಿದನು. ರುದ್ರದೇವರ ವರದಿಂದ ಅವಧ್ಯನಾದ ಆ ದೇವಾಂತಕನನ್ನು ವಾಯುಪುತ್ರನಾದ ಹನುಮಂತನು ಸಂಹಾರಮಾಡಿ ದೇವಶ್ರೇಷ್ಠರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟನು. ಕಪಿಗಳಿಂದ ಸಂತೋಷದಿಂದ ನೋಡಿಸಿ ಕೊಳ್ಳಲ್ಪಟ್ಟನು. ನಂತರ ಬ್ರಹ್ಮದೇವರ ವರದಿಂದ ಓಡಿಸಲ್ಪಟ್ಟ ಎಲ್ಲಾ ಕಪಿಗಳುಳ್ಳ (ಅಂದರೆ ಎಲ್ಲಾ ಕಪಿಗಳನ್ನು ಓಡಿಸಿದ) ತ್ರಿಶಿರಸ್ಸೆಂಬ ರಾಕ್ಷಸನನ್ನೂ ಆತನ ರಥವನ್ನೂ ಮುರಿದು ಧನುಸ್ಸನ್ನೂ ಖಡ್ಗವನ್ನೂ ಸೆಳೆದುಕೊಂಡು ಶಿರಸ್ಸುರಹಿತನನ್ನಾಗಿ ಮಾಡಿದನು. ॥೫೧-೫೨॥೫೩॥

ಮೂ ॥ ಯುದ್ಧೋನ್ಮತ್ತಶ್ಚ ಮತ್ತಶ್ಚ ಪಾರ್ವತೀವರದರ್ಪಿತೌ ॥
ಪ್ರಮಥ್ನಂತೌ ಕಪೀನ್ಸರ್ವಾನ್ಹತೌ ಮಾರುತಿಮುಷ್ಟಿನಾ ॥೫೪॥

ಅ ॥ ವಾಯುದೇವರ ಪುತ್ರನಾದ ಹನುಮಂತನ ಮುಷ್ಟಿಯಿಂದ ಎಲ್ಲಾ ಕಪಿಗಳನ್ನು ಮಥನ ಮಾಡತಕ್ಕ, ಪಾರ್ವತೀ ದೇವಿಯ ವರದಿಂದ ಅಹಂಕಾರಯುಕ್ತರಾದ ಯುದ್ಧೋ ನ್ಮತ್ತನೂ, ಮತ್ತನೂ ಇವರಿಬ್ಬರೂ ಸಂಹರಿಸಿಕೊಳ್ಳಲ್ಪಟ್ಟರು ॥೫೪॥

ಮೂ ॥ ತತೋಽತಿಕಾಯೋಽತಿರಥೋ ರಥೇನ
ಸ್ವಯಂಭುದತ್ತೇನ ಹರೀನ್ಸ್ವಮೃತ್ನ(ಧ್ನ)ನ್ ॥
ಚಚಾರ ಕಾಲಾನಲಸನ್ನಿಕಾಶೋ
ಗಂಧರ್ವಿಕಾಯಾಂ ಜನಿತೋ ದಶಾಸ್ಯಾತ್ ॥೫೫॥

ಅ ॥ ಯುದ್ಧೋನ್ಮತ್ತ ಮೊದಲಾದ ಐವರು ರಾಕ್ಷಸರನ್ನು ಸಂಹರಿಸಿದ ಮೇಲೆ ಗಂಧರ್ವ ಕನ್ನಿಕೆಯಲ್ಲಿ ರಾವಣನದ್ದೆಸೆಯಿಂದ ಹುಟ್ಟಿದ ಪ್ರಲಯಕಾಲದ ಅಗ್ನಿಗೆ ಸದೃಶನಾದ ಅತಿರಥನಾದ ಸ್ಥೂಲದೇಹವಾದ್ದರಿಂದ ಅತಿಕಾಯನೆಂಬ ಹೆಸರುಳ್ಳವನು ಕಪಿಗಳನ್ನು ಮರ್ದಿ ಸುತ್ತಾ ಬ್ರಹ್ಮದೇವರಿಂದ ಕೊಡಲ್ಪಟ್ಟ ರಥದಿಂದ (ಕೂತುಕೊಂಡು ಕಪಿಗಳ ಸೈನ್ಯದ ಮಧ್ಯ ದಲ್ಲಿ) ಸಂಚರಿಸಿದನು. ॥೫೫॥

ಲಕ್ಷ್ಮಣನಿಂದ ಕುಂಭಕರ್ಣನು ಸಂಹರಿಸಿಕೊಳ್ಳಲ್ಪಟ್ಟನೆಂದು ಗ್ರಂಥಾಂತರ ವಿರೋಧವನ್ನು ಅತಿಕಾಯ ಶಬ್ದದ ನಿರುಕ್ತಿಪೂರ್ವಕವಾಗಿ ಎರಡು ಹೆಸರು ಹೇಳಿದರಿಂದ ಪರಿಹರಿಸುತ್ತಾರೆ,

ಮೂ ॥ ಬೃಹತ್ತನುಃ ಕುಂಭವದೇವ ಕರ್ಣಾ-
ವಸ್ಯೇತ್ಯತೋ ನಾಮ ಚ ಕುಂಭಕರ್ಣಃ ।
ಇತ್ಯಸ್ಯ ಸೋಽಕರ್ಕಾತ್ಮಜಪೂರ್ವಕಾನ್ಕಪೀನ್
ಜಿಗಾಯ ರಾಮಂ ಸಹಸಾಭ್ಯಧಾವತ್ ॥೫೭॥

ಅ ॥ ಯಾವ (ಕಾರಣದ್ದೆಸೆಯಿಂದ) ಈ ಅತಿಕಾಯನಿಗೆ ಸ್ಥೂಲವಾದ ದೇಹವು ಇದೆಯೋ (ಆದ್ದರಿಂದ ಅತಿಕಾಯನೆಂದು ಹೆಸರು.) (ಯಾವಕಾರಣದ್ದೆಸೆಯಿಂದ) ಇವನಿಗೆ ಮಡಿಕೆಯಂತೆ ಕಿವಿಗಳು ಇವೆಯೋ ಅದ್ದರಿಂದ ಇವನಿಗೆ ಕುಂಭಕರ್ಣನೆಂದು ಹೆಸರು ಪ್ರಸಿದ್ಧಿಯಾಗಿದೆ. (ಈ ಪ್ರಕಾರವಾಗಿ ಇವನಿಗೆ ಎರಡು ಹೆಸರು) ಅಥವಾ ಯಾರು ದೊಡ್ಡಶರೀರವುಳ್ಳವನೋ ಈ ಅತಿಕಾಯನಿಗೆ ಕಿವಿಗಳೇ ಮಡಿಕೆಗಳಂತೆಯೇ ಇರುತ್ತವೆ. ಈ ಕಾರಣದಿಂದ ಈ ಅತಿಕಾಯನಿಗೆ 'ಕುಂಭಕರ್ಣ'ಃ ಎನ್ನುವ ನಾಮಧೇಯವೂ ಕೂಡ ಇದೆ. (ಬೃಹತ್ತನುಃ ಎನ್ನುವುದರಿಂದ ಅತಿಕಾಯ ಶಬ್ದಾರ್ಥವೂ ಸೂಚಿತವಾಯಿತು.) ಆ ಅತಿಕಾಯನು ಸೂರ್ಯಪುತ್ರನಾದ ಸುಗ್ರೀವನೇ ಮೊದಲಾಗಿವುಳ್ಳ ಕಪಿಗಳನ್ನು ಗೆದ್ದನು. ಆ ಅತಿಕಾಯನೇ ರಾಮನ ಸಮೀಪಕ್ಕೆ ಶೀಘ್ರದಿಂದ (ಯುದ್ಧಕ್ಕೋಸ್ಕರ) ಓಡಿಹೋದನು.

**ವಿಶೇಷಾಂಶ —** (1) ಒಬ್ಬನಿಗೇನೇ ಅತಿಕಾಯನೆಂದೂ ಕುಂಭಕರ್ಣನೆಂದೂ ಹೆಸರು ಇದ್ದ ಪ್ರಯುಕ್ತ ರಾವಣನ ಮಗನನ್ನು ಲಕ್ಷ್ಮಣನು ಸಂಹರಿಸಿದ್ದಲ್ಲದೆ ರಾವಣನ ತಮ್ಮನಾದ ಕುಂಭಕರ್ಣನನ್ನು ಸಂಹರಿಸಿದ್ದಲ್ಲ. ಎಂದು ತಿಳಿಯತಕ್ಕದ್ದು. (2) ಮೂಲರಾಮಾಯಣದಲ್ಲಿ ಅತಿಕಾಯನಿಗೇನೇ ಕುಂಭಕರ್ಣ ಎನ್ನುವ ನಾಮಧೇಯವೂ ಇದೆ ಎಂದು ನಿರೂಪಿತವಾಗಿದೆ. ಆದುದರಿಂದ ಅದರ ತಾತ್ಪರ್ಯವನ್ನು ಇಲ್ಲಿ ಹೇಳಿರುವರು. ॥೫೭॥

ಮೂ ॥ ತಮಾಪತಂತಂ ಶರವರ್ಷಧಾರಂ
ಮಹಾಘನಾಭಂ ಸ್ತನಯಿತ್ನುಘೋಷಂ ॥
ನಿವಾರಯಾಮಾಸ ಯಥಾ ಸಮೀರಃ
ಸೌಮಿತ್ರಿರಾತ್ತೇಷ್ವಸನಃ ಶರೌಘೈಃ ॥೫೭॥

ಅ ॥ ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ ಲಕ್ಷ್ಮಣನು ಬಾಣಗಳ ವೃಷ್ಟಿಯ ಪರಂಪರೆಯುಳ್ಳ ಮಹತ್ತಾದ ಮೇಘದಂತೆ ಕಾಂತಿಯುಳ್ಳ (ಅಂದರೆ ಅತ್ಯಂತವಾಗಿ ಕೃಷ್ಣವರ್ಣವುಳ್ಳ) ಮೇಘದ ಘರ್ಜನೆಯಂತೆ ಘರ್ಜನೆಯುಳ್ಳ ಇದಿರಾಗಿ ಬರತಕ್ಕ ಆ ಅತಿಕಾಯನನ್ನು ಗಾಳಿಯು ಮೇಘವನ್ನೆಂಬಂತೆ ಬಾಣಗಳ ಸಮೂಹಗಳಿಂದ ತಡೆದನು ॥೫೭॥

ಮೂ ॥ ವವರ್ಷತುಸ್ತಾವತಿ ಮಾತ್ರವೀರ್ಯೌ
ಶರಾನ್ಸುರೇಶಾಶನಿತುಲ್ಯವೇಗಾನ್ ॥
ತನೋಽಮಯಂ ಚಕ್ರತುರಂತರಿಕ್ಷಂ
ಸುಶಿಕ್ಷಿಯೋ ಕ್ಷಿಪ್ರತರಾ (ಮಾ) ಸ್ತ್ರಧಾಜ್ಯೈಃ ॥೫೮॥

ಅ ॥ ಪರಿಮಾಣವನ್ನು ಅತಿಕ್ರಮಿಸಿದ ಪರಾಕ್ರಮವುಳ್ಳ (ಅಂದರೆ ಇತರರಾದ ಪರಾಕ್ರಮಶಾಲಿಗಳ ಪರಾಕ್ರಮದಿಂದಲೂ ಹೆಚ್ಚು ಪರಾಕ್ರಮವುಳ್ಳ) ಆ ಲಕ್ಷ್ಮಣ ಅತಿಕಾಯರಿಬ್ಬರೂ

ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದ ವೇಗವುಳ್ಳ ಬಾಣಗಳನ್ನು ವರ್ಷಿಸಿಕೊಂಡರು. ಅತ್ಯಂತ ವೇಗದಿಂದ ಕೂಡಿದ ಅಸ್ತ್ರವೂ ಬಾಣವೂ ಇವುಗಳಿಂದ ಶೋಭನವಾದ ಶಿಕ್ಷೆಯಿಂದ ಅವರಿಬ್ಬರು ಆಕಾಶವನ್ನು ಅಂಧಕಾರದಿಂದ ವ್ಯಾಪ್ತವಾದದ್ದನ್ನಾಗಿ ಮಾಡಿದರು ॥೫೮॥

ಮೂ ॥ ಶರೈಃ ಶರಾನಸ್ಯ ನಿವಾರ್ಯ ವೀರಃ
ಸೌಮಿತ್ರಿರಸ್ತ್ರಾಣಿ ಮಹಾಸ್ತ್ರಜಾಲೈಃ ।
ಚಿಚ್ಛೇದ ಬಾಹೂ ಶಿರಸಾ ಸಹೈವ
ಚತುರ್ಭುಜೋಽಭೂತ್ಸ ಪುನರ್ದ್ವಿಶೀರ್ಷಃ ॥೫೯॥

ಅ ॥ ಪರಾಕ್ರಮಶಾಲಿಯಾದ ಲಕ್ಷ್ಮಣನು (ತನ್ನ) ಬಾಣಗಳಿಂದ ಈ ಅತಿಕಾಯನ ಬಾಣಗಳನ್ನು ತಡೆದು, ದಿವ್ಯಾಸ್ತ್ರಗಳ ಸಮೂಹಗಳಿಂದ ಅತಿಕಾಯನ ಅಸ್ತ್ರಗಳನ್ನೂ ತಡೆದು ಶಿರಸ್ಸಿನಿಂದ ಕೂಡಿದ ಬಾಹುಗಳನ್ನು ಕತ್ತರಿಸಿದನು. ಆ ಅತಿಕಾಯನು ಬಾಹು ಶಿರಸ್ಸುಗಳನ್ನು ಛೇದಿಸಿದ ಮೇಲೆ ನಾಲ್ಕು ಬಾಹುಗಳುಳ್ಳವನೂ, ಎರಡು ತಲೆಯುಳ್ಳವನೂ ಆದನು ॥೫೯॥

ಮೂ ॥ ಛಿನ್ನೇಷು ತೇಷು ದ್ವಿಗುಣಾಸ್ಯ ಬಾಹುಃ
ಪುನಃ ಪುನಃ ಸೋಽಥ ಬಭೂವ ವೀರಃ ।
ಉವಾಚ ಸೌಮಿತ್ರಿಮಥಾಂತರಾತ್ಮಾ
ಸಮಸ್ತಲೋಕಸ್ಯ ಮರುದ್ವಿಪಶ್ಚಿತ್ ॥೬೦॥

ಅ ॥ ಆ ನಾಲ್ಕು ಭುಜಗಳೂ, ಎರಡು ತಲೆಗಳೂ ಕತ್ತರಿಸಲ್ಪಡುತ್ತಿರಲು ಆ ಮೇಲೆ ಆ ಪರಾಕ್ರಮಶಾಲಿಯಾದ ಅತಿಕಾಯನು ಮತ್ತು ಆಸ್ಯಗಳನ್ನೂ ಬಾಹುಗಳನ್ನೂ ಛೇದಿಸಿದ ಕೂಡಲೇ ಎರಡರಿಂದ ಗುಣಿಸಿದ ಆಸ್ಯ-ಭುಜಗಳುಳ್ಳವನಾದನು. (ಅಂದರೆ ನಾಲ್ಕು ಭುಜಗಳನ್ನೂ ಎರಡೂ ತಲೆಗಳನ್ನೂ ಕತ್ತರಿಸಿದ ಮೇಲೆ ಎಂಟು ಭುಜಗಳೂ, ನಾಲ್ಕು ತಲೆಯುಳ್ಳವನೂ ಆದನು. ನಾಲ್ಕುತಲೆ, ಎಂಟು ಭುಜಗಳನ್ನು ಛೇದಿಸಿದಕೂಡಲೆ ಎಂಟುತಲೆ, ಹದಿನಾರು ಭುಜಗಳುಳ್ಳವನಾದನು ಹೀಗೆ ಹೆಚ್ಚಾಗುತ್ತಿದ್ದವು. ಆ ಮೇಲೆ ಎಲ್ಲಾಲೋಕದ ಅಂತರ್ಯಾಮಿಯಾದ ಮುಖ್ಯಪ್ರಾಣದೇವರು (ಛೇದನಕ್ರಿಯೆಯಿಂದ) ಬಳಲಿದ ಲಕ್ಷ್ಮಣನನ್ನು ಹೀಗೆಂದು ಹೇಳಿದರು ॥೬೦॥

ಮೂ ॥ ಬ್ರಹ್ಮಾಸ್ತ್ರತೋಽನ್ಯೇನ ನ ವಧ್ಯ ಏಷೋ(ಷ)
ವರಾದ್ವಿಧಾತುಃ ಸುಮುಖೇತ್ಯದೃಶ್ಯಃ ।
ರಕ್ಷಃ ಸುತಸ್ಯಾಶ್ರವಣೀಯಮಿತ್ಥ-
ಮುಕ್ತ್ವಾ ಸಮೀರೋಽರುಹದಂತರಿಕ್ಷಂ ॥೬೧॥

ಅ ॥ ಲಕ್ಷ್ಮಣನು ಹೊರತು ಇತರ ದೃಷ್ಟಿಗೆ ಅಗೋಚರರಾದ ಮುಖ್ಯಪ್ರಾಣದೇವರು ಹೇ ಶೋಭಾಯಮಾನವಾದ ಮುಖವುಳ್ಳವನೇ! ಈ ಅತಿಕಾಯನು ಬ್ರಹ್ಮನ ವರದಿಂದಲೇ (ಅಂದರೆ ಬ್ರಹ್ಮದೇವರಿಂದ ಅವಧ್ಯತ್ವರೂಪವಾದ ವರವನ್ನು ಪಡೆದಿರೋಣದರಿಂದ) ಬ್ರಹ್ಮಾಸ್ತ್ರದಿಂದ ಹೊರತು ಇತರ ಬಾಣಗಳಿಂದ ಕೊಲ್ಲಲಿಕ್ಕೆ ಅಶಕ್ಯನು. ಈ ಪ್ರಕಾರವಾಗಿ ರಾವಣನ ಮಗನಾದ ಅತಿಕಾಯನ ಕಿವಿಗೆ ಕೇಳದ ಹಾಗೆ ಹೇಳಿ ಆಕಾಶವನ್ನು ಏರಿದರು ॥೬೧॥

ಮೂ ॥ ಅಥಾನುಜೋ ದೇವತಮಸ್ಯ ಸೋಽಸ್ತ್ರಂ
ಬ್ರಾಹ್ಮಂ ತನೂಜೇ ದಶಕಂಧರಸ್ಯ ॥
ಮುಮೋಚ ದಗ್ಧಃ ಸರಥಾಶ್ವಸೂತಃ
ತೇನಾತಿಕಾಯಃ ಪ್ರವರೋಽಸ್ತ್ರವಿತ್ಸು ॥೬೨॥

ಅ ॥ ಆ ವಾಯುದೇವರ ವಚನಾನಂತರದಲ್ಲಿ ದೇವಶ್ರೇಷ್ಠರಾದ ರಾಮದೇವರ ತಮ್ಮನಾದ ಲಕ್ಷ್ಮಣನು ಬ್ರಹ್ಮದೇವರ ಸಂಬಂಧಿಯಾದ ಅಸ್ತ್ರವನ್ನು ಹತ್ತು ತಲೆಗಳುಳ್ಳ ರಾವಣನ ಮಗನಾದ ಅತಿಕಾಯನಲ್ಲಿ ಬಿಟ್ಟನು. ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ ಅತಿಕಾಯನು ಆ ಬ್ರಹ್ಮಾಸ್ತ್ರದಿಂದ ರಥಗಳೂ, ಕುದುರೆಗಳೂ, ಸೂತನೂ ಇವರಿಂದ ಕೂಡಿದವನಾಗಿ ಸುಡಲ್ಪಟ್ಟನು ॥೬೨॥

ಮೂ ॥ ಹತೇಷು ಪುತ್ರೇಷು ಸ ರಾಕ್ಷಸೇಶಃ
ಸ್ವಯಂ ಪ್ರಯಾಣಂ ಸಮರಾರ್ಥಮೈಚ್ಛತ್ ॥
ಸಜ್ಜೀಭವತ್ಯೇವ ನಿಶಾಚರೇಶೇ
ಖರಾತ್ಮಜಃ ಪ್ರಾಹ ಧನುರ್ಧರೋತ್ತಮಃ ॥೬೩॥

ಅ ॥ ಮಕ್ಕಳು ಸಂಹರಿಸಿಕೊಳ್ಳಲ್ಪಡುತ್ತಿರಲು ಆ ರಾವಣನು ತಾನು ಯುದ್ಧಕ್ಕೋಸ್ಕರ ಪ್ರಯಾಣವನ್ನು ಇಚ್ಛಿಸಿದನು. ರಾಕ್ಷಸರಿಗೆ ಸ್ವಾಮಿಯಾದ ರಾವಣನು ಯುದ್ಧಕ್ಕೋಸ್ಕರ ಸನ್ನದ್ಧನಾಗುತ್ತಿರಲು, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಖರಾಸುರನ ಮಗನಾದ ಮಕರಾಕ್ಷನು (ರಾವಣನ್ನು ಕುರಿತು) ಹೀಗೆಂದು ಹೇಳಿದನು. ॥೬೩॥

ಮೂ ॥ ನಿಯುಂಕ್ಷ್ವ ಮಾಂ ಮೇ ಪಿತುರಂತಕಸ್ಯ
ವಧಾಯ ರಾಜನ್ಸಹಲಕ್ಷ್ಮಣಂ ತಂ ॥
ಕಪಿಪ್ರವೀರಾಂಶ್ಚ ನಿಹತ್ಯ ಸರ್ವಾನ್
ಪ್ರತೋಷಯೇ ತ್ವಾಮಹಮದ್ಯ ಸುಷ್ಠು ॥೬೪॥

ಅ ॥ ಎಲೋ ರಾಜನೇ! ನನ್ನ ತಂದೆಯಾದ ಖರಾಸುರನಿಗೆ ಮೃತ್ಯುಭೂತನಾದ ರಾಮನ ನಾಶಕ್ಕೋಸ್ಕರ ನನ್ನನ್ನು ಆಜ್ಞಾಪಿಸು. ನಾನು ಲಕ್ಷ್ಮಣನಿಂದ ಕೂಡಿದ ಶ್ರೀ ರಾಮನನ್ನೂ ಎಲ್ಲಾ ಕಪಿಶ್ರೇಷ್ಠರನ್ನೂ ಸಂಹರಿಸಿ ನಿನ್ನನ್ನು ಚೆನ್ನಾಗಿ ಈಗಲೇ ಸಂತೋಷಪಡಿಸುತ್ತೇನೆ. ॥೬೪॥

ಮೂ ॥ ಇತೀರಿತೇ ತೇನ ನಿಯೋಜಿತಃ ಸ
ಜಗಾಮ ವೀರೋ ಮಕರಾಕ್ಷನಾಮಾ ॥
ವಿಧೂಯ ಸರ್ವಾಂಶ್ಚ ಹರಿಪ್ರವೀರಾನ್
ಸಹಾಂಗದಾನ್ಸೂರ್ಯಸುತೇನ ಸಾಕಂ ॥೬೫॥
ಅಚಿಂತಯಲ್ಲಕ್ಷ್ಮಣಬಾಣಸಂಘಾ-
ನವಜ್ಞಯಾ ರಾಮಮಥಾಹ್ವಯದ್ರಣೇ ॥
ಉವಾಚ ರಾಮಂ ರಜನೀಚರೋಽಸೌ
ಹತೋ ಜನಸ್ಥಾನಗತಃ ಪಿತಾ ತ್ವಯಾ ॥೬೬॥

ಕೇನಾಪ್ಯ ಸಾಂತೇನ ಧನುರ್ಧರಾಣಾಂ
ವರಃ ಫಲಂ ತಸ್ಯ ದದಾಮಿ ತೇಽದ್ಯ ॥
ಇತಿ ಬ್ರುವಾಣಃ ಸ ಸರೋಜಯೋನೇಃ
ವರಾದವಧ್ಯೋಽವಮುಚದಸ್ತ್ರಸಂಘಾನ್ ॥೬೭॥

ಅ ॥ ಈ ಪ್ರಕಾರವಾಗಿ ಮಕರಾಕ್ಷನಿಂದ ಹೇಳಲ್ಪಡುತ್ತಿರಲು ಆ ರಾವಣನಿಂದ ಆಜ್ಞಾಪಿಸಲ್ಪಟ್ಟ ವೀರನಾದ ಆ ಮಕರಾಕ್ಷನೆಂದು ಹೆಸರುಳ್ಳವನು (ಯುದ್ಧಕ್ಕಾಗಿ) ಹೋದನು. ಅಂಗದನಿಂದ ಸಹಿತರಾದ ಸೂರ್ಯಪುತ್ರನಾದ ಸುಗ್ರೀವನಿಂದಲೂಕೂಡಿದ ಎಲ್ಲಾ ಕಪಿಶ್ರೇಷ್ಠರನ್ನು ತಿರಸ್ಕರಿಸಿ ಲಕ್ಷ್ಮಣನಿಂದ ಬಿಡಲ್ಪಟ್ಟ ಬಾಣಗಳ ಸಮೂಹವನ್ನು ತಿರಸ್ಕಾರದಿಂದ ಗಣನೆಮಾಡದೆ, ಅನಂತರದಲ್ಲಿ ಯುದ್ಧಕ್ಕಾಗಿ ರಾಮನನ್ನು ಕರೆದನು. ಈ ಮಕರಾಕ್ಷನು ರಾಮನನ್ನು ಕುರಿತು ಹೀಗೆಂದು ಹೇಳಿದನು- ದಂಡಕಾರಣ್ಯವನ್ನು ಕುರಿತು ಬಂದ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ (ನನ್ನ) ತಂದೆಯು ನಿನ್ನಿಂದ ಮಂತ್ರ-ಔಷಧ-ಛದ್ಮಾದ್ಯುಪಾಯಗಳಿಂದ ಸಂಹರಿಸಿಕೊಳ್ಳಲ್ಪಟ್ಟನು. ಅದರ ಫಲವನ್ನು ಈಗ ನಿನಗೋಸ್ಕರ ಕೊಡುತ್ತೇನೆ. ಈ ಪ್ರಕಾರವಾಗಿ ಹೇಳತಕ್ಕ ಬ್ರಹ್ಮದೇವರ ವರದಿಂದ ಅವಧ್ಯನಾದ ಈ ಮಕರಾಕ್ಷನು (ರಾಮನಮೇಲೆ) ಬಾಣವೃಷ್ಟಿಯನ್ನು ಸುರಿಸಿದನು. ॥೬೫॥೬೬॥೬೭॥

ಮೂ ॥ ಪ್ರಹಸ್ಯ ರಾಮೋಽಸ್ಯ ನಿವಾರ್ಯ ಚಾಸ್ತ್ರೈ-
ರಸ್ತ್ರಾಣ್ಯಮೇಯೋಽಶನಿಸನ್ನಿಭೇನ ॥
ಶಿರಃ ಶರೇಣೋತ್ತಮಕುಂಡಲೋಜ್ಜ್ವಲಂ
ಖರಾತ್ಮಜಸ್ಯಾಥ ಸಮುನ್ಮಮಾಥ ॥೬೮॥

ಅ ॥ ಸರ್ವಪ್ರಕಾರದಿಂದಲೂ ತಿಳಿಯಲಿಕ್ಕೆ ಅಶಕ್ಯನಾದ ರಾಮನು ನಗಾಡಿಕೊಂಡು ಈ ಮಕರಾಕ್ಷನ ಅಸ್ತ್ರಗಳನ್ನು (ತನ್ನ) ಅಸ್ತ್ರಗಳಿಂದ ತಡೆದು ಅನಂತರದಲ್ಲಿ ವಜ್ರಾಯುಧಕ್ಕೆ ಸದೃಶವಾದ ಬಾಣದಿಂದ ಉತ್ತಮವಾಗಿರುವ ಕುಂಡಲಗಳಿಂದ ಪ್ರಕಾಶಮಾನವಾದ ಖರಾಸುರನ ಮಗನಾದ ಮಕರಾಕ್ಷನ ಶಿರಸ್ಸನ್ನು ಕತ್ತರಿಸಿದನು ॥೬೮॥

ಮೂ ॥ ವಿದುದ್ರುವುಸ್ತಸ್ಯ ತು ಯೇಽನುಯಾಯಿನಃ
ಕಪಿಪ್ರವೀರೈರ್ನಿಹತಾವಶೇಷಿತಾಃ ॥
ಯಥೈವ ಧೂಮ್ರಾಕ್ಷಮುಖೇಷು ಪೂರ್ವಂ
ಹತೇಷು ಪೃಥ್ವೀರುಹಶೈಲಧಾರಿಭಿಃ ॥೬೯॥

ಅ ॥ ವೃಕ್ಷಗಳನ್ನೂ ಪರ್ವತಗಳನ್ನೂ ಧರಿಸಿಕೊಂಡಿರತಕ್ಕ ಕಪಿಶ್ರೇಷ್ಠರಿಂದ ಕೊಲ್ಲಲ್ಪಟ್ಟು ಉಳಿದ ಆ ಮಕರಾಕ್ಷನ ಯಾವ ಭೃತ್ಯರಿದ್ದಾರೋ ಅವರು ಧೂಮ್ರಾಕ್ಷ ಮೊದಲಾದವರು ಮೊದಲು ಸತ್ತಕೂಡಲೇ ಆ ಭೃತ್ಯರು ಹೇಗೆ ಓಡಿ ಹೋಗಿದ್ದಾರೋ ಹಾಗೆಯೇ ಇವರು ಓಡಿಹೋದರು ॥೬೯॥

ಮೂ ॥ ತತಃ ಸ ಸಜ್ಜೀಕೃತ ಆ(ನಾ)ತ್ತಧನ್ವಾ
ರಥಂ ಸಮಾಸ್ಥಾಯ ನಿಶಾಚರೇಶ್ವರಃ ।
ವೃತಃ ಸಹಸ್ರಾಯುತಕೋಟ್ಯನೀಕಪೈ-
ರ್ನಿಶಾಚರೈರಾಜು ಯಯೌ ರಣಾಯ ॥೨೦॥

ಅ ॥ ಆ ಮೇಲೆ ಯುದ್ಧ ಸಾಮಗ್ರ್ಯದಿಂದ ಕೂಡಿದ (ಅಂದರೆ ಭೃತ್ಯರಿಂದ ಕವಚ ಬಂಧಾದಿಗಳಿಂದ ಸನ್ನದ್ಧನಾಗಿ ಮಾಡಲ್ಪಟ್ಟ) ಹಿಡಿಯಲ್ಪಟ್ಟ ಧನುಸ್ಸುಳ್ಳ ರಾವಣನು ಸಹಸ್ರ ಸಂಖ್ಯಾಕರಾದ, ಅಯುತ ಸಂಖ್ಯಾಕರಾದ, ಕೋಟಿಸಂಖ್ಯಾಕರಾದ ಸಾವಿರಾವರ್ತಿ ಅಥವಾ ಅಯುತ ಸಂಖ್ಯಾಕಗಳಾದ ಕೋಟಿ ಸೇನಾಧಿಪತಿಗಳುಳ್ಳ, (ಅಂದರೆ ಕೋಟ್ಯಾವರ್ತಿ ಕೋಟಿ ಸಂಖ್ಯಾಕರಾದ ಸೇನಾಧಿಪತಿಗಳಿಂದ ಕೂಡಿದ) ರಾಕ್ಷಸರಿಂದ ಕೂಡಿಕೊಂಡವನಾಗಿ ರಥವನ್ನೇರಿ ಯುದ್ಧಕೋಸ್ಕರ ಹೊರಟುಹೋದನು ॥೨೦॥

ಮೂ ॥ ಬಲೈಸ್ತು ತಸ್ಯಾಥ ಬಲಂ ಕಪೀನಾಂ
ನೈಕಪ್ರಕಾರಾಯುಧಪೂಗಭಗ್ನಂ ॥
ದಿಶಃ ಪ್ರದುದ್ರಾವ ಹರೀಂದ್ರಮುಖ್ಯಾ
ಸಮರ್ದಯನ್ನಾಶು ನಿಶಾಚರಾಂಸ್ತದಾ ॥೨೧॥

ಅ ॥ ಆ ರಾವಣನ ಸೈನ್ಯಗಳಿಂದ ಬಹುವಿಧಗಳಾದ ಆಯುಧಗಳ ಸಮೂಹಗಳಿಂದ ಪರಾಜಯವನ್ನು ಹೊಂದಿದ ಕಪಿಗಳ ಸಮೂಹವು ದಿಕ್ಕುದಿಕ್ಕಿಗೆ ಓಡಿಹೋಯಿತು. ಆವಾಗ ಕಪಿಶ್ರೇಷ್ಠರು ಶೀಘ್ರದಲ್ಲಿ ರಾಕ್ಷಸರನ್ನು ಚೆನ್ನಾಗಿ ಮರ್ದಿಸಿದರು ॥೨೧॥

ಮೂ ॥ ಗಜೋ ಗವಾಕ್ಷೋ ಗವಯೋ ವೃಷಶ್ಚ
ಸಗಂಧಮಾದಾ ಧನದೇನ ಜಾತಾಃ ॥
ಪ್ರಾಣಾದಯಃ ಪಂಚ ಮರುತ್ಪ್ರವೀರಾಃ
ಸ ಕಥನೋ ವಿತ್ತಪತಿಶ್ಚ ಜಘ್ನುಃ ॥೨೨॥

ಅ ॥ ಮೊದಲು ನಲುವತ್ತೊಂಬತ್ತು (೪೯) ವಾಯುಗಳಲ್ಲಿ ಶ್ರೇಷ್ಠರಾದ ಪ್ರಾಣಾದಿಗಳೈವರು (ಈಗ ರಾಮಾವತಾರ ಕಾಲದಲ್ಲಿ) ಕಥನನೆಂದು ಹೆಸರುಳ್ಳವಾನರರೂಪಿಯಾದ ಕುಬೇರನಿಂದ ಹುಟ್ಟಿದ್ದಾರೆ. ಗಂಧಮಾದನಿಂದ ಕೂಡಿದ ಗಜನು, ಗವಾಕ್ಷನು, ಗವಯನು, ವೃಷನು (ಹೀಗೆ ಇವರ ಹೆಸರುಗಳು). (ಆ ಪ್ರಸಿದ್ಧರಾದ ಗಜಾದಿಗಳ ತಂದೆಯಾದ ಕುಬೇರನು ಕಥನನೆಂದು ಹೆಸರುಳ್ಳವನು ಆದನು). ವಾನರನಾದ ಕಥನನೂ ಗಜಾದಿ ಐವರೂ ಹೀಗೆ ಆರು ಮಂದಿ (ರಾವಣನಿಗೂ ಅವನ ಸೈನ್ಯಕ್ಕೂ) ಹೊಡೆದರು ॥೨೨॥

ಮೂ ॥ ಶರೈಸ್ತು ತಾನ್ಸಧ್ವಿರಮೋಘವೇಗೈ-
ರ್ನಿಪಾತಯಾಮಾಸ ದಶಾನನೋ ದ್ರಾಕ್ ॥
ಅಥಾಶ್ವಿಪುತ್ರೌ ಚ ಸಜಾಂಬವಂತೌ
ಪ್ರಜಹ್ರತುಃ ಶೈಲವರೈಸ್ತ್ರಿಭಿಸ್ತಂ ॥೨೩॥

ಅ ॥ ಆ ರಾವಣನು ಆರು ಕಪಿಗಳನ್ನು ವ್ಯರ್ಥವಾಗದೆ ಇರುವ ಅತ್ಯಂತ ವೇಗವುಳ್ಳ ಆರು ಬಾಣಗಳಿಂದ ಕೂಡಲೇ ಕೆಡ ಹಾಕಿದನು. ಅನಂತರದಲ್ಲಿ ಜಾಂಬವಂತನಿಂದ ಕೂಡಿದ ಅಶ್ವಿನೀ ದೇವತೆಗಳ ಅವತಾರಭೂತರಾದ ಮೈಂದ–ವಿವಿದರು ಮೂರು ಪರ್ವತ ಶ್ರೇಷ್ಠಗಳಿಂದ ಆ ರಾವಣನಿಗೆ ಹೊಡೆದರು ॥೭೩॥

ಮೂ ॥ ಗಿರೀನ್ನಿದಾರ್ಯಾಶು ಶರೈರಥಾನ್ಯಾಂ-
ಶ್ಚರಾನ್ದಶಾಸ್ಯೋಽನುಚದಾಶು ತೇಷು ॥
ಏಕೈಕಮೇಭಿರ್ವಿನಿಪಾತಿತಾಸ್ತೇ
ಸಸಾರ ತಂ ಶಕ್ರಸುತಾತ್ಮಜೋಽಥ ॥೭೪॥

ಅ ॥ ಹತ್ತು ಮುಖಗಳುಳ್ಳ ರಾವಣನು ಬಾಣಗಳಿಂದ ಶೀಘ್ರದಲ್ಲಿ ಮೂರು ಪರ್ವತ ಗಳನ್ನು ಸೀಳಿ ಆ ಮೇಲೆ ಬೇರೆ ಮೂರು ಬಾಣಗಳನ್ನು ಹಿಡಿದು ಆ ಮೈಂದ ವಿವಿದಾದಿಗಳಲ್ಲಿ ಒಂದೊಂದಾಗಿ ಬಿಟ್ಟನು. ಈ ರಾವಣನು ಬಿಟ್ಟ ಬಾಣಗಳಿಂದ ಅವರು ಬಿದ್ದರು. ಆ ಮೇಲೆ ಇಂದ್ರ ಪುತ್ರನಾದ ವಾಲಿಯ ಮಗನಾದ ಅಂಗದನು ಆ ರಾವಣನನ್ನು ಯುದ್ಧಕ್ಕೋಸ್ಕರ ಅನುಸರಿಸಿದನು. ॥೭೪॥

ಮೂ ॥ ಶಿಲಾಂ ಸಮಾದಾಯ ತಮಾಪತಂತಂ
ಬಿಭೇದ ರಕ್ಷೋ ಹೃದಯೇ ಶರೇಣ
ದೃಢಾಹತಃ ಸೋಽಪ್ಯಗಮದ್ಧರಾತಲಂ
ರವೇಃ ಸುತೋಽಥೈನಮಭಿಪ್ರಜಗ್ಮಿವಾನ್ ॥೭೫॥

ಅ ॥ ರಾವಣನು ಕಲ್ಲನ್ನು ಹಿಡಿದುಕೊಂಡು ತನಗೆ ಎದುರಾಗಿ ಬರತಕ್ಕ ಆ ಅಂಗದ ನನ್ನು ಹೃದಯದಲ್ಲಿ ಬಾಣದಿಂದ ಭೇದಿಸಿದನು. ಚೆನ್ನಾಗಿ ಹೊಡೆಯಲ್ಪಟ್ಟ ಆ ಅಂಗದನು ಭೂಮಿಯನ್ನು ಹೊಂದಿದನು (ಅಂದರೆ ಅಂಗದನನ್ನು ಕೆಡಹಾಕಿದನು) ಅನಂತರದಲ್ಲಿ ಸೂರ್ಯ ಪುತ್ರನಾದ ಸುಗ್ರೀವನು ಈ ರಾವಣನನ್ನು ಕುರಿತು ಇದಿರಾಗಿ ಬಂದನು ॥೭೫॥

ಮೂ ॥ ತದ್ಧಸ್ತಗಂ ಭೂರುಹಮಾಶು ಬಾಣೈ-
ರ್ದಶಾನನಃ ಖಂಡಶ ಏವ ಕೃತ್ವಾ ॥
ಗ್ರೀವಾಪ್ರದೇಶೇಽಸ್ಯ ಮುಮೋಚ ಬಾಣಂ
ಭೃಶಾಹತಃ ಸೋಽಪಿ ಪಪಾತ ಭೂಮೌ ॥೭೬॥

ಅ ॥ ರಾವಣನು ಬಾಣಗಳಿಂದ ಆ ಸುಗ್ರೀವನ ಕೈಯಲ್ಲಿದ್ದ ವೃಕ್ಷವನ್ನು ಶೀಘ್ರದಲ್ಲಿ ತುಂಡು ತುಂಡನ್ನಾಗಿ ಮಾಡಿ ಈ ಸುಗ್ರೀವನ ಕುತ್ತಿಗೆಯ ಮೂಲದಲ್ಲಿ ಬಾಣವನ್ನು ಬಿಟ್ಟನು. ಆ ಸುಗ್ರೀವನಾದರೂ ಚೆನ್ನಾಗಿ ಹೊಡೆಯಲ್ಪಟ್ಟವನಾಗಿ ಭೂಮಿಯಲ್ಲಿ ಬಿದ್ದನು ॥೭೬॥

ಮೂ ॥ ಅಥೋ ಹನೂಮಾನುರಗೇಂದ್ರ ಭೋಗ-
ಸಮಂ ಸ್ವಬಾಹುಂ ಭೃಶಮುನ್ನಮಯ್ಯ ॥
ತತಾಡ ವಕ್ಷಸ್ಯಧಿಪಂ ತು ರಕ್ಷಸಾಂ
ಮುಖೈಃ ಸ ರಕ್ತಂ ಪ್ರವಮನ್ಪಪಾತ ॥೭೭॥

ಅ ॥ ಅನಂತರದಲ್ಲಿ ಹನುಮಂತನು ಸರ್ವಶ್ರೇಷ್ಠನಾದ ಶೇಷನ ಶರೀರಕ್ಕೆ ಸದೃಶವಾದ ತನ್ನ ಕೈಯನ್ನು ಚೆನ್ನಾಗಿ ಎತ್ತಿಕೊಂಡು ರಾಕ್ಷಸರಿಗೆ ಸ್ವಾಮಿಯಾದ ರಾವಣನನ್ನು ವಕ್ಷಸ್ಥಳದಲ್ಲಿ ರಾಮನೇ ರಾವಣನನ್ನು ಕೊಲ್ಲಬೇಕು ಎಂಬುವ ಕಾರ್ಯವಿಶೇಷದಿಂದ (ತಂದೆಯು ಮಗನಿಗೆ ಹೆದರಿಕೆಯನ್ನು ಹುಟ್ಟಿಸುತ್ತಾ ಕೈಯನ್ನು ಚೆನ್ನಾಗಿ ಎತ್ತಿ ಮೆಲ್ಲಗೆ ಹೇಗೆ ಹೊಡೆಯುತ್ತಾನೋ ಹಾಗೆಯೇ ಹನುಮಂತನು ರಾವಣನು ಹೇಗೆ ಸಾಯುವುದಿಲ್ಲವೋ ಹಾಗೆಯೇ ಮೆಲ್ಲಗೆ) ಹೊಡೆದನು. ಆ ರಾವಣನು ಮುಖಗಳಿಂದ ಚೆನ್ನಾಗಿ ರಕ್ತವನ್ನು ಕಾರುತ್ತಾ ಬಿದ್ದನು ॥೭೭॥

ಮೂ ॥ ಸ ಲಬ್ಧಸಂಜ್ಞಃ ಪ್ರಶಶಂಸ ಮಾರುತಿಂ
ತ್ವಯಾ ಸಮೋ ನಾಸ್ತಿ ಪುಮಾನ್ಹಿ ಕಶ್ಚಿತ್ ॥
ಕಃ ಪ್ರಾಪಯೇದನ್ಯ ಇಮಾಂ ದಶಾಂ ಮಾ-
ಮಿತೀರಿತೋ ಮಾರುತಿರಾಹ ತಂ ಪುನಃ ॥ ೭೮॥

ಅ ॥ ಹೊಂದಲ್ಪಟ್ಟ ಸಂಜ್ಞೆಯುಳ್ಳ (ಅಂದರೆ ಮೊದಲು ಪ್ರಹಾರದಿಂದ ಮೂರ್ಛಿತನಾಗಿದ್ದಾನೆ). ಆ ರಾವಣನು ವಾಯುಪುತ್ರನಾದ ಹನುಮಂತನನ್ನು ಹೊಗಳಿದನು. ನಿನಗೆ ಸದೃಶನಾದ ಪುರುಷನು ಯಾರೂ ಇಲ್ಲ. ಏಕೆಂದರೆ ನಿನ್ನಿಂದ ಬೇರೆಯಾದ ಯಾವ ಪುರುಷನು ನನ್ನನ್ನು ಈ ಮೂರ್ಛಾವಸ್ಥೆಯನ್ನು ಹೊಂದಿಸಿಯಾನು? (ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ನಿನಗೆ ಸದೃಶನೂ ಇಲ್ಲ. ನೀನೆ ಬಲಿಷ್ಠನು.) ಈ ಪ್ರಕಾರವಾಗಿ (ರಾವಣನಿಂದ) ಹೇಳಿಸಿಕೊಳ್ಳಲ್ಪಟ್ಟ ಹನುಮಂತನು ಅವನನ್ನು ಕುರಿತು ಪುನಃ ಹೇಳಿದನು ॥೭೮॥

ಮೂ ॥ ಅತ್ಯಲ್ಪಮೇತದ್ಯದುಪಾತ್ತಜೀವಿತಃ
ಪುನಸ್ತ್ವಮಿತ್ಯುಕ್ತ ಉವಾಚ ರಾವಣಃ
ಗ್ರಹಾಣ ಮತ್ತೋಽಪಿ ಸಮುದ್ಯತಂ ತ್ವಂ
ಮುಷ್ಟಿಪ್ರಹಾರಂ ತ್ವಿತಿ ತಂ ಪುಪೋಥ ॥೭೯॥

ಅ ॥ ಎಲೋ ರಾವಣನೇ! ಯಾವ ಕಾರಣದ್ದೆಶೆಯಿಂದ ನಾನು ಹೊಡೆದ ಮೇಲೆಯೂ ನೀನು ಹೊಂದಲ್ಪಟ್ಟ ಜೀವನವುಳ್ಳವನಾಗಿದ್ದೀಯೋ ಆದುದರಿಂದ ಈ ನಿನಗೆ ಕೊಟ್ಟ ಪ್ರಹಾರವು ಅತ್ಯಲ್ಪವಾದುದ್ದು. ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ರಾವಣನು ಪುನಃ ಮಾರುತಿಯನ್ನು ಕುರಿತು ಹೇಳಿದನು. ನೀನು ಚೆನ್ನಾಗಿ ಉದ್ಯುಕ್ತವಾದ ಮುಷ್ಟಿಪ್ರಹಾರವನ್ನು ನನ್ನದೆಸೆಯಿಂದಲೂ ಸ್ವೀಕರಿಸು ಎಂದು ಹನುಮಂತನನ್ನು ತನಗೆ ಶಕ್ತಿವಿಶೇಷವಿದ್ದಷ್ಟು ಹೊಡೆದನು ॥೭೯॥

ಮೂ ॥ ಕಿಂಚಿತ್ಪ್ರಹಾರೇಣ ತು ವಿಹ್ವಲಾಂಗವ-
ತ್ಸ್ಥಿತೇ ಹಿ ತಸ್ಮಿನ್ನಿದಮಂತರಂ ಮನು ॥
ಇತ್ಯಗ್ನಿಸೂನುಂ ಪ್ರಯಯೌ ಸ ರಾವಣೋ
ನಿವಾರಿತೋ ಮಾರುತಿನಾಪಿ ವಾಚಾ ॥೮೦॥

ಅ ॥ ಆ ಹನುಮಂತನು (ರಾವಣನ) ಪ್ರಹಾರದಿಂದ ಶಕ್ತಿವಿಶೇಷವಿದ್ದಷ್ಟು ಹೊಡೆದಿರುವುದರಿಂದ ಸ್ವಲ್ಪ ಚಂಚಲವಾದ ಅಂಗವುಳ್ಳವನಂತೆ (ಅಂದರೆ ಭ್ರಾಂತನಂತೆ) ಇರುತ್ತಿರಲು, ನನಗೆ ಇದೇ (ಅಂದರೆ ಹನುಮಂತನ ಅವಸ್ಥಿತಿಯು) ಹೋಗಲಿಕ್ಕೆ ಸಮಯವು ಎಂದು ವಿಚಾರಿಸಿ

ಆ ರಾವಣನು ಹನುಮಂತನಿಂದ (ಹೇಳಲ್ಪಟ್ಟ) ಮಾತಿನಿಂದ(ಪುನಃ ಯುದ್ಧ ಮಾಡು, ಹೋಗಬೇಡ ಎನ್ನುವ ಮಾತಿನಿಂದ) ತಡೆಯಲ್ಪಟ್ಟರೂ ಅಗ್ನಿಯ ಮಗನಾದ ನೀಲನನ್ನು ಕುರಿತು ಹೊರಟು ಹೋದನು. ॥೮೦॥

ಮೂ ॥ ತನೂಪತೇಂಶಂ ಪ್ರಸಮೀಕ್ಷ್ಯ ನೀಲೋ
ಧನುರ್ಧ್ವಜಾಗ್ರಾಶ್ವರಥೇಷು ತಸ್ಯ ॥
ಚಚಾರ ಮೂರ್ಧಸ್ವಪಿ ಚಂಚಲೋಽಲಂ
ಜಡೀಕೃತಸ್ತೇನ ಸ ರಾವಣೋಽಪಿ ॥೮೧॥

ಅ ॥ ನೀಲನು ಇದಿರಾಗಿ ಬರತಕ್ಕ ರಾವಣನನ್ನು ನೋಡಿ ಅತ್ಯಂತವಾಗಿ ಚಂಚಲನಾದವನಾಗಿ (ಅಂದರೆ ಒಂದು ಕಡೆಯಲ್ಲಿಯೂ ನಿಲ್ಲದೆ ಇರತಕ್ಕವನಾಗಿ) ಆ ರಾವಣನ ಧನುಸ್ಸೂ, ಧ್ವಜಪತಾಕೆಯ ತುದಿಯಲ್ಲಿಯೂ, ಕುದುರೆಗಳು, ರಥಗಳು, ಇವುಗಳಲ್ಲಿಯೂ ಸಂಚಾರ ಮಾಡಿದನು. (ಅಂದರೆ ಒಂದು ಕಡೆಯಲ್ಲಿಯೂ ನಿಲ್ಲದೆ ಧನುಸ್ಸುಗಳಲ್ಲಿ ಸಂಚರಿಸಿದನು.) ಆ ರಾವಣನಾದರೂ ಅವನಿಂದ ಅತ್ಯಂತವಾಗಿ ಕರ್ತವ್ಯಕರ್ಮದಲ್ಲಿ ವಿವೇಕಶೂನ್ಯನಾದನು ॥೮೧॥

ಮೂ ॥ ಸ ಕ್ಷಿಪ್ರಮಾದಾಯ ಹುತಾಶನಾಸ್ತ್ರಂ
ಮುಮೋಚ ನೀಲೇ ರಜನೀಚರೇಶಃ ॥
ಸ ತೇನ ಭೂಮೌ ಪತಿತೋ ನ ಚೈನಂ
ದದಾಹ ವಹ್ನಿಃ ಸ್ವತನುರ್ಯತೋಽಸೌ ॥೮೨॥

ಅ ॥ ರಾಕ್ಷಸರಿಗೆ ಸ್ವಾಮಿಯಾದ ಆ ರಾವಣನು ಶೀಘ್ರದಲ್ಲಿ ಆಗ್ನೇಯಾಸ್ತ್ರವನ್ನು ಹಿಡಿದು ನೀಲನಲ್ಲಿ ಬಿಟ್ಟನು. ಆ ನೀಲನು ಆಗ್ನೇಯಾಸ್ತ್ರದಿಂದ ಭೂಮಿಯಲ್ಲಿ ಬಿದ್ದನು. ಈ ನೀಲನು ಯಾವ ಕಾರಣದ್ದೆಸೆಯಿಂದ ತನ್ನ ಅವತಾರನೋ ಆದುದರಿಂದ ಇವನನ್ನು ಬೆಂಕಿಯು ಸುಡಲೇ ಇಲ್ಲ ॥೮೨॥

ಮೂ ॥ ತತೋಽಭ್ಯಯೌ ರಾಘವಮೇವ ರಾವಣೋ
ನಿವಾರಯಾಮಾಸ ತಮಾಶು ಲಕ್ಷ್ಮಣಃ ॥
ತತಕ್ಷತುಸ್ತಾವಧಿಕೌ ಧನುರ್ಭೃತಾಂ
ಶರೈಃ ಶರೀರಾವರಣಾವದಾರಣೈಃ ॥೮೩॥

ಅ ॥ ಅನಂತರದಲ್ಲಿ ರಾವಣನು ರಾಮನನ್ನು ಕುರಿತೇ ಹೊರಟು ಹೋದನು. ಲಕ್ಷ್ಮಣನು ಶೀಘ್ರದಲ್ಲಿ ಆ ರಾವಣನನ್ನು ತಡೆದನು. ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಅವರಿಬ್ಬರೂ ಶರೀರದ ಕವಚವನ್ನು ಭೇದಿಸತಕ್ಕ ಬಾಣಗಳಿಂದ ಹೊಡೆದುಕೊಂಡರು. ೮೩॥

ಮೂ ॥ ನಿವಾರಿತಸ್ತೇನ ದಶಾನನೋ ಭೃಶಂ
ರುಷಾನ್ವಿತೋ ಬಾಣಮಮೋಘಮುಗ್ರಂ ॥
ಸ್ವಯಂಭುದತ್ತಂ ಪರಿಕೃಷ್ಯ ಚಾಶು
ಲಲಾಟಮಧ್ಯೇ ಪ್ರಮುಮೋಚ ತಸ್ಯ ॥೮೪॥

ಅ ॥ ಆ ಲಕ್ಷ್ಮಣನಿಂದ ಚೆನ್ನಾಗಿ ತಡೆಯಲ್ಪಟ್ಟ ರಾವಣನು ಕೋಪದಿಂದ ಕೂಡಿದವನಾಗಿ ಬ್ರಹ್ಮನಿಂದ ಕೊಡಲ್ಪಟ್ಟ ಅತ್ಯಮೂಲ್ಯವಾದ, ಕ್ರೂರವಾದ (ಅಂದರೆ ಅಸಹ್ಯವಾದ) ಬಾಣವನ್ನು(ಬತ್ತಳಿಕೆಯಿಂದ)ಸೆಳೆದು ಶೀಘ್ರದಲ್ಲಿ ಆ ಲಕ್ಷ್ಮಣನ ಹಣೆಯ ಮಧ್ಯದಲ್ಲಿಬಿಟ್ಟನು॥೮೪॥

ಮೂ ॥ ಭೃಶಾಹತಸ್ತೇನ ಮುಮೋಹ ಲಕ್ಷ್ಮಣೋ
ರಥಾದವಪ್ಲುತ್ಯ ದಶಾನನೋಽಪಿ ॥
ಕ್ಷಣಾದಭಿದ್ರುತ್ಯ ಬಲಾತ್ಪ್ರಗೃಹ್ಯ
ಸ್ವಬಾಹುಭಿರ್ನೇತುಮಿಮಂ ಸಮೈಚ್ಛತ್ ॥೮೫॥

ಅ ॥ ಆ ರಾವಣನಿಂದ ಚೆನ್ನಾಗಿ ಹೊಡೆಯಲ್ಪಟ್ಟ ಲಕ್ಷ್ಮಣನು ಮೋಹವನ್ನು ಹೊಂದಿದನು. (ಮೂರ್ಛೆಯನ್ನು ಹೊಂದಿದನು) ರಾವಣನಾದರೂ ಒಂದು ಕ್ಷಣದೊಳಗೆ ರಥದ್ದೆಸೆಯಿಂದ ಕೆಳಗೆ ಹಾರಿ ಓಡಿಬಂದು ತನ್ನ ಇಪ್ಪತ್ತು ತೋಳುಗಳಿಂದಲೂ ಬಲದಿಂದ ಈ ಲಕ್ಷ್ಮಣನನ್ನು ಹಿಡಿದು (ತನ್ನದ್ದಾದ ಲಂಕಾಪಟ್ಟಣಕ್ಕೆ) ಒಯ್ಯುವುದಕ್ಕೆ ಇಚ್ಛಿಸಿದನು ॥೮೫॥

ಮೂ ॥ ಸಂಪ್ರಾಪ್ಯ ಸಂಜ್ಞಾಂ ಸ ಸುವಿಹ್ವಲೋಽಪಿ
ಸಸ್ಮಾರ ರೂಪಂ ನಿಜಮೇವ ಲಕ್ಷ್ಮಣಃ ॥
ಶೇಷಂ ಹರೇರಂಶಯುತಂ ನ ಚಾಸ್ಯ
ಸಂ (ಸ) ಚಾಲನಾಯಾಪಿ ಶಶಾಕ ರಾವಣಃ ॥೮೬॥

ಅ ॥ ಅತ್ಯಂತ ಮೂರ್ಛಿತನಾದ ಆ ಲಕ್ಷ್ಮಣನಾದರೂ ಸಂಜ್ಞೆಯನ್ನು ಹೊಂದಿ ಸಂಕರ್ಷಣರೂಪಿ ಶ್ರೀ ಪರಮಾತ್ಮನ ಅಂಶದಿಂದ ಕೂಡಿದ ತನ್ನ ಮೂಲಸ್ವರೂಪವಾದ ಶೇಷ ರೂಪವನ್ನು ಸ್ಮರಿಸಿದನು, ಆ ರಾವಣನಾದರೂ ಶೇಷನ ಅವತಾರ ಭೂತನಾದ ಲಕ್ಷ್ಮಣನನ್ನು ಹಂದಾಡಿಸುವುದಕ್ಕೂ ಕೂಡ ಸಮರ್ಥನಾಗಲಿಲ್ಲ ॥೮೬॥

ಮೂ ॥ ಬಲಾತ್ಸ್ವದೋರ್ಭಿಃ ಪರಿ(ಪ್ರತಿ) ಗೃಹ್ಯ ಚಾಖಿಲೈ-
ರ್ಯದಾ ಸ ವೀರಂ ಪ್ರಚಕರ್ಷ ರಾವಣಃ ॥
ಚಚಾಲ ಪೃಥ್ವೀ ಸಹಮೇರುಮಂದರಾ
ಸಸಾಗರಾ ನೈವ ಚಚಾಲ ಲಕ್ಷ್ಮಣಃ ॥೮೭॥

ಅ ॥ ಆ ರಾವಣನು ಯಾವಾಗ ತನ್ನ ಎಲ್ಲಾ (೨೦) ಕೈಗಳಿಂದ ಬಲತ್ಕಾರದಿಂದ ಪರಾಕ್ರಮಶಾಲಿಯಾದ ಲಕ್ಷ್ಮಣನನ್ನು ಹಿಡಿದು ಸೆಳೆದನೋ, ಆವಾಗ ಮೇರುಪರ್ವತವೂ ಮಂದರ ಪರ್ವತವೂ ಇವುಗಳಿಂದಲೂ ಕೂಡಿದ ಸಾಗರಗಳಿಂದಲೂ ಕೂಡಿದ ಭೂಮಿಯು ಹಂದಾಡಿತು. ಲಕ್ಷ್ಮಣನು ಹಂದಾಡಲೇ ಇಲ್ಲ. ॥೮೭॥

ಮೂ ॥ ಸಹಸ್ರ ಮೂರ್ಧ್ನೋಽಸ್ಯ ಬತೈಕಮೂರ್ಧನಿ(ಧ್ನಿ)
ಸಸಪ್ತಪಾತಾಲಗಿರೀಂದ್ರಸಾಗರಾ ॥
ಧರಾಖಿಲೇಽಯಂ ನನು ಸರ್ಷಪಾಯತಿ
ಪ್ರಸಹ್ಯ ಕೋನಾಮ ಹರೇತ್ತಮೇನಂ॥೮೮॥

ಅ ॥ ಸಾವಿರ ಸಂಖ್ಯೆಗಳಾದ ತಲೆಗಳುಳ್ಳ ಶೇಷರೂಪಿಯಾದ ಈ ಲಕ್ಷ್ಮಣನ ಒಂದು ತಲೆಯಲ್ಲಿ ಏಳು ಸಂಖ್ಯಾಕಗಳಾದ ಪಾತಾಳಾದಿ ಲೋಕಗಳೂ, ಪರ್ವತಶ್ರೇಷ್ಠಗಳಾದ ಮೇರ್ವಾದಿ ಪರ್ವತಗಳೂ, ಸಮುದ್ರಗಳೂ ಇವುಗಳಿಂದ ಕೂಡಿದ ಈ ಎಲ್ಲಾ ಭೂಮಿಯೂ ಸಾಸ್ಮೆಕಾಳಿನಂತೆ ಆಚರಿಸುತ್ತದೆಯಷ್ಟೇ. (ಅಂದರೆ ಈ ಶೇಷನ ಒಂದು ತಲೆಯಲ್ಲಿ ಈ ಬ್ರಹ್ಮಾಂಡವು ಸಾಸ್ಮೆಕಾಳಿನ ಹಾಗೆ ಭಾರರಹಿತವಾಗಿ ಇದೆ.) ಆಶ್ಚರ್ಯ? ಯಾವ ಪುರುಷನು ಶೇಷಸ್ವರೂಪಿಯಾದ ಈ ಲಕ್ಷ್ಮಣನನ್ನು ಬಲಾತ್ಕಾರದಿಂದ ಅಪಹರಿಸಿಯಾನು? (ಯಾರಿಂದಲೂ ಅಲ್ಲಾಡಿಸಲಿಕ್ಕೆ ಅಶಕ್ಯನು) ॥೮೮॥

ಮೂ ॥ ಪ್ರಕರ್ಷತಿ ತ್ವೇನ ನಿಶಾಚರೇಶ್ವರೇ
ತಥೈವ ರಾಮಾವರಜಂ ತ್ವರಾನ್ವಿತಃ ॥
ಸಮಸ್ತ ಜೀವಾಧಿಪತೇಃ ಪರಾ ತನುಃ
ಸಮುತ್ಪಪಾತಾಸ್ಯ ಪುರೋ ಹನೂಮಾನ್ ॥ ೮೯ ॥

ಅ ॥ ರಾಕ್ಷಸರಿಗೆ ಸ್ವಾಮಿಯಾದ ರಾವಣನು ಹಾಗೆಯೇ ರಾಮನ ತಮ್ಮನಾದ ಲಕ್ಷ್ಮಣನನ್ನು ಸೆಳೆಯುತ್ತಿರಲು, ವೇಗದಿಂದ ಕೂಡಿದ ಎಲ್ಲಾ ಪ್ರಾಣಿಗಳಿಗೆ ಅಧಿಪತಿಯಾದ ವಾಯುದೇವರ ಮತ್ತೊಂದು ಶರೀರಭೂತನಾದ ಹನುಮಂತನು ಈ ರಾವಣನ ಮುಂಭಾಗಕ್ಕೆ ಹಾರಿ ಬಂದನು ॥೮೯॥

ಮೂ ॥ ಸ ಮುಷ್ಟಿಮಾವೃತ್ಯ ಚ ವಜ್ರಕಲ್ಪಂ
ಜಘಾನ ತೇನೈವ ಚ ರಾವಣಂ ರುಷಾ ॥
ಪ್ರಸಾರ್ಯ ಬಾಹೂನಖಿಲೈರ್ಮುಖೈರ್ವಮನ್
ಸರಕ್ತಮುಷ್ಣಂ ವ್ಯಸುವತ್ಪಪಾತ ॥ ೯೦ ॥

ಅ ॥ ಆ ಹನುಮಂತನು ವಜ್ರಾಯುಧಕ್ಕೆ ಸದೃಶನಾದ ಮುಷ್ಟಿಯನ್ನು ತಿರುಗಿಸಿ ಕೋಪದಿಂದ ರಾವಣನಿಗೆ ಹೊಡೆದನು. ಆ ರಾವಣನು ಆ ಹನುಮಂತನಿಂದ ಕೊಡಲ್ಪಟ್ಟ ಮುಷ್ಟಿಪ್ರಹಾರದಿಂದಲೇ ಎಲ್ಲಾ ಬಾಹುಗಳನ್ನು ಬಿಡಿಸಿಕೊಂಡು ಹತ್ತು ಮುಖಗಳಿಂದ ಬಿಸಿಯಾದ ರಕ್ತವನ್ನು ಕಾರುವವನಾಗಿ ಹೋಗಲ್ಪಟ್ಟ ಪ್ರಾಣವುಳ್ಳವನಂತೆ (ಶವದಂತೆ) ಬಿದ್ದನು ॥೯೦॥

ಮೂ ॥ ನಿಪಾತ್ಯ ರಕ್ಷೋಽಧಿಪತಿಂ ಸ ಮಾರುತಿಃ
ಪ್ರಗೃಹ್ಯ ಸೌಮಿತ್ರಿಮುರಂಗಶಾಯಿನಃ ॥
ಜಗಾಮ ರಾಮಾಖ್ಯತನೋಃ ಸಮೀಪಂ
ಸೌಮಿತ್ರಿ ಮುದ್ಧರ್ತುಮಲಂ ಹ್ಯಸೌ ಕಪಿಃ ॥೯೧॥

ಅ ॥ ಆ ಹನುಮಂತನು ರಾಕ್ಷಸರಿಗೆ ಸ್ವಾಮಿಯಾದ ರಾವಣನನ್ನು ಕೆಡಹಿ ಶೇಷನಲ್ಲಿ ಮಲಗಿಕೊಂಡಿರತಕ್ಕ ರಾಮನೆಂತೆಂದು ಹೆಸರುಳ್ಳ ಶರೀರದ (ಅಂದರೆ ರಾಮನ) ಸಮೀಪಕ್ಕೆ ಲಕ್ಷ್ಮಣನನ್ನು ಹಿಡಿದುಕೊಂಡು ಹೊರಟುಹೋದನು. ಈ ಕಪಿಸ್ವರೂಪನಾದ ಹನುಮಂತನು ಎತ್ತುವುದಕ್ಕೆ ಸಮರ್ಥನಷ್ಟೆ (ಹಿ=) ಘನೋದಕದಲ್ಲಿ ಕೂರ್ಮಸ್ವರೂಪಿಯಾದ ವಾಯುವು ತನ್ನ ಪೃಷ್ಠಭಾಗದಲ್ಲಿ ಶೇಷನನ್ನು ಧರಿಸುತ್ತಿದ್ದಾನೆಂದು ಪ್ರಸಿದ್ಧವು. ॥೯೧॥

ಮೂ ॥ ಸ ರಾಮಸಂಸ್ಪರ್ಶನಿವಾರಿತಕ್ಲಮಃ
ಸಮುತ್ಥಿತಸ್ತೇನ ಸಮುದ್ಧೃತೇ ಶರೇ ॥
ಬಭೌ ಯಥಾ ರಾಹುಮುಖಾತ್ಪ್ರಮುಕ್ತಃ
ಶಶೀ ಸುಪರ್ಣೋ ವಿಕಚತ್ಸ್ವ(ಸ್ವ) ರಶ್ಮಿಭಿಃ ॥೯೨॥

ಅ ॥ ರಾಮನ ಸ್ಪರ್ಶದಿಂದ (ಅಂದರೆ ಪ್ರೀತಿಪೂರ್ವಕವಾದ ಹಸ್ತಸ್ಪರ್ಶದಿಂದ) ಹೋಗಲ್ಪಟ್ಟ ದುಃಖವುಳ್ಳ ಲಕ್ಷ್ಮಣನು ಆ ರಾಮನಿಂದ ಬಾಣವು ಕೀಳಲ್ಪಡುತ್ತಿರಲು, ತನ್ನ ಕಿರಣಗಳಿಂದ ಪ್ರಕಾಶಿಸತಕ್ಕ ಷೋಡಶಕಲಾ ಪೂರ್ಣನಾದ ರಾಹುವಿನ ಮುಖದ್ದೆಸೆಯಿಂದ ಬಿಡಲ್ಪಟ್ಟ ಚಂದ್ರನು ಹೇಗೆ ಶೋಭಿಸುವನೋ ಹಾಗೆ ಲಕ್ಷ್ಮಣನು ಎದ್ದವನಾಗಿ ಶೋಭಿಸುವನು ॥೯೨॥

ಮೂ ॥ ಸ ಶೇಷಭೋಗಾಭಮಥೋ ಜನಾರ್ದನಃ
ಪ್ರಗೃಹ್ಯ ಚಾಪಂ ಸಶರಂ ಪುನರ್ದೃಢಂ ॥
ಸುಲಬ್ಧಸಂಜ್ಞಂ ರಜನೀಚರೇಶಂ
ಜಗಾದ ಸಜ್ಜೀಭವ ರಾವಣೇತಿ ॥೯೩॥

ಅ ॥ ಅನಂತರದಲ್ಲಿ ಆ ರಾಮನು ಶೇಷನ ಶರೀರದ ಕಾಂತಿಯಂತೆ ಕಾಂತಿಯುಳ್ಳ ಬಾಣದಿಂದ ಕೂಡಿದ ಧನುಸ್ಸನ್ನು ಹಿಡಿದುಕೊಂಡು ತಿರುಗಿ ಚೆನ್ನಾಗಿ ಹೊಂದಲ್ಪಟ್ಟ ಸಂಜ್ಞೆ(ಜ್ಞಾನ) ಯುಳ್ಳ ರಾಕ್ಷಸರಿಗೆ ಅಧಿಪತಿಯಾದ ರಾವಣನನ್ನು ಕುರಿತು ಎಲೋ ರಾವಣನೇ! ಯುದ್ಧಕ್ಕೆ ಸನ್ನದ್ಧನಾಗೆಂದು ಹೇಳಿದನು. ॥೯೩॥

ಮೂ ॥ ರಥಂ ಸಮಾರುಹ್ಯ ಪುನಃ ಸಕಾರ್ಮುಕಃ
ಸಮಾರ್ಗಣೋ ರಾವಣ ಆಶು ರಾಮಂ ॥
ಅಭ್ಯೇತ್ಯ ಸರ್ವಾಶ್ಚ ದಿಶಶ್ಚಕಾರ
ಶರಾಂಧಕಾರಾಃ ಪರಮಾಸ್ತ್ರವೇತ್ತಾ ॥೯೪॥

ಅ ॥ ಧನುಸ್ಸಿನಿಂದಲೂ ಕೂಡಿದ ಬಾಣಗಳಿಂದಲೂ ಕೂಡಿದ ಎಲ್ಲಾ ಉತ್ತಮಗಳಾದ ಅಸ್ತ್ರಗಳನ್ನೂ ತಿಳಿದ ರಾವಣನು ರಥವನ್ನೇರಿ ತಿರುಗಿ ಶೀಘ್ರದಲ್ಲಿ ರಾಮನನ್ನು(ಅನುಸರಿಸಿ) ಬಂದು ಎಲ್ಲಾ ದಿಕ್ಕುಗಳನ್ನು ಬಾಣಗಳಿಂದ ಅಂಧಕಾರದಿಂದ ಕೂಡಿದ್ದನ್ನಾಗಿ ಮಾಡಿದನು. ॥೯೪॥

ಮೂ ॥ ರಥೇ (ಥ) ಸ್ಥಿತೇಽಸ್ಮಿನ್ರಜನೀಚರೇಶೇ
ನ ಮೇ ಪತಿರ್ಭೂಮಿತಲೇ ಸ್ಥಿತಃ ಸ್ಯಾತ್ ॥
ಇತಿಸ್ಮ ಪುತ್ರಃ ಪವನಸ್ಯ ರಾಮಂ
ಸ್ಕಂಧಂ ಸಮಾರೋಪ್ಯ ಯಯೌ ಚ ರಾಕ್ಷಸಂ ೯೫॥

ಅ ॥ ರಾಕ್ಷಸಾಧಿಪತಿಯಾದ ಈ ರಾವಣನು ರಥದಲ್ಲಿ ಇರುತ್ತಿರಲು ನನ್ನ ಸ್ವಾಮಿಯಾದ ರಾಮನು ಭೂಮಿಯಲ್ಲಿ ಇರತಕ್ಕವನು ಆಗಬಾರದು ಎಂದು ವಾಯುದೇವರ ಪುತ್ರನಾದ ಹನುಮಂತನು ರಾಮನನ್ನು (ತನ್ನ) ಹೆಗಲನ್ನು ಏರಿಸಿ ರಾಕ್ಷಸನಾದ ರಾವಣನನ್ನು ಕುರಿತು ಹೊರಟು ಹೋದನು ॥೯೫॥

ಮೂ ॥ ಪ್ರಹಸ್ಯ ರಾಮೋಽಸ್ಯ ಹಯಾನ್ನಿಹತ್ಯ
ಸೂತಂ ಚ ಕೃತ್ವಾ ತಿಲಶೋ ಧ್ವಜಂ ರಥಂ ॥
ಧನೂಂಷಿ ಖಡ್ಗಂ ಸಕಲಾಯುಧಾನಿ
ಛತ್ರಂ ಚ ಸಂಛಿದ್ಯ ಚಕರ್ತ ಮೌಲೀನ್ ॥೯೬॥

ಅ ॥ ರಾಮನು ನಗಾಡಿದವನಾಗಿ ಈ ರಾವಣನ ಕುದುರೆಗಳನ್ನೂ ಸೂತನನ್ನೂ ಸಂಹಾರ ಮಾಡಿ, ಧ್ವಜಪತಾಕೆಯನ್ನೂ ರಥವನ್ನೂ ಧನುಸ್ಸುಗಳನ್ನೂ ಖಡ್ಗಗಳನ್ನೂ ಎಲ್ಲಾ ಆಯುಧಗಳನ್ನೂ ತುಂಡುತುಂಡನ್ನಾಗಿ ಮಾಡಿ ಛತ್ರವನ್ನು ಭೇದಿಸಿ ಕಿರೀಟವನ್ನು ಭೇದಿಸಿದನು. ॥೯೬॥

ಮೂ ॥ ಕರ್ತವ್ಯಮೂಢಂ ತಮವೇಕ್ಷ್ಯ ರಾಮಃ
ಪುನರ್ಜಗಾದಾಶು ಗೃಹಂ ಪ್ರಯಾಹಿ ॥
ಸಮಸ್ತಭೋಗಾನನುಭೂಯ ಶೀಘ್ರಂ
ಪ್ರತೋಷ್ಯ ಬಂಧೂನ್ಪುನರೇಹಿ ಮರ್ತುಂ ॥೯೭॥

ಅ ॥ ರಾಮನು ಮಾಡತಕ್ಕ ಕರ್ಮವಿಷಯದಲ್ಲಿ ಮೂಢನಾದ ರಾವಣನನ್ನು ನೋಡಿ ತಿರುಗಿಹೇಳಿದನು. ಶೀಘ್ರದಲ್ಲಿ ಮನೆಯನ್ನು ಕುರಿತು ಹೊರಟುಹೋಗು; ಎಲ್ಲಾ ಭೋಗಗಳನ್ನು ಶೀಘ್ರದಲ್ಲಿ ಅನುಭವಿಸಿ ಬಂಧುಗಳನ್ನು ಸಂತೋಷಿಸಿ ತಿರುಗಿ ಸಾಯುವುದಕ್ಕೋಸ್ಕರ ಬಾ ॥೯೭॥

ಮೂ ॥ ಇತೀರಿತೋಽವಾಗ್ವದನೋ ಯಯೌ ಗೃಹಂ
ವಿಚಾರ್ಯ ಕಾರ್ಯಂ ಸಹ ಮಂತ್ರಿಭಿಃ ಸ್ವಕೈಃ ॥
ಹತಾವಶಿಷ್ಟೈರಥ ಕುಂಭಕರ್ಣ-
ಪ್ರಬೋಧನಾಯಾಶು ಮತಿಂ ಚಕಾರ ॥೯೮॥

ಅ ॥ ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ರಾವಣನು ಕೆಳಗಡೆ ಮಾಡಲ್ಪಟ್ಟ ಮುಖವುಳ್ಳವನಾಗಿ ಮನೆಯನ್ನು ಕುರಿತು ಹೋದನು. ಕೊಲ್ಲಲ್ಪಟ್ಟು ಉಳಿದ ತನ್ನವರಾದ ಮಂತ್ರಿಗಳಿಂದ ಕೂಡಿಕೊಂಡು ಮಾಡತಕ್ಕ (ಮುಂದಿನ) ಕಾರ್ಯವನ್ನು ವಿಚಾರಿಸಿದಾಗ ಶೀಘ್ರದಲ್ಲಿ ಕುಂಭಕರ್ಣನನ್ನು ಎಚ್ಚರಿಸುವುದಕ್ಕೋಸ್ಕರ ಯೋಚನೆಯನ್ನು ಮಾಡಿದನು. ॥೯೮॥

ಕುಂಭಕರ್ಣನು ವಜ್ರಕಾಯನಾದಪ್ರಯುಕ್ತ ಪರ್ವತ ಶೃಂಗಾದಿಗಳಿಂದ ಹೊಡೆದರೂ, ತೊಡೆಯಲ್ಲಿ ಹೊಡೆದಂತೆಯೇ ಪ್ರಬೋಧಮಾತ್ರವೇ ಆಗುವುದು. ಶರೀರವಿದಾರಣವಾಗುವುದಿಲ್ಲ. ಇಂತಹ ದೈತ್ಯನ ಶರೀರವನ್ನು ಸೀಳಿಸತಕ್ಕ ರಾಮನ ಪ್ರತಾಪಾತಿಶಯವನ್ನು ಏನು ಹೇಳುವದು ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ–

ಮೂ ॥ ಸ ಶೈಲಶೃಂಗಾಸಿಪರಶ್ವಧಾದ್ಯೈ-
ರ್ನಿಶಾಚರಾಣಾಮಯುತೈರನೇಕೈಃ ॥
ತಚ್ಛ್ವಾಸವೇಗಾಭಿಹತೈಃ ಕಥಂಚಿ-
ದ್ಗತೈಃ ಸಮೀಪಂ ಕಥಮಪ್ಯಬೋಧಯತ್ ॥೯೯॥

ಅ ॥ ಆ ರಾವಣನು ಪರ್ವತಗಳೂ, ಶಿಖರಗಳೂ, ಖಡ್ಗಗಳೂ, ಕುಠಾರಗಳೂ ಇವುಗಳೇ ಆಯುಧಗಳಾಗಿವುಳ್ಳ ಆ ಕುಂಭಕರ್ಣನ ಶ್ವಾಸದ ವೇಗದಿಂದ ಹೊಡೆಯಲ್ಪಟ್ಟು ಬಹು ಕಷ್ಟದಿಂದ ಸಮೀಪಕ್ಕೆಹೋದ ಬಹುವಿಧರಾದ ರಾಕ್ಷಸರುಗಳ ಹತ್ತು ಸಹಸ್ರಗಳಿಂದ ಬಹಳ ಪ್ರಯಾಸದಿಂದ ಕುಂಭಕರ್ಣನನ್ನು ಎಚ್ಚರಿಸಿದನು. ॥೯೯॥

ಮೂ ॥ ಶೈಲೋಪಮಾನಸ್ಯ ತು (ಚ) ಮಾಂಸರಾಶೀ-
ನ್ನಿಧಾಯ ಭಕ್ಷ್ಯಾನಪಿ ಶೋಣಿತಹ್ರದಾನ್ ॥
ಸುತೃಪ್ತಮೇನಂ ಪರಮಾದರೇಣ
ಸಮಾಹ್ವಯಾಮಾಸ ಸಭಾತಲಾಯ ॥೧೦೦॥

ಅ ॥ (ರಾವಣನು) ಈ ಕುಂಭಕರ್ಣನಿಗೆ ಪರ್ವತಗಳಿಗೆ ಸದೃಶಗಳಾದ ಮಾಂಸಗಳ ರಾಶಿಯನ್ನೂ ಭಕ್ಷ್ಯಗಳನ್ನೂ ರಕ್ತಗಳ ಪ್ರದಗಳನ್ನೂ ಮಾಡಿಸಿ ಚೆನ್ನಾಗಿ ಸಂತುಷ್ಟನಾದ ಈ ಕುಂಭಕರ್ಣನನ್ನು ಅತ್ಯಂತ ಆದರದಿಂದ ಸಭಾತಳಕ್ಕೋಸ್ಕರ ಕರೆಸಿದನು. ॥೧೦೦॥

ಮೂ ॥ ಉವಾಚ ಚೈತಂ ರಜನೀಚರೇಂದ್ರಃ
ಪರಾಜಿತೋಽಸ್ಮ್ಯದ್ಯ ಹಿ ಜೀವತಿ ತ್ವಯಿ ॥
ರಣೇ ನರೇಣೈವ ಹಿ (ಚ) ರಾಮನಾಮ್ನಾ
ಕುರುಷ್ವ ಮೇ ಪ್ರೀತಿಮಮುಂ ನಿಹತ್ಯ ॥೧೦೧॥

ಅ ॥ ರಾಕ್ಷಸರಿಗೆ ಸ್ವಾಮಿಯಾದ ರಾವಣನು ಈ ಕುಂಭಕರ್ಣನನ್ನು ಕುರಿತು ಹೇಳಿದನು. ಯಾವ ಕಾರಣದಿಂದ ನೀನು ಜೀವಿಸಿಕೊಂಡಿರುವಾಗಲೇ ಯುದ್ಧದಲ್ಲಿ ರಾಮನೆಂಬ ಹೆಸರುಳ್ಳ ಮನುಷ್ಯನಿಂದ (ನಾನು) ಪರಾಜಯವನ್ನು ಹೊಂದಿದವನು ಆಗಿದ್ದೇನೋ ಆದಕಾರಣ ದ್ದೆಸೆಯಿಂದ ಇವನನ್ನು (ನೀನು) ಸಂಹರಿಸಿ ನನಗೆ ಪ್ರೀತಿಯನ್ನು ಮಾಡು. ॥೧೦೧॥

ಮೂ ॥ ಇತೀರಿತಃ ಕಾರಣಮಪ್ಯಶೇಷಂ
ಶ್ರುತ್ವಾ ಜಗರ್ಹಾಗ್ರಜಮೇವ ವೀರಃ ॥
ಅಮೋಘವೀರ್ಯೇಣ ಹಿ ರಾಘವೇಣ
ತ್ವಯಾ ವಿರೋಧಶ್ಚರಿತೋ ಬಲಾದ್ಯ ॥೧೦೨॥

ಅ ॥ ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ಪರಾಕ್ರಮಶಾಲಿಯಾದ ಕುಂಭಕರ್ಣನು ಎಲ್ಲಾ ಕಾರಣಗಳನ್ನು ಕೇಳಿ ಅಣ್ಣನನ್ನೇ ನಿಂದಿಸಿದನು. ಏಕೆಂದರೆ – ವ್ಯರ್ಥವಾಗದ ಇರತಕ್ಕ ಪರಾಕ್ರಮವುಳ್ಳ ರಾಮನಿಂದ ವಿರೋಧವು ನಿನ್ನಿಂದ ಮಾಡಲ್ಪಟ್ಟಿದೆ. ಕಷ್ಟ ॥೧೦೨॥

ಮೂ ॥ ಪ್ರಶಸ್ಯತೇ ನೋ ಬಲಿಭಿರ್ವಿರೋಧಃ
ಕಥಂಚಿದೇಷೋಽತಿಬಲೋ ಮತೋ ಮಮ ॥
ಇತೀರಿತೋ ರಾವಣ ಆಹ ದುರ್ನಯೋಽ
ಪ್ಯಹಂ ತ್ವಯಾಪ್ಯೋ ಹಿ ಕಿಮನ್ಯಥಾತ್ವಯಾ ॥೧೦೩॥

ಅ ॥ ಬಲಿಷ್ಠರಿಂದ ವಿರೋಧವು ಹೇಗಾದರೂ ಯೋಗ್ಯವಾಗುವುದಿಲ್ಲ. ಈ ರಾಮನು ಅತ್ಯಂತ ಬಲಿಷ್ಠನು ಎಂದು ನನಗೆ ಸಮ್ಮತವು. ಈ ಪ್ರಕಾರವಾಗಿ (ಕುಂಭಕರ್ಣನಿಂದ) ಹೇಳಿಸಿಕೊಳ್ಳಲ್ಪಟ್ಟ ರಾವಣನು ಹೇಳಿದನು— ನಾನು ದುರ್ನಡತೆಯವನಾದರೂ ನಿನ್ನಿಂದ ರಕ್ಷಿಸಿಕೊಳ್ಳಲ್ಪಡತಕ್ಕವನಷ್ಟೇ! ಹಾಗಲ್ಲದಿದ್ದರೆ ನಿನ್ನಿಂದ ಏನು ಪ್ರಯೋಜನವು? ॥೧೦೩॥

ಮೂ ॥ ಚರಂತಿ ರಾಜಾನ ಉತಾಕ್ರಮಂ ಕ್ವಚಿ-
ತ್ತ್ವಯೋಪಮಾಸ್ಬಂಧುಜನಾನ್ಬಲಾಧಿಕಾನ್ ॥
ಸಮೀಕ್ಷ್ಯ ಹೀತ್ಥಂ ಗದಿತೋಽಗ್ರಜೇನ
ಸ ಕುಂಭಕರ್ಣಃ ಪ್ರಯಯೌ ರಣಾಯ ॥೧೦೪॥

ಅ ॥ ಅರಸರು ನಿನಗೆ ಸದೃಶರಾದ, ಬಲಿಷ್ಠರಾದ, ಬಂಧುಜನರನ್ನು ನೋಡಿ ಕೆಲವುಕಡೆಗಳಲ್ಲಿ ಅನ್ಯಾಯವನ್ನು ಮಾಡುತ್ತಾರೆ. ಅಣ್ಣನಾದ ರಾವಣನಿಂದ ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ಆ ಕುಂಭಕರ್ಣನು ಯುದ್ಧಕ್ಕೋಸ್ಕರ ಹೊರಟುಹೋದನು ॥೧೦೪॥

ಮೂ ॥ ಪ್ರಾಕಾರಮಾಲಂಘ್ಯ ಸ ಪಂಚಯೋಜನಂ
ಯದಾ ಯಯೌ ಶೂಲವರಾಯುಧೋ ರಣಂ ॥
ಕಪಿಪ್ರವೀರಾ ಅಖಿಲಾಃ ಪ್ರದುದ್ರುವು-
ರ್ಭಯಾದತೀತ್ಯೈವ ಚ ಸೇತುಮಾಶು ॥೧೦೫॥

ಅ ॥ ಶೂಲಶ್ರೇಷ್ಠವೇ ಆಯುಧವಾಗಿವುಳ್ಳ ಕುಂಭಕರ್ಣನು ಐದು ಯೋಜನ ವಿಸ್ತಾರವಾದ ಪ್ರಾಕಾರರೂಪವಾದ ತ್ರಿಕೂಟಾಖ್ಯಪರ್ವತವನ್ನು ದಾಟಿ ಯಾವಾಗ ಯುದ್ಧಸ್ಥಾನವನ್ನು ಕುರಿತು ಹೊರಟುಹೋದನೋ ಆವಾಗ ಎಲ್ಲಾ ಕಪಿಶ್ರೇಷ್ಠರು ಭಯದ್ದೆಸೆಯಿಂದ ಶೀಘ್ರದಲ್ಲಿ ಸೇತುವೆಯನ್ನು ದಾಟಿ ಓಡಿಹೋದರು. ॥೧೦೫॥

ಮೂ ॥ ಶತಬಲಿಪನಸಾಖ್ಯೌ ತತ್ರ ವಸ್ವಂಶಭೂತೌ
ಪವನಗಣವರಾಂಶೌ ಶ್ವೇತಸಂಪಾತಿನೌ ಚ ॥
ನಿರ್ಋತಿತನುಮಥೋಗ್ರಂ ದುರ್ಮುಖಂ ಕೇಸರೀತಿ
ಪ್ರವರಮಥ ಮರುತ್ಸು ಪ್ರಾಸ್ಯದೇತಾನ್ಮುಖೇ ಸಃ ॥೧೦೬॥

ಅ ॥ ಆ ಕಪಿಗಳ ಮಧ್ಯದಲ್ಲಿ ವಸುಗಳ ಅಂಶಭೂತರಾದ (ಅಂದರೆ- ಅಷ್ಟ ವಸುಗಳಲ್ಲಿಬ್ಬರ ಅವತಾರರಾದ) ಶತಬಲಿ ಪನಸ ಎಂಬ ಹೆಸರುಳ್ಳವರೂ, ಮರುತ್ಸಮೂಹದಲ್ಲಿ ಶ್ರೇಷ್ಠರ ಅವತಾರರಾದ ಶ್ವೇತನೂ, ಸಂಪಾತಿಯೂ, ಇವರಿಬ್ಬರೂ ಕೋಣಾಧಿಪತಿಯಾದ ನಿರ್ಋತಿಯ ಅವತಾರನಾದ ಕ್ರೂರನಾದ ದುರ್ಮುಖನೂ, ಮರುತ್ತುಗಳಲ್ಲಿ ಶ್ರೇಷ್ಠನಾದ ಕೇಸರಿ ಎಂಬ ಕಪಿಯೂ ಇವರಾರುಮಂದಿಯನ್ನೂ ಆ ಕುಂಭಕರ್ಣನು ಬಾಯಿಗೆ ಬಿಸಾಡಿದನು. ॥೧೦೬॥

ಮೂ ॥ ರಜನಿಚರವರೋಽಸೌ ಕುಂಭಕರ್ಣಃ ಪ್ರತಾಪೀ
ಕುಮುದಮಪಿ ಜಯಂತಂ ಪಾಣಿನಾ ಸಂಪಿಪೇಷ ॥
ನಲಮಥ ಚ ಗದಾದೀನ್ಪಂಚ ನೀಲಂ ಸತಾರಂ
ಗಿರಿವರತರುಹಸ್ತಾನ್ಮುಷ್ಟಿನಾಪಾತಯಚ್ಚ ॥೧೦೭॥

ಅ ॥ ಪ್ರತಾಪಿಯಾದ ರಾಕ್ಷಸಶ್ರೇಷ್ಠನಾದ ಈ ಕುಂಭಕರ್ಣನು ಕುಮುದನನ್ನೂ, ಜಯಂತನನ್ನೂ ಕೈಯಿಂದ ಮರ್ದಿಸಿದನು. ಪರ್ವತಶ್ರೇಷ್ಠಗಳೂ ವೃಕ್ಷಗಳೂ ಇವುಗಳೇ ಕೈಗಳಲ್ಲಿವುಳ್ಳ, ಗಜಮೊದಲಾದ ಐವರು (ಗಜ, ಗವಾಕ್ಷ, ಗವಯ, ಗಂಧಮಾದ, ವೃಷ, ಎಂದು ಐವರನ್ನೂ,) ಕಪಿಗಳನ್ನೂ ಅನಂತರದಲ್ಲಿ ನಲನನ್ನೂ, ತಾರನಿಂದ ಕೂಡಿದ ನೀಲನನ್ನೂ ಮುಷ್ಟಿಪ್ರಹಾರದಿಂದ ಬೀಳಿಸಿದನು. ॥೧೦೭॥

ಮೂ ॥ ಅಥಾಂಗದಶ್ಚ ಜಾಂಬವಾನಿನಾತ್ಮಜಶ್ಚ ವಾನರೈಃ ॥
ನಿಜಘ್ನಿರೇ ನಿಶಾಚರಂ ಸ ವೃಕ್ಷಶೈಲಸಾನುಭಿಃ ॥೧೦೮॥

ಅ ॥ ಅನಂತರದಲ್ಲಿ ಅಂಗದನೂ ಜಾಂಬವಂತನೂ ಸೂರ್ಯಪುತ್ರನಾದ ಸುಗ್ರೀವನೂ ಕಪಿಗಳಿಂದ ಕೂಡಿಕೊಂಡು ವೃಕ್ಷಗಳೂ, ಪರ್ವತಗಳೂ, ಶಿಖರಗಳೂ ಇವುಗಳಿಂದ ರಾಕ್ಷಸರಾಧಿಪತಿಯಾದ ಕುಂಭಕರ್ಣನನ್ನು ಹೊಡೆದರು. ॥೧೦೮॥

ಮೂ ॥ ವಿಚೂರ್ಣಿತಾಶ್ಚ ಪರ್ವತಾಸ್ತನೌ ನಿಶಾಚರಸ್ಯ ತೇ ॥
ಬಭೂವ ಕಾಚನ ವ್ಯಥಾ ನ ಚಾಸ್ಯ ಬಾಹುಶಾಲಿನಃ ॥೧೦೯॥

ಅ ॥ ಕುಂಭಕರ್ಣನ ಶರೀರದಲ್ಲಿ ಆ ಪರ್ವತಗಳು ಪುಡಿಪುಡಿಗಳಾದುವು. ಬಾಹುಗಳಿಂದ ಶೋಭಿಸತಕ್ಕ ಕುಂಭಕರ್ಣನಿಗೆ ಯಾವುದೊಂದು ವ್ಯಥೆಯೂ ಆಗಲಿಲ್ಲ. ॥೧೦೯॥

ಮೂ ॥ ಅಥಾಪರಂ ಮಹಾಚಲಂ ಪ್ರಗೃಹ್ಯ ಭಾಸ್ಕರಾತ್ಮಜಃ ॥
ಮುಮೋಚ ರಾಕ್ಷಸೇಽಥ ತಂ ಪ್ರಭೃಹ್ಯ ತಂ ಜಘಾನ ಸಃ ॥೧೧೦॥

ಅ ॥ ಸೂರ್ಯಪುತ್ರನಾದ ಸುಗ್ರೀವನು ಅನಂತರದಲ್ಲಿ ಬೇರೆಪರ್ವತವನ್ನು ಹಿಡಿದುಕೊಂಡು ಕುಂಭಕರ್ಣನ ಮೇಲೆ ಬಿಟ್ಟನು; ಅನಂತರದಲ್ಲಿ ಕುಂಭಕರ್ಣನು ಆ ಪರ್ವತವನ್ನು ಹಿಡಿದು ಕೊಂಡು ಆ ಸುಗ್ರೀವನನ್ನು ಹೊಡೆದನು. ॥೧೧೦॥

ಮೂ ॥ ತದಾ ಪಪಾತ ಸೂರ್ಯಜಸ್ತತಾಡ ಚಾಂಗದಂ ರುಷಾ ॥
ಸ ಜಾಂಬವಂತಮಾಶು ತೌ ನಿಪೇತತುಸ್ತಲಾಹತೌ ॥೧೧೧॥

ಅ ॥ ಸುಗ್ರೀವನು ಆವಾಗ (ಭೂಮಿಯಲ್ಲಿ) ಬಿದ್ದನು. ಅಂಗದನನ್ನೂ, ಜಾಂಬವಂತನನ್ನೂ ಕೂಡ ಕೋಪದಿಂದ ಕುಂಭಕರ್ಣನು ಹೊಡೆದನು. ಹಸ್ತತಲದಿಂದ ಹೊಡೆಯಲ್ಪಟ್ಟ ಅಂಗದ-ಜಾಂಬವಂತರು ಶೀಘ್ರದಲ್ಲಿ ಬಿದ್ದರು ॥೧೧೨॥

ಮೂ ॥ ಅಥ ಪ್ರಗೃಹ್ಯ ಭಾಸ್ಕರಿಂ ಯಯೌ ಸ ರಾಕ್ಷಸೋ ಬಲೀ ॥
ಜಗಾಮ ಚಾನು ಮಾರುತಿಃ ಸುಸೂಕ್ಷ್ಮಮಕ್ಷಿಕೋಪಮಃ ॥೧೧೩॥

ಅ ॥ ಅನಂತರದಲ್ಲಿ ಬಲಿಷ್ಠನಾದ ಆ ರಾಕ್ಷಸನಾದ ಕುಂಭಕರ್ಣನು ಸುಗ್ರೀವನನ್ನು ಹಿಡಿದುಕೊಂಡು ಹೋದನು. ಹನುಮಂತನು ಸೂಕ್ಷ್ಮರೂಪನಾದ ನೊಣಕ್ಕೆ ಸದೃಶನಾಗಿ (ಸುಗ್ರೀವನನ್ನು) ಅನುಸರಿಸಿ ಹೊರಟುಹೋದನು. ॥೧೧೩॥

ಸುಗ್ರೀವನನ್ನು ಅನುಸರಿಸಿ ಹೋಗತಕ್ಕ ಹನುಮಂತನ ಅಭಿಪ್ರಾಯವನ್ನು ಹೇಳುತ್ತಾರೆ–

ಮೂ || ಯದ್ಯೇನಮೇಷ ಬಾಧತೇ ತದಾ ವಿಮೋಚಯಾಮ್ಯಹಂ ||
ಯದಿ ಸ್ಮ ಶಕ್ಯತೇಽಸ್ಯ ತು ಸ್ವಮೋಚನಾಯ ತದ್ವರಂ ||೧೧೩||

ಅ || ಈ ಕುಂಭಕರ್ಣನು ಯಾವಾಗ ಈ ಸುಗ್ರೀವನನ್ನು ಬಾಧಿಸುತ್ತಾನೋ ಆವಾಗ ನಾವು ಬಿಡಿಸುತ್ತೇನೆ. ತನ್ನನ್ನು ಬಿಡಿಸಿಕೊಳ್ಳುವುದಕ್ಕೆ ಈ ಸುಗ್ರೀವನಿಗೆ ಶಕ್ತಿಯಿರುತ್ತಿದ್ದರೆ ಸಮೀಚೀನವು. (ಶಕ್ತಿಯಿಲ್ಲ) ||೧೧೩||

ಮೂ || ಇತಿ ವ್ಯವಸ್ಯತ್ಯನು ಸ್ಮ ತಂ ಮರುತ್ಸುತೇ ನಿಶಾಚರಃ ||
ಪುರಂ ವಿವೇಶ ಚಾರ್ಚಿತಃ ಸ್ವಬಂಧುಭಿಃ ಸಮಸ್ತಶಃ ||೧೧೪||

ಅ || ಈ ಅಭಿಪ್ರಾಯದಿಂದ ಹನುಮಂತನು ಸುಗ್ರೀವನನ್ನು ಅನುಸರಿಸಿ ಹೋಗುತ್ತಿರಲು, ಕುಂಭಕರ್ಣನು ಎಲ್ಲಾ ತನ್ನ ಬಂದುಗಳಿಂದ ಪೂಜಿಸಿಕೊಳ್ಳಲ್ಪಡತಕ್ಕವನಾಗಿ ತನ್ನ ಪಟ್ಟಣವನ್ನು ಪ್ರವೇಶಮಾಡಿದನು ||೧೧೪||

ಮೂ || ತುಹಿನಸಲಿಲಮಾಲ್ಯೈಃ ಸರ್ವತೋಽಭಿಪ್ರವೃಷ್ಟೇ
ರಜನಿಚರವರೇಽಸ್ಮಿಂಸ್ತೇನ ಸಿಕ್ತಃ ಕಪೀಶಃ ||
ವಿಗತಸಕಲಯುದ್ಧಗ್ಲಾನಿರಾವಂಚಯಿತ್ವಾ
ರಜನಿಚರವರಂ ತಂ ತಸ್ಯ ನಾಸಾಂ ದದಂಶ ||೧೧೫||

ಅ || ಈ ಕುಂಭಕರ್ಣನು ಹಿಮವು–ನೀರು–ಮಾಲಿಕೆಯೂ ಇವುಗಳಿಂದ ಎಲ್ಲಾ ಅವಯವಗಳಲ್ಲಿ ಅಭಿಷಿಕ್ತನಾಗುತ್ತಿರಲು, ಅದರಿಂದಪ್ರೋಕ್ಷಿತನಾದ ಸುಗ್ರೀವನು ಹೋಗಲ್ಪಟ್ಟ ಎಲ್ಲಾ ಯುದ್ಧದ ದುಃಖವುಳ್ಳ ರಾಕ್ಷಸಶ್ರೇಷ್ಠನಾದ ಕುಂಭಕರ್ಣನನ್ನು ಚೆನ್ನಾಗಿ ವಂಚಿಸಿ ಆ ಕುಂಭಕರ್ಣನ ಮೂಗನ್ನು ಕಚ್ಚಿದನು. ||೧೧೫||

ಮೂ || ಕರಾಭ್ಯಾಮಸ್ಯ (ಥ) ಕರ್ಣೌ ಚ ನಾಸಿಕಾಂ ದಶನೈರಪಿ ||
ಸಂಭಿದ್ಯ ಕ್ಷಿಪ್ರಮೇವಾಸಾವುತ್ಪಪಾತ ಹರೀಶ್ವರಃ ||೧೧೬||

ಅ || ಈ ಕಪಿಶ್ರೇಷ್ಠನಾದ ಆ ಸುಗ್ರೀವನು ಕೈಗಳಿಂದ ಈ ಕುಂಭಕರ್ಣನ ಕಿವಿಗಳನ್ನೂ ಹಲ್ಲುಗಳಿಂದ ಮೂಗನ್ನೂ ಕೂಡ ಭೇದಿಸಿ ಶೀಘ್ರದಲ್ಲಿ ಮೇಲಕ್ಕೆ ಹಾರಿದನು ||೧೧೬||

ಮೂ || ತಲೇನ ಚೈನಂ ನಿಜಘಾನ ರಾಕ್ಷಸಃ
ಪಿಪೇಷ ಭೂಮೌ ಪತಿತಂ ತತೋಽಪಿ ||
ಸಮುದ್ಗತೋಽಸೌ ವಿವರೇಽಂಗುಲೀನಾಂ
ಜಘಾನ ಶೂಲೇನ ಪುನಃ ಸ ರಾಕ್ಷಸ ||೧೧೭||

ಅ || ಕುಂಭಕರ್ಣನು ಈ ಸುಗ್ರೀವನನ್ನು ಹಸ್ತತಲದಿಂದ ಹೊಡೆದನು. ಭೂಮಿಯಲ್ಲಿ ಬಿದ್ದ ಸುಗ್ರೀವನನ್ನು ಮರ್ದಿಸಿದನು. ಮರ್ದಿಸಿದ ಮೇಲೆಯೂ ಈ ಸುಗ್ರೀವನು ಬೆರಳುಗಳ ರಂಧ್ರದಲ್ಲಿ ಮೇಲಕ್ಕೆ ಬಂದನು. ಆ ಕುಂಭಕರ್ಣನು ತಿರುಗಿ ಶೂಲದಿಂದ ಹೊಡೆದನು ||೧೧೭||

ಮೂ ॥ ಅಮೋಘಶೂಲಂ ಪ್ರಪತತ್ತದೀಕ್ಷ್ಯ
ರವೇಸ್ಸುತಸ್ಯೋಪರಿ ಮಾರುತಾತ್ಮಜಃ ॥
ಪ್ರಗೃಹ್ಯ ಜಾನೌ ಪ್ರಣಿಧಾಯ ಶೀಘ್ರಂ
ಬಭಂಜ ತಂ ಪ್ರೇಕ್ಷ್ಯ ನನಾದ ಚೋಚ್ಚೈಃ ೧೧೮॥

ಅ ॥ ವಾಯುಪುತ್ರನಾದ ಹನುಮಂತನು ಸೂರ್ಯಪುತ್ರನಾದ ಸುಗ್ರೀವನ ಮೇಲೆ ಬೀಳತಕ್ಕ ಆ ಅಮೋಘವಾದ ಶೂಲವನ್ನು ನೋಡಿ ಆ ಶೂಲವನ್ನು ಹಿಡಿದು ಮೊಣಕಾಲಿನಲ್ಲಿ ಇಟ್ಟು ಶೀಘ್ರದಲ್ಲಿ ಮುರಿದನು. ಆ ಕುಂಭಕರ್ಣನನ್ನು ನೋಡಿ ಘಟ್ಟಿಯಾಗಿ ಧ್ವನಿ (ನಾದ) ಮಾಡಿದನು ॥೧೧೮॥

ಮೂ ॥ ಅಥೈನಮಾವೃತ್ಯ ಜಘಾನ ಮುಷ್ಟಿನಾ
ಸ ರಾಕ್ಷಸೋ ವಾಯುಸುತಂ ಸ್ತನಾಂತರೇ ॥
ಜಗರ್ಜ ತೇನಾಭಿಹತೋ ಹನೂಮಾ-
ನಚಿಂತಯಂಸ್ತತ್ಪ್ರಜಹಾರ ಚೈನಂ ॥೧೧೯॥

ಅ ॥ ಆ ಕುಂಭಕರ್ಣನು ಮುಷ್ಟಿಯನ್ನು ತಿರುಗಿಸಿ ಹನುಮಂತನನ್ನು ಸ್ತನಗಳಮಧ್ಯದ ವಕ್ಷಸ್ಥಳದಲ್ಲಿ ಮುಷ್ಟಿಯಿಂದ ಹೊಡೆದನು. ಅವನಿಂದ ಹೊಡೆಯಲ್ಪಟ್ಟ ಹನುಮಂತನು ಆ ರಾಕ್ಷಸನ ಹೊಡೆಯುವಿಕೆಯನ್ನು ಗಣನೆಮಾಡದೆ ಗರ್ಜಿಸಿದನು. ಪುನಃ ಈ ಕುಂಭಕರ್ಣನನ್ನು ಹೊಡೆದನು ॥೧೧೯॥

ಮೂ ॥ ತಲೇನ ವಕ್ಷಸ್ಯಭಿತಾಡಿತೋ ರುಷಾ
ಹನೂಮತಾ ಮೋಹಮವಾಪ ರಾಕ್ಷಸಃ ॥
ಪುನಶ್ಚ ಸಂಜ್ಞಾಂ ಸಮವಾಪ್ಯ ಶೀಘ್ರಂ
ಯಯೌ ಸ ಯತ್ರೈವ ರಘುಪ್ರವೀರಃ ॥೧೨೦॥

ಅ ॥ ಕೋಪದಿಂದ ಹನುಮಂತನಿಂದ ಹಸ್ತತಲದಿಂದ ವಕ್ಷಸ್ಥಳದಲ್ಲಿ ಹೊಡೆಸಿಕೊಳ್ಳಲ್ಪಟ್ಟ ಆ ರಾಕ್ಷಸನಾದ ಕುಂಭಕರ್ಣನು ಮೂರ್ಛೆಯನ್ನು ಹೊಂದಿದನು. ಆ ಕುಂಭಕರ್ಣನು ತಿರುಗಿ ಜ್ಞಾನವನ್ನು ಹೊಂದಿ ಶೀಘ್ರದಲ್ಲಿ ಎಲ್ಲಿ ರಾಮಚಂದ್ರನು ಇದ್ದಾನೋ ಅಲ್ಲಿಗೆ ಹೊರಟುಹೋದನು ॥೧೨೦॥

ಮೂ ॥ ವಿಚಿಂತಯಾಮಾಸ ತತೋ ಹನುಮಾನ್
ಮಯ್ಯೈವ ಹಂತುಂ ಸಮರೇ ಹಿ ಶಕ್ಯಃ ॥
ಅಸೌ ತಥಾಪ್ಯೇನಮಹಂ ನ ಹನ್ಮಿ
ಯಶೋ ಹಿ ರಾಮಸ್ಯ ದೃಢಂ ಪ್ರಕಾಶಯನ್॥೧೨೧॥

ಅ ॥ ಈ ಕುಂಭಕರ್ಣನು ಯುದ್ಧದಲ್ಲಿ ನನ್ನಿಂದಲೇ ಕೊಲ್ಲಲಿಕ್ಕೆ ಸಮರ್ಥನಷ್ಟೆ! ಆದಾಗ್ಯೂ ನಾನು ಈ ಕುಂಭಕರ್ಣನನ್ನು ಶ್ರೀ ರಾಮನಿಗೆ ಕೀರ್ತಿಯನ್ನು ನಿಶ್ಚಯವಾಗಿ

ಪ್ರಕಾಶಪಡಿಸತಕ್ಕವನಾಗಿ ಸಂಹಾರಮಾಡುವುದಿಲ್ಲ: ಎಂತೆಂದು ಹನುಮಂತನು ಆಲೋಚನೆ ಮಾಡಿದನು. ॥೧೨೧॥

ಮೂ ॥ ಅನನ್ಯವಧ್ಯಂ ತಮಿಮಂ ನಿಹತ್ಯ
ಸ್ವಯಂ ಸ ರಾಮೋಃ ಯಶ ಆಹರೇತ ॥
ದತ್ತೋಃ ವರೋ ದ್ವಾರಪಯೋಃ ಸ್ವಯಂ ಚ
ಜನಾರ್ದನೇನೈವ ಪುರಾತನ(ತ) ಶ್ಚ ॥೧೨೨॥

ಅ ॥ ಆ ದಾವ ಶ್ರೀ ರಾಮನು ತಾನು ಹೊರತು ಅನ್ಯರಿಂದ ಕೊಲ್ಲಲ್ಪಡಲಿಕ್ಕೆ ಅಶಕ್ಯನಾದ ಆ ಈ ದಾವ ಕುಂಭಕರ್ಣನನ್ನು ತಾನೇ ಸಂಹಾರಮಾಡಿ ಯಶಸ್ಸನ್ನು ಹೊಂದಲಿ. (ಹಾಗಾದರೆ ಭೀಮನಿಗೆ ಧರ್ಮವೂ ಯಶಸ್ಸೂ ಬರಲಿ ಎಮ್ಬುವ ಉದ್ದೇಶದಿಂದ ಶ್ರೀಕೃಷ್ಣನು ಜರಾಸಂಧನನ್ನು ಸಂಹರಿಸಲಿಲ್ಲವೆಂದು ವಮಿಂದಕ್ಕೆ ಹೇಳುವರು. ಈಗಲಾದರೂ ಹನುಮಂತನು ತನಗೆ ಪ್ರಾಪ್ತವಾದ ಹರಿಪೂಜಾತ್ಮಕವಾದ ರಾಕ್ಷಸಸಂಹಾರವನ್ನು ಏಕೆ ಇಚ್ಛಿಸಲಿಲ್ಲವೆಂದರೆ,) ಸಾಕ್ಷಾತ್ ರಾಮಸ್ವರೂಪಿಯಾದ ಶ್ರೀಮನ್ನಾರಾಯಣನಿಂದಲೇ ದ್ವಾರಪಾಲಕರಾದ ಜಯ ವಿಜಯರಿಗೆ ಮೊದಲೇ ವರವು ಕೊಡಲ್ಪಟ್ಟಿದೆ. ಆ ಕಾರಣದ್ದೆಶೆಯಿಂದ (ಹನುಮಂತನು ಸಂಹಾರಮಾಡಲಿಲ್ಲ) ॥೧೨೨.

ಮೂ ॥ ಮಯ್ಯೈವ ವಧ್ಯೌ ಭವತಂ ತ್ರಿಜನ್ಮಸು
ಪ್ರವೃದ್ಧವೀರ್ಯಾವಿತಿ ಕೇಶವೇನ ॥
ಉಕ್ತಂ ಮಯ್ಯೈ(ವ್ಯೈ) ವೇಷ ಯದಪ್ಯನುಗ್ರಹಂ
ವಧೇತಸ್ಯ ಕುರ್ಯಾನ್ನ ತು ಮೇ ಸ ಧರ್ಮಃ ॥೧೨೩॥

ಅ ॥ ಅಭಿವೃದ್ಧವಾದ ಪರಾಕ್ರಮವುಳ್ಳ ನೀವಿಬ್ಬರು ನನ್ನಿಂದಲೇ ಮೂರು ಜನ್ಮಗಳಲ್ಲಿಯೂ ಸಂಹರಿಸಿಕೊಳ್ಳಲ್ಪಡಲಿಕ್ಕೆ ಯೋಗ್ಯರು ಆಗುವಿರಿ. ಈಪ್ರಕಾರವಾಗಿ ರಾಮಸ್ವರೂಪಿಯಾದ ಶ್ರೀಹರಿಯಿಂದಲೇ ಹೇಳಲ್ಪಟ್ಟದೆ, ಆದಾಗ್ಯೂ ಈ ಕುಂಭಕರ್ಣನ ಸಂಹಾರವು ನನ್ನಿಂದ (ಮಾಡಲ್ಪಡುತ್ತಿರಲು) ಶ್ರೀ ರಾಮನು ಅನುಗ್ರಹವನ್ನು ಮಾಡಿಯಾನು, ಆದಾಗ್ಯೂ ಶ್ರೀ ಹರಿಯ ವಚನವನ್ನುಲ್ಲಂಘಿಸಿ ಕುಂಭಕರ್ಣನ ಸಂಹಾರವು ನನಗೆ ಧರ್ಮವಲ್ಲ. ॥೧೨೩॥

ಮೂ ॥ ಇತಿ ಸ್ಮ ಸಂಚಿಂತ್ಯ ಕಪೀಶಯುಕ್ತೋ
ಜಗಾಮ ಯತ್ರೈವ ಕಪಿಪ್ರವೀರಾಃ ॥
ಸ ಕುಂಭಕರ್ಣೋಽಖಿಲವಾನರಾಂಸ್ತು
ಪ್ರಭಕ್ಷಯನ್ರಾಮಮುಪಾಜಗಾಮ ೧೨೪॥

ಅ ॥ ಈ ಪ್ರಕಾರವಾಗಿ ಆಲೋಚನೆ ಮಾಡಿ ಸುಗ್ರೀವನಿಂದ ಕೂಡಿದ ಹನುಮಂತನು, ಕಪಿಶ್ರೇಷ್ಠರುಗಳು ಎಲ್ಲಿ ಇದ್ದಾರೋ ಅಲ್ಲಿಗೆ ಹೋದನು. ಆ ಕುಂಭಕರ್ಣನು ಸಮಸ್ತ ಕಪಿಗಳನ್ನು ನುಂಗತಕ್ಕವನಾಗಿ ಶ್ರೀ ರಾಮನ ಸಮೀಪವನ್ನು ಹೊಂದಿದನು ॥೧೨೪॥

ಮೂ ॥ ತೇ ಭಕ್ಷಿತಾಸ್ತೇನ ಕಪಿಪ್ರವೀರಾಃ
ಸರ್ವೇಽಪಿ (ವಿ) ನಿರ್ಜಗ್ಮುರಮುಷ್ಯ ದೇಹಾತ್ ।
ಸ್ರೋತೋಭಿರೇವಾಥ ಚ ರೋಮಕೂಪೈಃ
ಕೇಚಿತ್ತಮೇವಾರುರುಹುರ್ಯಥಾ ಗಿರಿಂ ॥೧೨೫॥

ಅ ॥ ಕುಂಭಕರ್ಣನಿಂದ ಭಕ್ಷಿತರಾದ ಆ ದಾವ ಸಮಸ್ತರಾದ ಕಪಿಶ್ರೇಷ್ಠರು ಈತನ ದೇಹದ್ವೆರೆಯಿಂದಲೂ ('ಸ್ರವತ್ಯೇಭಿರ್ಮಲಮೂತ್ರಶ್ವಾಸಾದಿಕಮಿತಿ ಸ್ರೋತಾಂಸಿ' ಎನ್ನುವ ವ್ಯುತ್ಪತ್ತಿಯಿಂದ) ಒಂಭತ್ತು ಇಂದ್ರಿಯದ್ವಾರಗಳಿಂದಲೂ ಮತ್ತು ರೋಮಕೂಪಗಳಿಂದಲೂ ಹೊರಟುಹೋದರು. ಅನಂತರದಲ್ಲಿ ಕೆಲವು ಕಪಿಗಳು ಪರ್ವತವನ್ನು ಹೇಗೆ ಏರುತ್ತಾರೋ ಹಾಗೆಯೇ ಕುಂಭಕರ್ಣನನ್ನು ಏರಿದರು ॥೧೨೫॥

ಮೂ ॥ ಸ ತಾನ್ವಿಧೂಯಾಶು ಯಥಾ ಮಹಾಗಜೋ
ಜಗಾಮ ರಾಮಂ ಸಮರಾರ್ಥಮೇಕಃ ।
ಪ್ರಭಕ್ಷಯನ್ಸ್ವಾನಪರಾಂಶ್ಚ ಸರ್ವಶೋ
ಮತ್ತಃ ಸಮಾಘ್ರಾಯ ಚ ಶೋಣಿತಂ ಪಿಬನ್ ॥೧೨೬॥

ಅ ॥ ಮದೋನ್ಮತ್ತವಾದ ಗಜವು ಕಿವಿಯ ತಾಡನೆಯಿಂದ ಮಕ್ಷಿಕಾದಿಗಳನ್ನು ಹೇಗೆ ದೂರೀಕರಿಸುತ್ತದೋ, ಹಾಗೆಯೇ ಮದೋನ್ಮತ್ತನಾದ ಆ ಕುಂಭಕರ್ಣನು ಆ ಕಪಿಗಳನ್ನು ದೂರೀಕರಿಸಿ ಸಮಸ್ತರಾದ ಸ್ವಕೀಯರಾದ ರಾಕ್ಷಸರನ್ನು ಮತ್ತು ಇತರರಾದ ಕಪಿಗಳನ್ನು ಭಕ್ಷಣ ಮಾಡಿದವನಾಗಿ ಮತ್ತು ಆಘ್ರಾಣಿಸಿ ರಕ್ತವನ್ನು ಪಾನಮಾಡಿದವನಾಗಿ ಒಬ್ಬನೇ ಯುದ್ಧಕೋಸ್ಕರ ಶ್ರೀ ರಾಮಚಂದ್ರನನ್ನು ಸಮೀಪಿಸಿದನು ॥೧೨೬॥

ಮೂ ॥ ನ್ಯವಾರಯತ್ತಂ ಶರವರ್ಷಧಾರಯಾ
ಸ ಲಕ್ಷ್ಮಣೋ ನೈನಮಚಿಂತಯನ್ಸ್ಸಃ (ತ್ಸಃ) ॥
ಜಗಾಮ ರಾಮಂ ಗಿರಿಶೃಂಗಧಾರೀ
ಸಮಾಹ್ವಯತ್ತಂ ಸಮರಾಯ ಚಾಶು ॥೧೨೭॥

ಅ ॥ ಆ ಲಕ್ಷ್ಮಣನು ಬಾಣಗಳ ಮಳೆಯ ಪರಂಪರೆಯಿಂದ ಕುಂಭಕರ್ಣನನ್ನು ತಡೆದನು. ಕುಂಭಕರ್ಣನು ಈ ಲಕ್ಷ್ಮಣನನ್ನಾದರೂ ಗಣನೆಮಾಡಲಿಲ್ಲ, ಮತ್ತು ಕುಂಭಕರ್ಣನು ಪರ್ವತ ಶಿಖರವನ್ನು ಧರಿಸಿದವನಾಗಿ ಶ್ರೀ ರಾಮನನ್ನು ಹೊಂದಿದನು. ಯುದ್ಧಕ್ಕೋಸ್ಕರ ಶ್ರೀ ರಾಮ ಚಂದ್ರನನ್ನು ಬೇಗನೇ ಕರೆದನು ॥೧೨೭॥

ಮೂ ॥ ಅಥೋ ಸಮಾದಾಯ ಧನುಃ ಸುಘೋರಂ
ಶರಾನ್ಸುರೇಶಾ(ರಾಂಶ್ಚ ವಜ್ರಾ) ಶನಿತುಲ್ಯವೇಗಾನ್ ॥
ಪ್ರವೇಶಯಾಮಾಸ ನಿಶಾಚರೇ ಪ್ರಭುಃ
ಸ ರಾಘವಃ ಪೂರ್ವಹತೇಷು ಯದ್ವತ್ ॥೧೨೮॥

ಅ || ಸರ್ವಸಮರ್ಥನಾದ ಶ್ರೀ ರಾಮನು ಅನಂತರದಲ್ಲಿ ಅತಿಭಯಂಕರವಾದ ಧನುಸ್ಸನ್ನು ಹಿಡಿದುಕೊಂಡು ದೇವೇಂದ್ರನ ವಜ್ರಾಯುಧಕ್ಕೆ ಸದೃಶವಾದ ವೇಗವುಳ್ಳ ಬಾಣಗಳನ್ನು ಮೊದಲು ಸಂಹೃತರಾದ ಖರಪುತ್ರ-ಖರದೂಷಣ ಮೊದಲಾದ ರಾಕ್ಷಸರಲ್ಲಿ ಹೇಗೆ ಪ್ರಯೋಗಿಸಿರುವನೋ ಹಾಗೆಯೇ (ಈ ಕುಂಭಕರ್ಣನಲ್ಲಿ) ಪ್ರಯೋಗಮಾಡಿದನು ||೧೨೮||

ಮೂ || ಯಾವದ್ಬಲೇನ ನ್ಯಹನತ್ಖರಾದಿಕಾನ್
ನ ತಾವತೈವ ನ್ಯಪತತ್ಸ ರಾಕ್ಷಸಃ ||
ಅಥ ಪ್ರಹಸ್ಯಾತ್ಮಬಲೈಕದೇಶಂ
ಪ್ರದರ್ಶಯನ್ಬಾಣವರಾನ್ಮುಮೋಚ |೧೨೯||

ಅ || ಎಷ್ಟು ಬಲದಿಂದ ಖರಾದಿ ರಾಕ್ಷಸರನ್ನು ಸಂಹಾರ ಮಾಡಿರುವನೋ, ಅಷ್ಟೇ ಬಲದಿಂದ ಆ ಕುಂಭಕರ್ಣನು ಬೀಳಲಿಲ್ಲ (ಬೀಳಿಸಲಿಕ್ಕಾಗಲಿಲ್ಲ.) ಆ ಮೇಲೆ (ಸರ್ವ ಸಮರ್ಥನಾದ ಶ್ರೀ ರಾಮನು,) ನಗಾಡಿಕೊಂಡು ತನ್ನ ಬಲದ ಏಕದೇಶವನ್ನು ತೋರಿಸತಕ್ಕವನಾಗಿ ಬಾಣಶ್ರೇಷ್ಠಗಳನ್ನು ಆ ರಾಕ್ಷಸನ ಮೇಲೆ ಬಿಟ್ಟನು ||೧೨೯||

ಮೂ || ಧ್ವಾಭ್ಯಾಂ ಸ ಬಾಹೂ ನಿಚಕರ್ತ ತಸ್ಯ
ಪದದ್ವಯಂ ಚೈವ ತಥಾ ಶರಾಭ್ಯಾಂ ||
ಅಥಾಪರೇಣಾಸ್ಯ ಶಿರೋ ನಿಕೃತ್ಯ
ಸಂಪ್ರಾಕ್ಷಿಪತ್ಸಾಗರತೋಯ ಆಶು ||೧೩೦||

ಅ || ಆ ಶ್ರೀ ರಾಮನು ಆ ಕುಂಭಕರ್ಣನ ಕೈಗಳನ್ನು ಎರಡು ಬಾಣಗಳಿಂದ ಛೇದನ ಮಾಡಿದನು; ಹಾಗೆಯೇ ಬಾಣಗಳಿಂದ ಎರಡು ಪಾದಗಳನ್ನೂ ಛೇದಿಸಿದನು; ಅನಂತರದಲ್ಲಿ ಮತ್ತೊಂದು ಬಾಣದಿಂದ ಈ ಕುಂಭಕರ್ಣನ ಶಿರಸ್ಸನ್ನು ಛೇದಿಸಿ, ಸಮುದ್ರದ ಜಲದಲ್ಲಿ ಬೇಗನೇ ಬಿಸಾಡಿದನು |೧೩೦||

ಮೂ || ಅವರ್ಧತಾಬ್ಧಿಃ ಪತಿತೇಽಸ್ಯ ಕಾಯೇ
ಮಹಾಚಲಾಭೇ ಕ್ಷಣದಾಚರಸ್ಯ ||
ಸುರಾಶ್ಚ ಸರ್ವೇ ವವೃಷುಃ ಪ್ರಸೂನೈಃ
ಮರ್ಯಾದಾ ಸ್ತುವಂತೋ ರಘುವರ್ಯಮೂರ್ಧನಿ (ದ್ರ್ನಿ) ||೧೩೧||

ಅ || ರಾತ್ರಿಯಲ್ಲಿ ಸಂಚಾರ ಮಾಡತಕ್ಕ ಈ ಕುಂಭಕರ್ಣನ ಪರ್ವತಕ್ಕೆ ಸದೃಶನಾದ ಶರೀರವು ಬೀಳುತ್ತಿರಲು ಸಮುದ್ರವು ಬೆಳೆಯಿತು. ಸ್ತೋತ್ರಮಾಡತಕ್ಕ ದೇವತೆಗಳೆಲ್ಲರೂ ರಘುಕುಲ ಶ್ರೇಷ್ಠನಾದ ರಾಮನ ಶಿರಸ್ಸಿನಲ್ಲಿ ಸಂತೋಷದಿಂದ ಪುಷ್ಪಗಳಿಂದ ವೃಷ್ಟಿಯನ್ನು ಸುರಿಸಿದರು ||೧೩೧||

ಮೂ || ಯೋಜನಾನಾಂ ತ್ರಿಲಕ್ಷಂ ಹಿ ಕುಂಭಕರ್ಣೋऽಭ್ಯ (ವ್ಯ) ವರ್ಧತ ||
ಪೂರ್ವಂ ಪಶ್ಚಾತ್ಸಂಚುಕೋಚ ಲಂಕಾಯಾಮನುಷಿತುಂ ಸ್ವಯಂ ||
||೧೩೨||

ಅ || ಕುಂಭಕರ್ಣನು ಲಂಕೆಯಲ್ಲಿ ಆವಾಸಮಾಡುವುದಕ್ಕಿಂತ ಮೊದಲು ಬಾಲ್ಯಾವಸ್ಥೆಯಲ್ಲಿ ಯೋಜನಗಳ ಮೂರು ಲಕ್ಷ ಪರ್ಯಂತರವಾಗಿ ಬೆಳೆದಿದ್ದನು. ಆ ಮೇಲೆ ತಾನು ಲಂಕೆಯಲ್ಲಿ ಆವಾಸ ಮಾಡುವುದಕ್ಕೋಸ್ಕರ ಸಂಕೋಚವನ್ನು ಹೊಂದಿದನು.

ವಿಶೇಷಾಂಶ— 'ಅಯಂ ದ್ವೀಪಃ ಸಾಗರಶ್ಚ ಲಕ್ಷಯೋಜನವಿಸ್ತೃತಃ' ಇತ್ಯಾದಿ ಪ್ರಮಾಣಪ್ರಕಾರ ಯದ್ಯಪಿ ಲವಣಸಮುದ್ರವು ಈ ದ್ವೀಪದೆಶೆಯಿಂದ ದ್ವೀಪಾಂತರಪರ್ಯಂತವಾಗಿ ಲಕ್ಷಯೋಜನ ವಿಸ್ತೃತವೇ ಆದುದು. ಆದಾಗ್ಯೂ ಸುತ್ತಮುತ್ತಲೂ ಬಹುಲಕ್ಷಯೋಜನ ವಿಸ್ತೃತವಾಗಿರುವುದರಿಂದ ಶ್ರೀರಾಮನ ಬಾಣದ ವೇಗದಿಂದ ಅತ್ತಿತ್ತ ಬಿಸಾಡಲ್ಪಟ್ಟ ಮೂರುಲಕ್ಷಯೋಜನ ಪ್ರಮಾಣಭೂತವಾದಾಗ್ಯೂ ಕುಂಭಕರ್ಣನ ಶರೀರದ ಖಂಡಗಳಿಗೆ ಅವಕಾಶವಾಯಿತೆಂದು ತಿಳಿಯತಕ್ಕದ್ದು ||೧೩೨||

ಮೂ || ಸ ತು ಸ್ವಭಾವಮಾಪನ್ನೋ ಮ್ರಿಯಮಾಣೋಽಭ್ಯ (ನ್ಯ) ವರ್ಧತ ||
ತೇನಾಸ್ಮಿನ್ಪತಿತೇ ತ್ವಬ್ಧಿರವರ್ಧದಧಿಕಂ ತದಾ ||೧೩೩||

ಅ || ಸಾಯುತಕ್ಕ ಆ ಕುಂಭಕರ್ಣನು ಮೂರುಲಕ್ಷ ಯೋಜನಾಭಿವೃದ್ಧಿರೂಪವಾದ ಸ್ವಭಾವವನ್ನು ಹೊಂದಿದವನಾಗಿ ಬೆಳೆದನು. ಆ ಅಭಿವೃದ್ಧಿಕಾರಣದಿಂದ ಈ ಕುಂಭಕರ್ಣನು ಬೀಳುತ್ತಿರಲು ಆವಾಗ ಹೆಚ್ಚಾಗಿ ಸಮುದ್ರವು ಬೆಳೆಯಿತು ||೧೩೩||

ಮೂ || ಅಥಾಪರೇ ಯೇ ರಜನೀಚರಾಸ್ತದಾ
ಕಪಿಪ್ರವೀರೈರ್ನಿಹತಾಶ್ಚ ಸರ್ವಶಃ ||
ಹತಾವಶಿಷ್ಟಾಸ್ತ್ವರಿತಾಃ ಪ್ರದುದ್ರುವು-
ರ್ಭ್ರಾತುರ್ವಧಂ ಚೋಚುರುಪೇತ್ಯ ರಾವಣಂ ||೧೩೪||

ಅ || ಅನಂತರದಲ್ಲಿ ಬೇರೆಯಾದ ಯಾವ ರಾಕ್ಷಸರೋ ಅವರೆಲ್ಲರೂ ಕಪಿಶ್ರೇಷ್ಠರಿಂದ ಸಂಹರಿಸಿಕೊಳ್ಳಲ್ಪಟ್ಟರು. ಕೊಲ್ಲಲ್ಪಟ್ಟು ಉಳಿದ ರಾಕ್ಷಸಶ್ರೇಷ್ಠರು ವೇಗದಿಂದ ಓಡಿಹೋದರು. (ಓಡಿಹೋದವರು) ರಾವಣನನ್ನು ಹೊಂದಿ, ಸಹೋದರನಾದ ಕುಂಭಕರ್ಣನ ನಾಶವನ್ನು ತಿಳಿಸಿದರು ||೧೩೪||

ಮೂ || ಸ ದುಃಖತಪ್ತೋ ನಿಪಪಾತ ಮೂರ್ಛಿತೋ
ನಿರಾಶಕಶ್ಚಾಭವದಾತ್ಮಜೀವಿತೇ ||
ತಮಾಹ ಪುತ್ರಸ್ತ್ರಿದಶೇಶಶತ್ರು-
ರ್ನಿಯುಂಕ್ಷ್ವಮಾಂ ಶತ್ರುವಧಾಯ ಮಾ ಚಿರಂ ||೧೩೫||

ಅ || ಆ ರಾವಣನು ದುಃಖದಿಂದ ಪೀಡಿತನಾಗಿ ಮೂರ್ಛಿತನಾಗಿ ಬಿದ್ದನು. ತನ್ನ ಜೀವನದ ವಿಷಯದಲ್ಲಿ ಆಶಾರಹಿತನೂ ಆದನು. ದೇವೇಂದ್ರನಿಗೆ ಶತ್ರುವಾದ, (ರಾವಣನ) ಮಗನಾದ ಇಂದ್ರಜಿತುವು ಶತ್ರುವಾದ ರಾಮನ ನಾಶಕ್ಕೋಸ್ಕರ ನನ್ನನು ಆಜ್ಞಾಪಿಸು. ತಡಮಾಡಬೇಡವೆಂದು ರಾವಣನನ್ನು ಕುರಿತು ಹೇಳಿದನು ||೧೩೫||

ಮೂ ॥ ಮಯಾ ಗೃಹೀತಸ್ತ್ರಿದಶೇಶ್ವರಃ ಪುರಾ
ವಿಷೀದಸೇ ಕಿಂ ನರರಾಜಪುತ್ರತಃ ॥
ಸ ಏವಮುಕ್ತ್ವಾ ಪ್ರಜುಹಾವ ಪಾವಕಂ
ಶಿವಂ ಸಮಭ್ಯರ್ಚ್ಯ ಸಮಾರುಹದ್ರಥಂ ॥೧೩೬॥

ಅ ॥ ದೇವತೆಗಳಿಗೆ ಸ್ವಾಮಿಯಾದ ಇಂದ್ರನು ಪೂರ್ವದಲ್ಲಿ ನನ್ನಿಂದ ಹಿಡಿಯಲ್ಪಟ್ಟಿದ್ದಾನೆ. ನೀನು ಮನುಷ್ಯರಿಗೆ ಸ್ವಾಮಿಯಾದ ದಶರಥನ ಪುತ್ರನಾದ ರಾಮನದ್ದೆಸೆಯಿಂದ ಏಕೆ ದುಃಖಪಡುತ್ತೀ? ಆ ಇಂದ್ರಜಿತುವು ಹೀಗೆಂದು ಹೇಳಿ ಅಗ್ನಿಯನ್ನು ಹೋಮ ಮಾಡಿದನು. ರುದ್ರನನ್ನು ಪೂಜಿಸಿದವನಾಗಿ ರಥವನ್ನೇರಿದನು ॥೧೩೬॥

ಮೂ ॥ ಸ ಆತ್ತಧನ್ವಾ ಸಶರೋ ರಥೇನ
ವಿಯತ್ಸಮಾರುಹ್ಯ ಯಯಾವದರ್ಶನಂ ॥
ಸ ನಾಗಪಾಶೈರ್ವರತಃ ಶಿವಸ್ಯ
ಬಬಂಧ ಸರ್ವಾನ್ಕಪಿವೀರಸಂಘಾನ್ ॥೧೩೭॥

ಅ ॥ ಬಾಣದಿಂದ ಕೂಡಿದ ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ ಆ ಇಂದ್ರಜಿತುವು ರಥದಿಂದ ಆಕಾಶವನ್ನೇರಿ ಇನ್ನೊಬ್ಬರ ಕಣ್ಣಿಗೆ ತೋರದಿರುವಿಕೆಯನ್ನು ಹೊಂದಿದನು ಆ ಇಂದ್ರಜಿತುವು ರುದ್ರನ ವರದೆಸೆಯಿಂದ ಎಲ್ಲಾ ಕಪಿಶ್ರೇಷ್ಠಗಳ ಸಮೂಹಗಳನ್ನು ಸರ್ಪಾಸ್ತ್ರಗಳಿಂದ ಕಟ್ಟಿಹಾಕಿದನು ॥೧೩೭॥

ಮೂ ॥ ಪುರಾವತಾರಾಯ ಯದಾ ಸ ವಿಷ್ಣು-
ರ್ದಿದೇಶ ಸರ್ವಾಂಸ್ತ್ರಿದಶಾಂಸ್ತ್ವದೈವ ॥
ಮಮಾಪಿ ಸೇವಾ ಭವತಾ ಪ್ರಯೋಜ್ಯೇ-
ತ್ಯೇವಂ ಗರುತ್ಮಾನವದದ್ವೃಷಾಕಪಿಂ ॥೧೩೮॥

ಅ ॥ ರಾಮಾವತಾರದಿಂದ ಮೊದಲು, ಬ್ರಹ್ಮಾದಿಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರುವ ಕಾಲದಲ್ಲಿ ಯಾವಾಗ ಆ ವಿಷ್ಣುವು ಅವತಾರವನ್ನು ಮಾಡುವುದಕ್ಕೋಸ್ಕರ ಎಲ್ಲಾ ದೇವತೆಗಳನ್ನು ಅಪ್ಪಣೆ ಕೊಟ್ಟನೋ, ಆವಾಗಲೇ ಗರುಡನು ನನಗೂ ಕೂಡ ಸೇವೆಯು ನಿನ್ನಿಂದ ಮಾಡಿಸಲ್ಪಡತಕ್ಕದ್ದು. ಈ ಪ್ರಕಾರವಾಗಿ ಅಭೀಷ್ಟಪ್ರದಾಯಕನೂ ಷಡ್ಗುಣಪರಿಪೂರ್ಣನೂ ದುಃಖಪರಿಹಾರಕನೂ ಆದುದರಿಂದ ವೃಷಾಕಪಿ ಎನ್ನಿಸಿಕೊಂಡ ಶ್ರೀ ನಾರಾಯಣದೇವರನ್ನು ಕುರಿತು ಹೇಳಿದನು. ॥೧೩೮॥

ಮೂ ॥ ತಮಾಹ ವಿಷ್ಣುರ್ನ ಭುವಿ ಪ್ರಜಾತಿ-
ಮುಪೈಹಿ ಸೇವಾಂ ತವ ಚಾನ್ಯಥಾಹಂ ॥
ಆದಾಸ್ಯ ಏವಾತ್ರ ಯಥಾ ಯಶಃ ಸ್ಯಾ-
ದ್ವರ್ಣಶ್ಚ ಕರ್ತಾನ್ಯಕೃದೇವ ಚ ಸ್ಯಾಃ ॥೧೩೯॥

ಅ ॥ ನಾರಾಯಣ ದೇವರು ಆ ಗರುಡನನ್ನು ಕುರಿತು, ಹೇಳಿದರು. ನೀನು ಭೂಮಿಯಲ್ಲಿ ಉತ್ಪತ್ತಿಯನ್ನು ಹೊಂದಬೇಡ. (ಹೇಗೆ ಇತರರ ಸೇವೆಯನ್ನು ಮಾಡಿಸಿಕೊಳ್ಳುವೆನೋ ಹಾಗೆಯೇ) ನಿನ್ನ ಸೇವೆಯನ್ನೂ ನಿನ್ನ ಉತ್ಪತ್ತಿಯನ್ನು ಹೊರತೇ ತೆಗೆದುಕೊಳ್ಳುವೆನು. ನಾನು (ಭೂಮಿಯಲ್ಲಿ ಹುಟ್ಟದೆ) ನಿನಗೆ ಈ ರಾಮಾವತಾರಕಾಲದಲ್ಲಿ ಹೇಗೆ ಕೀರ್ತಿಯೂ ಧರ್ಮವೂ ಆಗುವುದೋ, ಮಾತತಕ್ಕ ಕೆಲಸವನ್ನು ಮಾಡಿಯೇ ಬಿಡುತ್ತಿಯೋ, ಹಾಗೆಯೇ ಆ ನಿನ್ನ ಸೇವೆಯನ್ನು ಸ್ವೀಕರಿಸುತ್ತೇನೆ. ॥೧೩೯॥

ಮೂ ॥ ವರೇಣ ಶರ್ವಸ್ಯ ಹಿ ರಾವಣಾತ್ಮಜೋ
ಯದಾ ನಿಬಧ್ನಾತಿ ಕಪೀನ್ಸಲಕ್ಷ್ಮಣಾನ್ ।
ಉರಂಗಪಾಶೇನ ತದಾ ತ್ವಮೇವ
ಸಮೇತ್ಯ ಸರ್ವಾನಪಿ ಮೋಚಯಸ್ವ ॥೧೪೦॥

ಅ ॥ ಯಾವಾಗ ರಾವಣನ ಮಗನಾದ ಇಂದ್ರಜಿತುವು ರುದ್ರನ ವರದಿಂದ (ಹೊಂದಿದ) ನಾಗಾಸ್ತ್ರದಿಂದ ಲಕ್ಷ್ಮಣನಿಂದ ಕೂಡಿದ ಎಲ್ಲಾ ಕಪಿಗಳನ್ನು ಕಟ್ಟುತ್ತಾನೋ, ಆವಾಗ ನೀನೇ ಬಂದು ಎಲ್ಲರನ್ನೂ ಬಿಡಿಸು.

**ವಿಶೇಷಾಂಶ** — ಗರುಡನು ಶಿವನಿಗೆ ಸಮಾನನಾದ ಪ್ರಯುಕ್ತ ಶಿವನ ವರವನ್ನುಲ್ಲಂಘಿಸಲಿಕ್ಕೆ ಶಕ್ತಿಯಿದೆ ಎನ್ನುವ ಅಭಿಪ್ರಾಯದಿಂದ 'ವರೇಣ ಶರ್ವಸ್ಯ' ಎಂದು ಹೇಳಿರು ॥೧೪೦॥

ಮೂ ॥ ಅಹಂ ಸಮರ್ಥೋಽಪಿ ಸ ಲಕ್ಷ್ಮಣಶ್ಚ ॥
ತಥಾ ಹನೂಮಾನ್ನ ವಿಮೋಚಯಾಮಃ ॥
ತವ ಪ್ರಿಯಾರ್ಥಂ ಗರುಡೈಷ ಏವ
ಕೃತಸ್ತ್ವಾದೇಶ ಇಮಂ ಕುರುಷ್ವ ॥೧೪೧॥

ಅ ॥ ನಾನು ನಾಗಪಾಶದಿಂದ ಬಿಡಿಸುವುದಕ್ಕೆ ಸಮರ್ಥನು; ಹಾಗೆಯೇ ನಾಗಪಾಶದಿಂದ ಬದ್ಧನಾದಾಗ್ಯೂ ಆ ಲಕ್ಷ್ಮಣನೂ ಸಮರ್ಥನು; ಹಾಗೆಯೇ ಹನುಮಂತನೂ ಸಮರ್ಥನು. ನಾವು ಮೂವರೂ ಬಿಡಿಸುವುದಿಲ್ಲ. ಎಲೋ ಗರುಡನೇ! ನಿನ್ನ ಪ್ರೀತ್ಯರ್ಥವಾಗಿಯೇ ಈ ಆದೇಶವು ನಿನಗೇನೇ ಮಾಡಲ್ಪಟ್ಟದೆ. ಈ ಆದೇಶವನ್ನು (ನೀನೇ) ಮಾಡು.

**ವಿಶೇಷಾಂಶ**— ಲಕ್ಷ್ಮಣನು ನಾಗಾಧಿರಾಜನಾದ ಶೇಷನಾದ ಪ್ರಯುಕ್ತವೂ, ವರವನ್ನು ಕೊಡತಕ್ಕ ರುದ್ರನ ಸಮಾನನಾದಪ್ರಯುಕ್ತವೂ ಲಕ್ಷ್ಮಣನಿಗೆ ನಾಗಪಾಶವನ್ನು ಬಿಡಿಸಲಿಕ್ಕೆ ಶಕ್ತಿಯಿದೆ ಎಂದು ತಿಳಿಯತಕ್ಕದು ॥೧೪೧॥

ಮೂ ॥ ತದೇತದುಕ್ತಂ ಹಿ ಪುರಾತ್ಮನಾ ಯ-
ತ್ತತೋ ಹಿ ರಾಮೋ ನ ಮುಮೋಚ ಕಂಚನ ॥
ಸ (ನ) ಲಕ್ಷ್ಮಣೋ ನೈವ ಚ ಮಾರುತಾತ್ಮಜಃ
ಸ ಏ (ಚೈ)ವ ಜಾನಾತಿ ಹಿ ದೇವಗುಹ್ಯಂ ॥೧೪೨॥

ಅ ॥ ಮೊದಲು ಯಾವ ಕಾರಣದಿಂದ ರಾಮರೂಪಿಯಾದ ತನ್ನಿಂದ ಆ ಈ ವಾಕ್ಯವು ಹೇಳಲ್ಪಟ್ಟದೋ, ಆದಕಾರಣದಿಂದ ಯಾರೊಬ್ಬನನ್ನೂ ರಾಮನು ಬಿಡಿಸಲಿಲ್ಲ. ಲಕ್ಷ್ಮಣನೂ

ಬಿಡಿಸಲಿಲ್ಲ, ವಾಯುಪುತ್ರನಾದ ಹನುಮಂತನೂ ಯಾರನ್ನೂ ಬಿಡಿಸಲಿಲ್ಲ. (ಲಕ್ಷ್ಮಣನೂ ಹನುಮಂತನೂ ಏತಕ್ಕಾಗಿ ಬಿಡಿಸಲಿಲ್ಲವೆಂದರೆ) ಲಕ್ಷ್ಮಣನಿಂದ ಸಹಿತನಾದ ಹನುಮಂತನೇ ಶ್ರೀಹರಿಯ ಗೋಪ್ಯಾಭಿಪ್ರಾಯವನ್ನು ತಿಳಿದಿರುತ್ತಾನೆ (ಆದ್ದರಿಂದ ಬಿಡಿಸಲಿಲ್ಲ.)

**ವಿಶೇಷಾಂಶ**— 'ಸ ಚೈವ ಜಾನಾತಿ ಹಿ ದೇವಗುಹ್ಯಂ' ಎನ್ನುವಲ್ಲಿ ಆ ಹನುಮಂತನೇ ದೇವಗೋಪ್ಯವನ್ನು ತಿಳಿಯುತ್ತಾನೆ. ಚ-ಲಕ್ಷ್ಮಣನೂ ತಿಳಿಯುತ್ತಾನೆ. ಗರುಡನನ್ನು ಕುರಿತು ಉಪದೇಶಿಸುವ ಸಮಯದಲ್ಲಿ ಶಯನೀಯ ಸ್ಥಾನನಾಗಿ ಒಟ್ಟಿಗೆ ಇದ್ದಪ್ರಯುಕ್ತ ಲಕ್ಷ್ಮಣನೂ ಕೂಡ ತಿಳಿದಿರುತ್ತಾನೆ. ಹನುಮಂತನಾದರೂ ಆಲೋಚಿಸುವಾಗ ಸರ್ವವಿಷಯಕ ಜ್ಞಾನವುಳ್ಳವನಾದ ಪ್ರಯುಕ್ತ ತನ್ನ ಶಕ್ತಿಯಿಂದಲೇ ತಿಳಿಯುತ್ತಾನೆ ॥೧೪೨॥

ಮೂ ॥ ಅಥೋ ನಿಬಧ್ಯಾಕು ಹರೀನ್ಸಲಕ್ಷ್ಮಣಾ-
ಞ್ಜಗಾಮ ರಕ್ಷಃ ಸ್ವಪಿತುಃ ಸಕಾಶಂ ॥
ನನಂದ ಚಾಸೌ ಪಿಶಿತಾಶನೇಶ್ವರಃ
ಶಶಂಸ ಪುತ್ರಂ ಚ ಕೃತಾತ್ಮಕಾರ್ಯಂ ॥೧೪೩॥

ಅ ॥ ಅನಂತರದಲ್ಲಿ ಲಕ್ಷ್ಮಣನಿಂದ ಸಹಿತರಾದ ಕಪಿಗಳನ್ನು ರಾಕ್ಷಸನಾದ ಇಂದ್ರಜಿತುವು ಬೇಗನೇ ಕಟ್ಟಿಹಾಕಿ ಹೊರಟುಹೋದನು. ಮಾಂಸವೇ ಅಶನವಾಗಿವುಳ್ಳ ರಾಕ್ಷಸರಿಗೆ ಸ್ವಾಮಿಯಾದ ರಾವಣನು ತನ್ನ ಪ್ರಯೋಜನವನ್ನು ಮಾಡಿರತಕ್ಕ ತನ್ನ ಮಗನನ್ನು ಹೊಗಳಿ ಸಂತೋಷಪಟ್ಟನು.

**ವಿಶೇಷಾಂಶ**— ರಾಮನ ಮುಂಭಾಗದಲ್ಲಿ ರಾವಣಾದಿಗಳೆಲ್ಲರೂ ನಪುಂಸಕ ಪ್ರಾಯರೆಂದು ತೋರಿಸುವುದಕ್ಕಾಗಿ ಗ್ರಂಥಕಾರರು ಎಲ್ಲಾ ಕಡೆಗಳಲ್ಲಿಯೂ ನಪುಂಸಕಾಂತವಾದ ರಕ್ಷಃಪದವನ್ನೇ ಪ್ರಯೋಗಿಸಿರುವರು ॥೧೪೩॥

ಮೂ ॥ ಸ ಪಕ್ಷಿರಾಜೋಽಥ ಹರೇರ್ನಿದೇಶಂ
ಸ್ಮರಂಸ್ತ್ವರಾವಾನಿಹ ಚಾಜಗಾಮ ॥
ತತ್ಪಕ್ಷವಾತಸ್ಪರ್ಶೇನ ಕೇವಲಂ
ವಿನಷ್ಟ ಏಷಾಂ ಸ ಉರಂಗಬಂಧಃ ॥೧೪೪॥

ಅ ॥ ಅನಂತರದಲ್ಲಿ ಆ ಗರುಡನಾದರೂ ಪರಮಾತ್ಮನ ಅಪ್ಪಣೆಯನ್ನು ನೆನಪಿನಲ್ಲಿಟ್ಟುಕೊಂಡವನಾಗಿ ವೇಗವುಳ್ಳವನಾಗಿ ಈ ರಣಸ್ಥಾನವನ್ನು ಕುರಿತು ಬಂದನು. ಆ ಗರುಡನ ರೆಕ್ಕೆಯ ಗಾಳಿಯ ಸ್ಪರ್ಶಮಾತ್ರದಿಂದಲೇ ಈ ಲಕ್ಷ್ಮಣನಿಂದ ಸಹಿತರಾದ ಕಪಿಗಳ ಈ ನಾಗಪಾಶವು ನಷ್ಟವಾಗಿ ಹೋಯಿತು ॥೧೪೪॥

ಮೂ ॥ ಸ ರಾಮಮಾನಮ್ಯ ಪರಾತ್ಮದೈವತಂ
ಯಯೌ ಸುಮಾಲ್ಯಾಭರಣಾನುಲೇಪನಃ ॥
ಕಪಿಪ್ರವೀರಾಸ್ತು (ಶ್ಚ) ತರೂಞ್ಛಿಲಾಂಶ್ಚ
ಪ್ರಗೃಹ್ಯ ನೇದುರ್ಬಲಿನಃ ಪ್ರಹೃಷ್ಟಾಃ ॥೧೪೫॥

ಅ ॥ ಶೋಭನವಾದ ಪುಷ್ಪಗಳೂ, (ಮಾಲಿಕೆಗಳೂ) ಕುಂಡಲಾದಿ ಭೂಷಣಗಳೂ, ಗಂಧಾದಿಗಳೂ ಇವುಗಳುಳ್ಳ ಆ ಗರುಡನು ಮುಖ್ಯವಾಗಿ ತನಗೆ ಸ್ವಾಮಿಯಾದ ಶ್ರೀರಾಮದೇವರನ್ನು ನಮಸ್ಕಾರಮಾಡಿ ಹೊರಟುಹೋದನು. ಬಲಿಷ್ಠರಾದ ಕಪಿಶ್ರೇಷ್ಠರುಗಳು ಸಂತುಷ್ಟರಾದವರಾಗಿ ಮರಗಳನ್ನೂ ಬಂಡೆಗಳನ್ನೂ ಹಿಡಿದುಕೊಂಡು ವೀರಧ್ವನಿಯನ್ನು ಮಾಡಿದರು ॥೧೪೫॥

ಮೂ ॥ ಶ್ರುತ್ವಾ ನಿನಾದಂ ಪ್ಲವಗೇಶ್ವರಾಣಾಂ
ಪುನಃ ಸಪುತ್ರೋऽತ್ರ ಸದತ್ರ ರಾವಣಃ ॥
ಬಂಧಾದಮುಷ್ಮಾತ್ಕಪಿ(ತಿ)ನಿಃಸೃತಾಸ್ತೇ
ಕಿಮತ್ರ ಕಾರ್ಯಂ ತ್ವಿತಿ ಚಿಂತಯಾನಃ ॥೧೪೬॥
ಪುನಶ್ಚ ಹುತ್ವಾ ಸ ಹುತಾಶಮೇವ
ರಥಂ ಸಮಾರುಹ್ಯ ಯಯಾವದರ್ಶನಂ ॥
ವವರ್ಷ ಚಾಸ್ತ್ರಾಣಿ ಮಹಾಂತ್ಯಜಸ್ರಂ
ನರಾದುಮೇಶಸ್ಯ ತಥಾಬ್ಜಜಸ್ಯ ॥೧೪೭॥

ಅ ॥ ಕಪಿಶ್ರೇಷ್ಠರ ವೀರಧ್ವನಿಯನ್ನು ಕೇಳಿ ಮಗನಾದ ಇಂದ್ರಜಿತುವಿನಿಂದ ಸಹಿತನಾದ ರಾವಣನು (ಲಕ್ಷ್ಮಣಾದಿಯಾಗಿ ನಾಗಪಾಶದಿಂದ ಬಿಗಿಯಲ್ಪಟ್ಟ ಕಪಿಗಳ) ಬಂಧವಿಮೋಚನವಾಗುವಾಗ ಭಯವನ್ನೇ ಹೊಂದಿದನು. ಈ ನಾಗಪಾಶದೆಶೆಯಿಂದ ಆ ಕಪಿಗಳು ಬಿಡಲ್ಪಟ್ಟರು. (ಪುನಃ ಇಂದ್ರಜಿತುವು) ಈ ವಿಷಯದಲ್ಲಿ ಏನು ಮಾಡತಕ್ಕದು ಎಂದು ಚಿಂತಿಸತಕ್ಕವನಾಗಿ ತಿರುಗಿ ಅಗ್ನಿಯನ್ನೇ ಹೋಮಿಸಿ, ರಥವನ್ನೇರಿ ಅದರ್ಶನವನ್ನು ಹೊಂದಿದನು. ರುದ್ರನ ವರಬಲದಿಂದ, ಹಾಗೆಯೇ ಬ್ರಹ್ಮನ ವರಬಲದಿಂದಲೂ ಅನೇಕ ಮಹಾಸ್ತ್ರಗಳನ್ನು ನಿರಂತರದಲ್ಲಿಯೂ ವರ್ಷಿಸಿದನು. ॥೧೪೬॥೧೪೭॥

ಮೂ ॥ ಪುನಶ್ಚ ತಸ್ಯಾಸ್ತ್ರನಿಪೀಡಿತಾಸ್ತೇ
ನಿಪೇತುರುರ್ವ್ಯಾಂ ಕಪಯಃ ಸಲಕ್ಷ್ಮಣಾಃ ॥
ಸ್ಪೃಶಂತಿ ನಾಸ್ತ್ರಾಣಿ ದುರಂತಶಕ್ತಿಂ
ತನುಂ ಸಮೀರಸ್ಯ ಹಿ ಕಾನಿ ಚಿತ್ಕ್ವಚಿತ್ ॥೧೪೮॥

ಅ ॥ ಮತ್ತು ಆ ಇಂದ್ರಜಿತುವಿನ ಅಸ್ತ್ರದಿಂದ ಪೀಡಿತರಾದ ಲಕ್ಷ್ಮಣನಿಂದ ಸಹಿತರಾದ ಕಪಿಗಳೆಲ್ಲರೂ ಭೂಮಿಯಲ್ಲಿ ಬಿದ್ದರು. ಅಪರಿಮಿತವಾದ ಸಾಮರ್ಥ್ಯವುಳ್ಳ ವಾಯುವಿನ ಮಗನಾದ ಹನುಮಂತನನ್ನು ಯಾವ ಅಸ್ತ್ರಗಳೂ ಎಲ್ಲಿಯೂ ಮುಟ್ಟುವುದಿಲ್ಲ ॥೧೪೮॥

ಮೂ ॥ ವಿಜ್ಞಾತುಕಾಮಃ ಪುರಿ ಸಂಪ್ರವೃತ್ತಿಂ
ವಿಭೀಷಣಃ ಪೂರ್ವಗತಸ್ತದಾಗಾತ್ ॥
ದದರ್ಶ ಸರ್ವಾನ್ಪತಿತಾನ್ಸ ವಾನರಾ-
ನ್ಮರುತ್ಸುತಂ ತ್ವೇಕಮನಾಕುಲಂ ಚ ॥೧೪೯॥

ಅ ॥ ಪಟ್ಟಣವಾರ್ತೆಯನ್ನು ತಿಳಿಯಲಿಕ್ಕೆ ಇಚ್ಛೆಯುಳ್ಳವನಾಗಿ ಮೊದಲು ಹೋಗಿರತಕ್ಕ ವಿಭೀಷಣನು ಆವಾಗ ಬಂದನು. ಆ ವಿಭೀಷಣನು ಬಿದ್ದಿರತಕ್ಕ ಎಲ್ಲಾ ಕಪಿಗಳನ್ನೂ ಮೋಹರಹಿತನಾದ ವಾಯುಪುತ್ರನಾದ ಹನುಮಂತನೊಬ್ಬನನ್ನೂ ಕೂಡ ನೋಡಿದನು. ॥೧೪೯॥

ಮೂ ॥ ಸ ತಂ ಸಮಾದಾಯಯಯೌ ವಿಭಾತ್ಮಜಂ
ವಿಮೂರ್ಚ್ಛಿತಂ ಚೋದಕಸೇಕತಸ್ತಂ ॥
ಆಶ್ವಾಸ್ಯ ಕಿಂ ಜೀವಸಿ ಹೀತ್ಯವೋ(ತ್ಯುವಾ) ಚ-
ತ್ತಥೇತಿ ಸ ಪ್ರಾಹ ಚ ಮಂದವಾಕ್ಯಃ ॥೧೫೦॥

ಅ ॥ ಆ ವಿಭೀಷಣನು ಹನುಮಂತನ ಕೈಯ್ಯನ್ನು ಹಿಡಿದುಕೊಂಡು ಜಾಂಬವಂತನನ್ನು ಕುರಿತು ಹೊರಟುಹೋದನು. ಮೂರ್ಛೆಯನ್ನು ಹೊಂದಿದ ಆ ಜಾಂಬವಂತನನ್ನು ಜಲ ಪ್ರೋಕ್ಷಣೆಯಿಂದ ಎಚ್ಚರಿಸಿ. ಏನು ಜೀವಿಸಿಕೊಂಡಿದ್ದೀಯೋ ಎಂದು ಹೇಳಿದನು. ಜಾಂಬವಂತನು ಮೆಲ್ಲಗೆ ವಾಕ್ಯವುಳ್ಳವನಾಗಿ ಹಾಗೆ ಎಂತೆಂದು (ಅಂದರೆ ಜೀವಿಸಿಕೊಂಡಿದ್ದೇನೆ) ಎಂದು ಹೇಳಿದನು. ಕಲ್ಪಪರ್ಯಂತವಾಗಿ ಜೀವಿಸಿಕೊಂಡು ಇರು ಎಂದು ರಾಮನ ವರವಿದ್ದುದರಿಂದ ಜಾಂಬವಂತನ ಜೀವನವು ಪ್ರಸಿದ್ಧವು ॥೧೫೦॥

ಮೂ ॥ ಊಚೇ ಪುನರ್ಜೀವತಿ ಕಿಂ ಹನೂಮಾ-
ನ್ಜೀವಾಮ (ಸ್ಮ) ಸರ್ವೇಽಪಿ ಹಿ ಜೀವನಾನೇ ॥
ತಸ್ಮಿನ್ಹತೇ ನಿಹತಾಶ್ಚೈವ ಸರ್ವೇ
ಇತೀರಿತೇಽಸ್ಮೀತ್ಯವದತ್ಸ ಮಾರುತಿಃ ॥೧೫೧॥

ಅ ॥ ಜಾಂಬವಂತನು ತಿರುಗಿ ಹೇಳಿದನು. ಹನುಮಂತನು ಜೀವಿಸಿಕೊಂಡಿದ್ದಾನೋ ಏನು? ಹನುಮಂತನು ಜೀವಿಸಿಕೊಂಡಿದ್ದರೆ ನಾವೆಲ್ಲರೂ ಬದುಕಿಕೊಂಡಿದ್ದೇವೆ. ಆ ಹನುಮಂತನು ಸಂಹರಿಸಿಕೊಳ್ಳಲ್ಪಡುತ್ತಿರಲು ನಾವೆಲ್ಲರೂ ಸಂಹರಿಸಿಕೊಳ್ಳಲ್ಪಡುತ್ತೇವೆ. ಈ ಪ್ರಕಾರವಾಗಿ (ಜಾಂಬವಂತನಿಂದ) ಹೇಳಲ್ಪಡುತ್ತಿರಲು ಆ ಹನುಮಂತನು ಜೀವಿಸಿಕೊಂಡಿದ್ದೇನೆಂದು ಹೇಳಿದನು.

ವಿಶೇಷಾಂಶ— ಅಸ್ತ್ರದಿಂದುಂಟಾದ ವೇದನೆಯಿಂದ ಕಣ್ಣನ್ನು ಮುಚ್ಚಿಕೊಂಡ ಜಾಂಬವಂತನು ಸ್ವರದಿಂದ ವಿಭೀಷಣನನ್ನೇ ತಿಳಿದನು. ಹನುಮಂತನು ಸುಮ್ಮನೆ ಕೂತುಕೊಂಡ ಪ್ರಯುಕ್ತ ಹನುಮಂತನನ್ನು ನೋಡಲಿಲ್ಲ; ಸ್ವರದಿಂದಲೂ ತಿಳಿಯಲಿಲ್ಲ. ಆದುದರಿಂದಲೇ 'ಜೀವತಿ ಕಿಂ ಹನೂಮಾನ್' ಇತ್ಯಾದಿ ಪ್ರಶ್ನೆಯು. ಇಲ್ಲವಾದರೆ ಹನುಮದ್ವಿಭೀಷಣರು ಇಬ್ಬರೂ ಒಟ್ಟಿಗೇನೇ ಬಂದಪ್ರಯುಕ್ತ ಪ್ರಶ್ನೆಯೇ ಕೂಡದೆ ಹೋಗಬೇಕಾಗುವುದು ॥೧೫೧॥

ಮೂ ॥ ಇತ್ಯುಕ್ತೋ ಜಾಂಬವಾನಾಹ ಹನೂಮಂತಮನಂತರಂ ॥
ಯೋಽಸೌ ಮೇರೋಃ ಸಮೀಪಸ್ಥೋ ಗಂಧಮಾಧನಸಂಜ್ಞಕಃ ॥
॥೧೫೨॥

ಗಿರಿಸ್ತಸ್ಮಾತ್ಸಮಾಹಾರ್ಯಂ ತ್ವಯೌಷಧಿಚತುಷ್ಟಯಂ ॥
ಮೃತಸಂಜೀವನೀ ಮುಖ್ಯಾ ಸಂಧಾನಕರಣೀ ಪರಾ ॥
ಸವರ್ಣಕರಣೀ ಚೈವ ವಿಶಲ್ಯಕರಣೀತಿ ಚ ॥೧೫೩॥

ಅ ॥ ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ಜಾಂಬವಂತನು ಹನುಮಂತನ ವಾಕ್ಯಾನಂತರದಲ್ಲಿ ಹನುಮಂತನನ್ನು ಕುರಿತು ಹೇಳಿದನು. ಯಾವ ಮೇರುಪರ್ವತದ ಸಮೀಪದಲ್ಲಿರತಕ್ಕ ಗಂಧಮಾದನ ಎಂದು ಹೆಸರುಳ್ಳ ಪರ್ವತವಿದೆಯೋ ಅವರದ್ದೆಶೆಯಿಂದ ನಿನ್ನಿಂದ ನಾಲ್ಕು

ಔಷಧಿಗಳು ತರತಕ್ಕದ್ದು. ಯಾವುವೆಂದರೆ (೧) ಸತ್ತವರನ್ನು ಜೀವಮಾಡತಕ್ಕ ಮೃತಸಂಜೀವಿನಿ ಯೆಂಬುವುದು ಎಲ್ಲಾ ಔಷಧಿಗಳಲ್ಲಿ ಶ್ರೇಷ್ಠವಾದದ್ದು. (೨) ಮತ್ತೊಂದು ಭಿನ್ನಗಳಾದ ಅವ ಯವಗಳ ಸಂಧಾನವನ್ನು ಮಾಡತಕ್ಕದ್ದು ಸಂಧಾನಕರಣಿಯೆಂಬುವುದು. (೩) ಘಾಯಗಳಾದ ಸ್ಥಾನದಲ್ಲಿ ವಿಪರೀತವರ್ಣಗಳಾದವುಗಳನ್ನು ಸಮಾನವರ್ಣವುಳ್ಳವುಗಳನ್ನಾಗಿ ಮಾಡತಕ್ಕ ಸವರ್ಣ ಕರಣಿಎಂಬುವುದು. (೪) ಶತ್ರುಗಳಿಂದ ಬಿಡಲ್ಪಟ್ಟ ಬಾಣವು ಮೈಯಲ್ಲಿ ಇದ್ದರೆ ಅವುಗಳನ್ನು ತೆಗೆಯತಕ್ಕದ್ದು ವಿಶಲ್ಯಕರಣಿ ಎನ್ನಿಸುತ್ತದೆ ॥೧೫೩॥

**ಮೂ ॥ ಇತ್ಯುಕ್ತಃ ಸ ಕ್ಷಣೇನೈವ ಪ್ರಾಪತದ್ಗಂಧಮಾದನಂ ॥**
**ಅವಾಪ ಚಾಂಬರಚರೋಃ ರಾಮಮುಕ್ತಃ ಶರೋ ಯಥಾ ॥೧೫೪॥**

ಅ ॥ ಈ ಪ್ರಕಾರವಾಗಿ ಹೇಳಿಸಿಕೊಳ್ಳಲ್ಪಟ್ಟ ಹನುಮಂತನು ಒಂದು ಕ್ಷಣದೊಳಗೆ, ರಾಮನಿಂದ ಬಿಡಲ್ಪಟ್ಟ ಬಾಣವು ಹೇಗೆ ವೇಗದಿಂದ ಆಕಾಶದಲ್ಲಿ ಹೋಗುತ್ತದೋ, ಹಾಗೆ ಯುದ್ಧ ಮಂಡಲದ್ದೆಶೆಯಿಂದ ಆಕಾಶ ಮಾರ್ಗದಲ್ಲಿ ಸಂಚರಿಸತಕ್ಕವನಾಗಿ ಆ ಗಂಧಮಾದನ ಪರ್ವತ ವನ್ನು ಹೊಂದಿದನು ॥೧೫೪॥

**ಮೂ ॥ ಅಂತರ್ಹಿತಾಸ್ತ್ವೌಷಧೀಸ್ತು ತದಾ ವಿಜ್ಞಾಯ ಮಾರುತಿಃ ॥**
**ಉದ್ಬಬರ್ಹ ಗಿರಿಂ ಕ್ರೋಧಾಚ್ಛತಯೋಜನಮಂಡಲಂ ॥೧೫೫॥**

ಅ ॥ ಆವಾಗ ಹನುಮಂತನು ಅಡಗಿಹೋದ ಔಷಧಿಗಳನ್ನು ತಿಳಿದು (ಔಷಧಿಗಳು ಸಿಕ್ಕ ದಿರಲು) ಸಿಟ್ಟಿನಿಂದ ನೂರುಯೋಜನ ವಿಸ್ತೀರ್ಣವಾದ ಆ ಪರ್ವತವನ್ನು ಕೀಳಿದನು ॥೧೫೫॥

**ಮೂ ॥ ಸ ತಂ ಸಮುತ್ಪಾಟ್ಯ ಗಿರಿಂ ಕರೇಣ**
**ಪ್ರತೋಲಯಿತ್ವಾ ಬಲದೇವಸೂನುಃ ॥**
**ಸಮುತ್ಪಪಾತಾಂಬರಮುಗ್ರವೇಗೋ**
**ಯಥಾ ಹರಿಶ್ಚಕ್ರಧರಸ್ತ್ರಿವಿಕ್ರಮೇ ॥೧೫೬॥**

ಅ ॥ ಬಲಾಭಿಮಾನಿಯಾದ ವಾಯುದೇವರ ಪುತ್ರನಾದ ಹನುಮಂತನು ಆ ಗಂಧಮಾ ದನ ಪರ್ವತವನ್ನು ಕೈಯಿಂದ ಕೀಳಿ ಹಂದಾಡಿಸಿಕೊಂಡು (ಅಂದರೆ, ಈ ಪರ್ವತವು ಎಷ್ಟು ಭಾರ ವಿದೆಯೆಂದು ಕೈಯಲ್ಲಿ ಸ್ಥಾಪಿಸಿ ಚೆನ್ನಾಗಿ ತುಲನಾ ಮಾಡಿಕೊಂಡು ಅಂದರೆ, ಕೈಯಲ್ಲಿರತಕ್ಕ ಚೆಂಡಿನಂತೆ ಮತ್ತೂ ಮತ್ತು ಹಂದಾಡಿಸಿಕೊಂಡು) ಕ್ರೂರವಾದ ವೇಗವುಳ್ಳವನಾಗಿ ತ್ರಿವಿಕ್ರಮಾ ವತಾರದಲ್ಲಿ ಚಕ್ರಧಾರಿಯಾದ ಶ್ರೀ ಕೃಷ್ಣನಂತೆ ಆಕಾಶವನ್ನು ಹಾರಿದನು.

**ವಿಶೇಷಾರ್ಥ—** ಹೇಗೆ ತ್ರಿವಿಕ್ರಮನು ಮೂರು ಪಾದ ವಿಕ್ಷೇಪಗಳಿಂದ ಮೂರು ಲೋಕ ಗಳನ್ನು ಕ್ಷಣದಿಂದ ಆಕ್ರಮಿಸಿದನೋ, ಹಾಗೆಯೇ ಹನುಮಂತನೂ ಕೂಡ ಮೇರುಪರ್ವತ, ಲಂಕಾಪಟ್ಟಣ ಇವುಗಳ ಮಧ್ಯದಲ್ಲಿ ಐವತ್ತು ಸಹಸ್ರ (೫೦,೦೦೦) ಯೋಜನೆಗಳನ್ನು ಕ್ರೀಡ ಯಿಂದಲೇ ಅತಿಕ್ರಮಿಸಿದನು ಎಂದು ಸೂಚಿಸುವುದಕ್ಕಾಗಿ ತ್ರಿವಿಕ್ರಮಾವತಾರಪರ್ಯಂತವಾದಿ ಧಾವನಮಾಡಿದ್ದು ॥೧೫೬॥

ಮೂ ॥ ಅನಾಪ ಚಾಕ್ಷ್ಣೇಃ ಸ ನಿಮೇಷಮಾತ್ರತೋ
ನಿಪಾತಿತಾ ಯತ್ರ ಕಪಿಪ್ರವೀರಾಃ ॥
ತಚ್ಛೈಲವಾತಸ್ಪರ್ಶಾತ್ಸಮುತ್ಥಿತಾಃ
ಸಮಸ್ತಶೋ ವಾನರಯೂಥಪಾಃ ಕ್ಷಣಾತ್ ॥೧೫೭॥

ಅ ॥ ಆ ಹನುಮಂತನು ರೆಪ್ಪೆಗಳ ನಿಮೇಷ ವಚ್ಚುವ ಕಾಲಮಾತ್ರದ್ದೆಶೆಯಿಂದ ಎಲ್ಲಿ ಕಪಿಶ್ರೇಷ್ಠರು ಬಿದ್ದಿದ್ದಾರೋ (ಆ ಪ್ರದೇಶವನ್ನು) ಹೊಂದಿದನು. ಕಪಿಗಳ ಸಮೂಹವನ್ನು ರಕ್ಷಿಸತಕ್ಕ ಕಪಿಶ್ರೇಷ್ಠರು ಎಲ್ಲಾ ಆ ಗಂಧಮಾದನ ಪರ್ವತದ ಗಾಳಿಯ ಸ್ಪರ್ಶದಿಂದ ಒಂದು ಕ್ಷಣದೊಳಗೆ ಎದ್ದು ನಿಂತರು ॥೧೫೭॥

ಮೂ ॥ ಅಪೂಜಯನ್ಮಾರುತಿಮುಗ್ರಪೌರುಷಂ
ರಘೂತ್ತಮ(ಮೋ)ಸ್ಯಾನುಜನಿಸ್ತಥಾ ಪರೈಃ ॥
ಪಪಾತ ಮೂರ್ಧ್ನ್ಯಸ್ಯ ಚ ಪುಷ್ಪಸಂತತಿಃ
ಪ್ರಮೋದಿತೈರ್ದೇವವರೈರ್ವಿಸರ್ಜಿತಾ ॥೧೫೮॥

ಅ ॥ ರಾಮನ ತಮ್ಮನಾದ ಲಕ್ಷ್ಮಣನೂ, ಹಾಗೆ ಇತರರಿಂದ ಕಪಿಗಳೂ (ಕೂಡಿ) ಕ್ರೂರವಾದ ಪೌರುಷವುಳ್ಳ ಹನುಮಂತನನ್ನು ಪೂಜಿಸಿದರು. ಈ ಹನುಮಂತನ ಶಿರಸ್ಸಿನಲ್ಲಿ, ಸಂತೋಷದಿಂದ ಕೂಡಿದ ದೇವಶ್ರೇಷ್ಠರಿಂದ ಬಿಡಲ್ಪಟ್ಟ ಪುಷ್ಪವೃಷ್ಟಿಯು ಬಿತ್ತು ॥೧೫೮॥

ಮೂ ॥ ಸ ದೇವಗಂಧರ್ವಮಹರ್ಷಿಸತ್ತಮೈ-
ರಭಿಷ್ಟುತೋ ರಾಮಕರೋಪಗೂಹಿತಃ ॥
ಪುನರ್ಗಿರಿಂ ತಂ ಶತಯೋಜನೋಚ್ಛ್ರಿತಂ
ನ್ಯಪಾತಯತ್ಸಂಸ್ಥಿತ ಏವ ತತ್ರ (ಚ) ॥೧೫೯॥

ಅ ॥ ಆ ಹನುಮಂತನು ದೇವತೆಗಳೂ, ಗಂಧರ್ವರೂ, ಋಷಿಶ್ರೇಷ್ಠರೂ ಇವರುಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟನು. ಮತ್ತು ರಾಮನ ಕೈಗಳಿಂದ ಆಚ್ಛಾದಿತನಾದ (ಅಂದರೆ ಆಲಿಂಗಿತನಾದ) ಹನುಮಂತನು ಆ ಲಂಕಾಪಟ್ಟಣದಲ್ಲಿಯೇ ಇದ್ದವನಾಗಿ ಮೂರು ಯೋಜನ ಪರಿಮಿತವಾದ ಆ ಪರ್ವತವನ್ನು ಬಿಸಾಡಿದನು ॥೧೫೯॥

ಮೂ ॥ ಸ ಪೂರ್ವವನ್ಮಾರುತಿವೇಗಚೋದಿತೋ
ನಿರಂತರಂ ಶ್ಲಿಷ್ಟತರೋಽತ್ರ ಚಾಭವತ್ ॥
ಪುನಶ್ಚ ಸರ್ವೇ ತರುಶೈಲಹಸ್ತಾ
ರಣಾಯ ಜೋತ್ತಸ್ಥುರಲಂ ನದಂತಃ ॥೧೬೦॥

ಅ ॥ ಆ ಪರ್ವತವು ಮೊದಲಿನಂತೆ ಅತ್ಯಂತವಾಗಿ ಹನುಮಂತನ ಉಗ್ರವೇಗದಿಂದ ಪ್ರೇರಿತವಾದದ್ದಾಗಿ ಮೊದಲಿನಂತೆ ಅತ್ಯಂತ ಸಂಬಂಧವುಳ್ಳದ್ದಾಯಿತು. (ಮೊದಲಿದ್ದ ಸ್ಥಾನದಲ್ಲಿ ಮೊದಲಿನ ಹಾಗೆ ಬಿತ್ತು) ಆ ಮೇಲೆ ವೃಕ್ಷಗಳೂ, ಪರ್ವತಗಳೂ ಇವುಗಳೇ ಕೈಯಲ್ಲಿ ಉಳ್ಳ ಎಲ್ಲಾ ಕಪಿಗಳೂ ಚೆನ್ನಾಗಿ ಕುಣಿಯುತ್ತಾ ಯುದ್ಧಕ್ಕೆ ಸನ್ನದ್ಧರಾಗಿ ನಿಂತರು ॥೧೬೦॥

ಮೂ ॥ ತಾನ್ಪ್ರೇಕ್ಷ್ಯ ಸಮುತ್ಥಿತಾನ್ಕಪೀ-
ನ್ಭಯಂ ಮಹಚ್ಛಕ್ರಜಿತಂ ವಿವೇಶ ॥
ಸ ಪೂರ್ವವದ್ಧವ್ಯವಹೇ ಸಮರ್ಚ್ಯ
ಶಿವಂ ತಥಾದರ್ಶನಮೇವ ಜಗ್ಮಿವಾನ್ ೧೬೧॥

ಅ ॥ ತಿರುಗಿ ಎದ್ದು ಯುದ್ಧಕ್ಕಾಗಿ ನಿಂತ ಆ ಕಪಿಗಳನ್ನು ನೋಡಿ ಮಹತ್ತಾದ ಭಯವು ಇಂದ್ರಜಿತುವನ್ನು ಪ್ರವೇಶಿಸಿತು. ಆ ಇಂದ್ರಜಿತುವು ಮೊದಲಿನಂತೆ ಅಗ್ನಿಯಲ್ಲಿ ರುದ್ರನನ್ನು ಪೂಜಿಸಿ ಇನ್ನೊಬ್ಬರ ಕಣ್ಣಿಗೆ ಕಾಣದ ಹಾಗೆ (ಯುದ್ಧಕ್ಕಾಗಿ) ಹೊರಟುಹೋದನು ॥ ॥೧೬೧॥

ಮೂ ॥ ವರಾಶ್ರಯೇಣಾಜಗಿರೀಶಯೋಃ ಪುನಃ
ಸಮ್ಮೋಹನಾ(ತಥಾ ಮಹಾ) ಸ್ತ್ರೈಃ ಸ ಬಬಂಧ ತಾನ್ಕಪೀನ್ ॥
ಅಥಾಹ ರಾಮಸ್ಯ ಮನೋಽನುಸಾರತಃ
ಪುರಾಸ್ತ್ರಮೇವಾನುಸರನ್ಸ ಲಕ್ಷ್ಮಣಃ ॥೧೬೨॥

ಅ ॥ ಬ್ರಹ್ಮ ಮತ್ತು ರುದ್ರದೇವರ ವರಬಲದಿಂದ ಮತ್ತೊಂದಾವರ್ತಿ ಇಂದ್ರಜಿತುವು ಮೋಹನಾಸ್ತ್ರಗಳಿಂದ ಆ ಕಪಿಗಳನ್ನು ಕಟ್ಟಿಹಾಕಿದನು. ಕಪಿಬಂಧನಾನಂತರದಲ್ಲಿ ಈ ಯುದ್ಧಕ್ಕಿಂತ ಮೊದಲು ರಾಮನ ಮನೋನುಸಾರದಿಂದಲೇ ಅಸ್ತ್ರವನ್ನು ಅಥವಾ ಅತಿಕಾಯನಲ್ಲಿ ಮೊದಲು ಪ್ರಯುಕ್ತವಾದ ಅಸ್ತ್ರವು ಪುರಾಸ್ತ್ರವು; ಅಂದರೆ ಆ ಬ್ರಹ್ಮಾಸ್ತ್ರವನ್ನೇ ಅನುಸರಿಸಿದವನಾಗಿ (ಅಂದರೆ ಅಸ್ತ್ರದಿಂದ ಬದ್ಧರಾದವರಂತೆ ಇದ್ದುಕೊಂಡು) ಆ ಲಕ್ಷ್ಮಣನು (ರಾಮನನ್ನು ಕುರಿತು ಹೇಳಿದನು.

**ವಿಶೇಷಾಂಶ—** ಸ ಬಬಂಧ ತಾನ್ ಕಪೀನ್ ಎಂದು ಹೇಳಿದರಿಂದ ಲಕ್ಷ್ಮಣನಲ್ಲಿ ಬಂಧವಿಲ್ಲವೆಂದು ಸೂಚಿತವಾಯಿತು. ಆದುದರಿಂದಲೇ 'ಅಥಾಹ ರಾಮಸ್ಯ ಮನೋನುಸಾರತಃ' ಎನ್ನುವ ಲಕ್ಷ್ಮಣನ ವಚನವೂ ಅಯುಕ್ತವಲ್ಲ ॥೧೬೨॥

ಮೂ ॥ ಪಿತಾಮಹಾಸ್ತ್ರೇಣ ನಿಹನ್ಮಿ ದುರ್ಮತಿಂ
ತವಾಜ್ಞಯಾ ಶಕ್ರಜಿತಂ ಸಬಾಂಧವಂ ॥
ಇತೀರಿತಸ್ತೇನ ಸ ಚಾಹ ರಾಘವೋ
ಭಯಾದದೃಶ್ಯೇ ನ ವಿಮೋಕ್ತುಮರ್ಹಸಿ ॥೧೬೩॥

ಅ ॥ ನಿನ್ನ ಅಪ್ಪಣೆಯಿಂದ ಬಾಂಧವರಿಂದ ಕೂಡಿರತಕ್ಕ ದುರ್ಮತಿಯಾದ ಇಂದ್ರಜಿತುವನ್ನು ಬ್ರಹ್ಮಾಸ್ತ್ರದಿಂದ ಕೊಲ್ಲುತ್ತೇನೆ ಈ ಪ್ರಕಾರವಾಗಿ ಲಕ್ಷ್ಮಣನಿಂದ ಹೇಳಿಸಿಕೊಳ್ಳಲ್ಪಟ್ಟ ಆ ರಘುಕುಲೋತ್ಪನ್ನನಾದ ಶ್ರೀರಾಮನು ಭಯದಿಂದ ಅಡಗಿಕೊಂಡಿರತಕ್ಕವನಲ್ಲಿ ಅಸ್ತ್ರವನ್ನು ಬಿಡಲಿಕ್ಕೆ ಯೋಗ್ಯನಾಗುವುದಿಲ್ಲ. (ಅಂದರೆ ಅದೃಶ್ಯನಲ್ಲಿ ಅಸ್ತ್ರಪ್ರಯೋಗವು ಯೋಗ್ಯವಲ್ಲ. ಪ್ರಯೋಗಿಸಿದರೆ ದೋಷವಿರುವ ಪ್ರಯುಕ್ತ ನೀನು ಬಾಣವನ್ನು ಪ್ರಯೋಗಿಸಬೇಡ) ॥೧೬೩॥

ಮೂ ॥ ನ ಸೋಢಮಿಶೋಽಸಿ ಯದಿ ತ್ವಮೇತ-
ದಸ್ತ್ರಂ ತದಾಹಂ ಶರಮಾತ್ರಕೇಣ।
ಅದೃಶ್ಯಮಪ್ಯಾಶು ನಿಹನ್ಮಿ ಸಂತಂ
ರಸಾತಲೇಽಥಾಪಿ ಹಿ ಸತ್ಯಲೋಕೇ।೧೬೪॥

ನೀನು ಇಂದ್ರಜಿತುವಿನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರವನ್ನು (ಅಂದರೆ ಓ ಅಸ್ತ್ರವನ್ನು ಮತ್ತೂ ಮತ್ತೂ ಪ್ರಯೋಗಿಸುತ್ತಾನೆ. ಅದನ್ನು) ಸಹಿಸಲಿಕ್ಕೆ ಸಮರ್ಥನಾಗದೆ ಇದ್ದ ಪಕ್ಷದಲ್ಲಿ ನಾನು ಕೇವಲ ಸಾಧಾರಣವಾದ (ಮಾತ್ರ ಪ್ರಯೋಗ ರಹಿತವಾದ) ಬಾಣದಿಂದಲೇ ಅಡಗಿಕೊಂಡಿರತಕ್ಕವನನ್ನು ಹಾಗೆಯೇ (ಭೂಮಿಯ ಅಧೋಭಾಗದಲ್ಲಿರತಕ್ಕ) ರಸಾತಳ ಲೋಕದಲ್ಲಿರತಕ್ಕವನನ್ನೂ, ಹಾಗೆಯೇ ಬ್ರಹ್ಮಲೋಕದಲ್ಲಿರತಕ್ಕವನನ್ನೂ ಕೂಡ ಬೇಗನೇ (ನಾಶ ಮಾಡುತ್ತೇನೆ). ಪ್ರಸಿದ್ಧವು.

**ವಿಶೇಷಾಂಶ** — (1) ತಾಲವೃಕ್ಷಗಳನ್ನು ಖಂಡಿಸಲಿಕ್ಕೆ ಪ್ರಯುಕ್ತವಾದ ಒಂದು ಬಾಣ ದಿಂದಲೇ ಪರ್ವತವನ್ನೂ, ಭೂಮಿಯನ್ನೂ, ಏಳು ತಾಲವೃಕ್ಷಗಳನ್ನೂ ಪಾತಾಳವನ್ನೂ ಭೇದಿಸಿ ಅಲ್ಲಿರತಕ್ಕ ಕುಮುದಿನಾಮಕರಾದ ದೈತ್ಯರ ಸಂಹಾರಪ್ರಸಿದ್ಧಿಯನ್ನು ಸ್ಮರಿಸಿಕೊಡ ತ್ತಾರೆ. (2) 'ಆತ್ಮನಿಚೈವಂವಿಚಿತ್ರಾಶ್ಚಹಿ' ಎನ್ನುವ ಸೂತ್ರಪ್ರಸಿದ್ಧಿಯನ್ನು ಸೂಚಿಸಿದರು॥೧೬೪॥

ರಾಮನು ಇಷ್ಟು ಸಮರ್ಥನಾದ ಪಕ್ಷದಲ್ಲಿ ಮೊದಲೇ ಆ ಇಂದ್ರಜಿತುವನ್ನು ಏತಕ್ಕಾಗಿ ನಿವಾರಿಸಲಿಲ್ಲ? ಎಂದರೆ—

ಮೂ ॥ ಇತೀಸ್ಸ್ವ ವೀಂದ್ರಸ್ಯ ಹನೂಮತಶ್ಚ
ಬಲಪ್ರಕಾಶಾಯ ಪುರಾ ಪ್ರಭುಃ ಸ್ವಯಂ ॥
ಸಮ್ಮಾನಯಿತ್ವಾಸ್ತ್ರಮಮುಷ್ಯ ರಾಮೋ
ದುರಂತಶಕ್ತಿಃ ಶರಮಾದದೇಽಥ ॥೧೬೫॥

ಅ ॥ ಪೂರ್ವೋಕ್ತಪ್ರಕಾರವಾಗಿ ಅಪರಿಮಿತವಾದ ಸಾಮರ್ಥ್ಯವುಳ್ಳ ಸರ್ವಸಮರ್ಥ ನಾದ ಶ್ರೀ ರಾಮನು ತಾನಾಗಿಯೇ ಗರುಡನ ಮತ್ತು ಹನುಮಂತನ ಬಲವನ್ನು ಪ್ರಕಟೀಕರಿಸು ವುದಕ್ಕೋಸ್ಕರ ಈ ಇಂದ್ರಜಿತುವಿನ ಅಸ್ತ್ರವನ್ನು ಸನ್ಮಾನಿಸಿ ಆ ವೇಳೆ ಬಾಣವನ್ನು ತೆಗೆದು ಕೊಂಡನು. ॥೧೬೫॥

ಮೂ ॥ ಅನೇನ ದೃಷ್ಟೋಽಹಮಿತಿಸ್ಮ ದುಷ್ಟೋ
ವಿಜ್ಞಾಯ ಬಾಹ್ವೋರ್ಬಲಮಸ್ಯ ಚೋಗ್ರಂ॥
ವಿನಿಶ್ಚಯಂ ದೇವತಮಸ್ಯ ಪಶ್ಯ-
ನ್ಮೃದುದ್ರುವೇ ಪ್ರಾಣಪರೀಪ್ಸುರಾಶು ॥೧೬೬॥

ಅ ॥ ನಾನು ಈ ರಾಮನಿಂದ ಕಾಣಿಸಿಕೊಳ್ಳಲ್ಪಟ್ಟೆನೆಂದು ತಿಳಿದು ದುಷ್ಟನಾದ ಇಂದ್ರಜಿ ತುವು ದೇವಶ್ರೇಷ್ಠನಾದ ಈ ರಾಮನ ಕ್ರೂರವಾದ ಬಾಹುಗಳ ಬಲವನ್ನು ಅರಿತು ತನ್ನನ್ನು ಈತನು ಸಂಹರಿಸುತ್ತಾನೆ ಎಂಬ ನಿಶ್ಚಯಿಸಿಕೊಂಡವನಾಗಿ, ತಿಳಿದವನಾಗಿ ತನ್ನ ಪ್ರಾಣವನ್ನು ರಕ್ಷಿಸಲಿಕ್ಕೆ ಇಚ್ಛಿಸಿದವನಾಗಿ ಶೀಘ್ರದಲ್ಲಿ ಓಡಿಹೋದನು ॥೧೬೬॥

ಮೂ ॥ ಹಾಹಾಕೃತೇ ಪ್ರದ್ರುತ ಇಂದ್ರಶತ್ರೌ
ರಘೂತ್ತಮಃ ಶತ್ರುವಿಭೀಷಣತ್ವಾತ್ ॥
ವಿಭೀಷಣೇತ್ಯೇವ ಸುರೈರಭಿಷ್ಟುತೋ
ವಿಜ್ಞಾನಮಸ್ತ್ರಂ ತ್ವಸೃಜತ್ಸ್ವಸೈನ್ಯೇ ॥೧೬೭॥

ಅ ॥ ಇಂದ್ರನೇ ಶತ್ರುವಾಗಿವುಳ್ಳ ಇಂದ್ರಜಿತುವು ಓಡಿಹೋಗುತ್ತಿರಲು, (ಇಂದ್ರಜಿತುವಿನ ಅನುಯಾಯಿಗಳಿಂದ ಅತಿಕಷ್ಟವಾಯಿತೆಂದು) ಕಲಕಲಶಬ್ದವು ಮಾಡಲ್ಪಡುತ್ತಿರಲು ಅಥವಾ ಓಡಿದ್ದನ್ನು ನೋಡಿ ನೆಗಾಡತಕ್ಕ ದೇವತೆಗಳಿಂದ ಮಾಡಲ್ಪಟ್ಟ ಹಾಹಾಕಾರ ವಿಷಯದಲ್ಲಿ ರಾಮ ಚಂದ್ರದೇವರು ಶತ್ರುಗಳಿಗೆ ವಿಶೇಷಾಕಾರವಾಗಿ ಭಯಜನಕರಾದ ಪ್ರಯುಕ್ತ ವಿಭೀಷಣ ಎಂತೆಂದೇ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವರಾಗಿ ತನ್ನ ಸೈನ್ಯದಲ್ಲಿ ವಿಜ್ಞಾನಾಖ್ಯವಾದ ಅಸ್ತ್ರವನ್ನು ಬಟ್ಟರು.

ವಿಶೇಷಾಂಶ= (1) ಮೂಲರಾಮಾಯಣದಲ್ಲಿ ವಿಭೀಷಣ ಎಂತೆಂದು ರಾಮನನ್ನು ಸಂಬೋಧಿಸಿ ಸ್ತೋತ್ರವು ಮಾಡಲ್ಪಟ್ಟಿತು ಎಂದು ಕಥೆಯಿದೆ. ಅದರ ತಾತ್ಪರ್ಯವನ್ನು ಹೇಳುವುದಕ್ಕಾಗಿ 'ಶತ್ರುವಿಭೀಷಣತ್ವಾತ್' ವಿಭೀಷಣ ಎಂದು ದೇವತೆಗಳು ಸ್ತೋತ್ರಮಾಡಿದರು ಎಂದು ಹೇಳಿದ್ದು. (2) ಓಡಿದ ಮೇಲೆ ಬಾಣವನ್ನು ಬಿಡುವುದು ಅಧರ್ಮವಾದ ಪ್ರಯುಕ್ತವೂ, ರಾವಣನ ಬಾಣವು ಅಮೋಘವಾದ ಪ್ರಯುಕ್ತವೂ ಇಂದ್ರಜಿತುವಿಗೆ ಸನ್ನದ್ಧವಾದ ಬಾಣವನ್ನೇ ವಿಜ್ಞಾನಾಸ್ತ್ರದಿಂದ ಅಭಿಮಂತ್ರಿಸಿ ಆ ಬಾಣದಿಂದಲೇ ಕಪಿಗಳಿಗೆ ಅಂಗಚ್ಛೇದವು ಹೇಗೆ ಆಗಲಾರದೋ, ಸರ್ಪಬಂಧಚ್ಛೇದಮಾತ್ರವೂ ಕೂಡ ಹೇಗೆ ಆಗುತ್ತದೋ ಹಾಗೆಯೇ ಹಸ್ತಲಾಘವ ವಿಶೇಷದಿಂದ ತನ್ನ ಸೈನ್ಯದಲ್ಲಿ ಬಿಡುವವನಾದನು.॥೧೬೭॥

ಮೂ ॥ ನಿಶಾಚರಾಸ್ತ್ರಂ ಹ್ಯಗಮತ್ ಕ್ಷಣೇನ
ರಾಮಾಸ್ತ್ರವೀರ್ಯಾದ್ಧರಯೋ ನದಂತಃ ॥
ಉತ್ತಸ್ಥುರುಚ್ಚೋರುಗಿರೀನ್ಪ್ರಗೃಹ್ಯ
ಪ್ರಶಂಸಮಾನಾ ರಘುವೀರಮುಚ್ಚೈಃ ॥೧೬೮॥

ಅ ॥ ರಾಮಚಂದ್ರ ದೇವರ ಅಸ್ತ್ರದ ಸಾಮರ್ಥ್ಯದಿಂದ ಇಂದ್ರಜಿತುವಿನ ಅಸ್ತ್ರವು ಕ್ಷಣ ಮಾತ್ರದಲ್ಲಿ ನಷ್ಟವಾಗಿ ಹೋಯಿತು. ಆದರ ಮೇಲೆ ಕಪಿಗಳು ಕುಣಿಯುತಕ್ಕವರಾಗಿ ದೊಡ್ಡದಾದ ಮತ್ತು ಉನ್ನತಗಳಾದ ಪರ್ವತಗಳನ್ನು ಹಿಡಿದುಕೊಂಡು ರಘುಕುಲಶ್ರೇಷ್ಠರಾದ ರಾಮಚಂದ್ರದೇವರನ್ನು ಚೆನ್ನಾಗಿ ಹೊಗಳತಕ್ಕವರಾಗಿ ಎದ್ದರು. ೧೬೮॥

ಮೂ ॥ ಸುರೈಶ್ಚ ಪುಷ್ಪಂ ವವೃಷ(ಚ ವರ್ಷ)ದ್ಭಿರೀಡಿತ-
ಸ್ತಸ್ಥೌ ಧನುಷ್ಪಾಣಿರನಂತವೀರ್ಯಃ ॥
ಸ ರಾವಣಸ್ಯಾಥ ಸುತೋ ನಿಕುಂಭಿಲಾಂ
ಪುನಃ ಸಮಾಸಾದ್ಯ ಜುಹಾವ ಪಾವಕಂ ॥೧೬೯॥

ಅ ॥ ಪುಷ್ಪವನ್ನು ವರ್ಷಿಸತಕ್ಕ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಅಪರಿಮಿತವಾದ ಸಾಮರ್ಥ್ಯವುಳ್ಳ ರಾಮಚಂದ್ರದೇವರು ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡವರಾಗಿ

ಎದ್ದು ನಿಂತರು. ಆ ಮೇಲೆ ಪ್ರಸಿದ್ಧನಾದ ರಾವಣನ ಮಗನಾದ ಇಂದ್ರಜಿತುವು ತನ್ನ ಹೋಮ ಕ್ಕಾಗಿ ಮಾಡಲ್ಪಟ್ಟ ಗಿರಿಗುಹೆಯನ್ನು ಹೊಂದಿ ಅಗ್ನಿಯನ್ನು ಹೋಮಿಸಿದನು. ॥೧೭೯॥

ಮೂ ॥ ವಿಭೀಷಣೋಽಥಾಹ ರಘೂತ್ತಮಂ ಪ್ರಭುಂ
ನಿಯೋಜಯಾದ್ಯೈವ ವಧಾಯ ದುರ್ಮತೇಃ ॥
ಕೃತಾಗ್ನಿಪೂಜೋ ನ ಹಿ ವಧ್ಯ ಏಷ
ವರೋ ವಿಧಾತುಃ ಪ್ರಥಿತೋಽಸ್ಯ ತಾದೃಶಃ ॥೧೭೦॥

ಅ ॥ ಅನಂತರದಲ್ಲಿ ವಿಭೀಷಣನು ಸರ್ವಸಮರ್ಥರಾದ ರಾಮಚಂದ್ರದೇವರನ್ನು ಹೇಳಿದನು. ಈಗಲೇ ದುಷ್ಟಬುದ್ಧಿಯುಳ್ಳ ಇಂದ್ರಜಿತುವಿನ ಸಂಹಾರಕ್ಕೋಸ್ಕರ ಅಪ್ಪಣೆಕೊಡು. ಮಾಡಲ್ಪಟ್ಟ ಅಗ್ನಿಪೂಜೆವುಳ್ಳ ಈ ಇಂದ್ರಜಿತುವು ಕೊಲ್ಲಲಿಕ್ಕೆಶಕ್ಯನೇ ಅಲ್ಲ. ಯಾಕೆಂದರೆ ಇವನಿಗೆ ಅಂಥ ಅಂದರೆ ನಾಲ್ಕಾವರ್ತಿ ಅಗ್ನಿಪೂಜೆಯನ್ನು ಮಾಡಿದರೆ ಅವಧ್ಯನಾಗು ಎನ್ನುವ ಪ್ರಕಾರವಾದ ಬ್ರಹ್ಮನ ವರವು ಪ್ರಖ್ಯಾತವಾಗಿದೆ.

ವಿಶೇಷಾಂಶ— ಯದ್ಯಪಿ ನಾಲ್ಕನೇಹೋಮವು ಮುಗಿದಮೇಲೆಯೂ ಬ್ರಹ್ಮನ ವರವನ್ನು ಉಲ್ಲಂಘಿಸಿ ರಾಮನಿಗೆ ಸಂಹರಿಸಲು ಶಕ್ತಿಯಿದೆ. ಆದಾಗ್ಯೂ ಬಲವಿಲ್ಲದೆ ಹೆದರಿಕೆಯಿಂದ ಓಡಿಹೋದವನನ್ನು ಸಂಹರಿಸುವುದು ವೀರಾಗ್ರೇಸರನಾದ ರಾಮನಿಗೆ ಯೋಗ್ಯವಲ್ಲ. 'ರಾಮಸ್ತು ಲಕ್ಷ್ಮಣೇನಾನುಸಾರತಃ' ಎನ್ನುವ ವಚನದಿಂದ ಲಕ್ಷ್ಮಣನಿಂದಲೇ ಸಂಹರಿಸಿಕೊಳ್ಳಲ್ಪಡಲಿಕ್ಕೆಯೋಗ್ಯನು. ಇದಕಾರಣ ರಾಮನ ಸಂಕಲ್ಪದಿಂದಲೇ ಹನುಮಂತನಿಂದಲೂ ಸಂಹರಿಸಿಕೊಳ್ಳಲ್ಪಡಲಿಕ್ಕೆ ಯೋಗ್ಯನಲ್ಲ ॥೧೭೦॥

ಮೂ ॥ ನ ವೈ ವಧಂ ರಾಮ ಇಯೇಷ ತಸ್ಯ
ಪಲಾಯಿತಸ್ಯಾತ್ಮಸಮೀಕ್ಷಣಾತ್ಪುನಃ
ಸಶಕ್ತ್ಯೋಜ್ಝಿತೋಽಸಾವತಿ(ಪಿ) ಕೂಟಯೋಧೀ
ನ ಮೇ ವಧಾರ್ಹೋಽಯಮಿತಿ ಸ್ಮ ಸ ಪ್ರಭುಃ ॥೧೭೧॥

ಅ ॥ ತನ್ನನ್ನು ನೋಡೋಣದರಿಂದ ಓಡಿದ ಆ ಇಂದ್ರಜಿತುವಿನ ಸಂಹಾರವನ್ನು ಮಾಡಲು ನಿಶ್ಚಯವಾಗಿಯೂ ಆತನು ಓಡಿಹೋದ ಮೇಲೆ ರಾಮನು ಇಚ್ಛಿಸಲಿಲ್ಲ. ಆ ಇಂದ್ರಜಿತುವು ಬಲರಹಿತನು ಮತ್ತು ಕಪಟದಿಂದ ಯುದ್ಧಮಾಡತಕ್ಕವನು. ಆದ್ದರಿಂದ ಸಂಹಾರಾರ್ಹನಲ್ಲ. ಈ ಅಭಿಪ್ರಾಯದಿಂದಲೂ ಕೂಡ ಅವನ ಸಂಹಾರವನ್ನು ಇಚ್ಛಿಸಲಿಲ್ಲ. ॥೧೭೧॥

ಮೂ ॥ ಸ ಆದಿದೇಶಾವರಜಂ ಜನಾರ್ದನೋ
ಹನೂಮತಾ ಚೈವ ವಿಭೀಷಣೇನ ॥
ಸಹೈವ ಸರ್ವೈರಪಿ ವಾನರೇಂದ್ರೈ-
ರ್ಜಯೀ ಮಹಾತ್ಮಾ ಸ ಚ ತದ್ವಧಾಯ ॥೧೭೨॥

ಅ ॥ ದುಷ್ಟಜನರನ್ನು ಶಿಕ್ಷಿಸತಕ್ಕ ರಾಮಚಂದ್ರದೇವರು ತಮ್ಮನಾದ ಲಕ್ಷ್ಮಣನನ್ನು (ಇಂದ್ರಜಿತುವಿನ ಸಂಹಾರಕ್ಕೋಸ್ಕರ) ಅಪ್ಪಣೆಕೊಟ್ಟರು. ಮಹಾನುಭಾವನಾದ ಲಕ್ಷ್ಮಣನಾದರೂ

ಹನುಮಂತನಿಂದಲೂ, ವಿಭೀಷಣನಿಂದಲೂ ಸಮಸ್ತರಾದ ಕಪಿಶ್ರೇಷ್ಠರುಗಳಿಂದಲೂ ಕೂಡಿ ಕೊಂಡೇ ಆ ಇಂದ್ರಜಿತುವಿನ ಸಂಹಾರಕ್ಕೋಸ್ಕರ ಹೊರಟು ಹೋದನು.

ವಿಶೇಷಾಂಶ— ಲಕ್ಷ್ಮಣನಿಗೆ ಬ್ರಹ್ಮನ ವರವನ್ನು ಉಲ್ಲಂಘಿಸಲಿಕ್ಕೆ ಶಕ್ತಿಯಿಲ್ಲ. ಆದಕಾರಣ ಇಂದ್ರಜಿತುವು ನಾಲ್ಕನೇ ಹೋಮವನ್ನು ಮಾಡುವುದಕ್ಕಿಂತ ಮೊದಲೇ ರಾಮನು ಲಕ್ಷ್ಮಣನಿಗೆ ಆಜ್ಞೆಯನ್ನು ಕೊಟ್ಟನು. ॥೧೭೨॥

ಮೂ ॥ ಸ ಜುಹ್ವತಸ್ತಸ್ಯ ಚಕಾರ ವಿಘ್ನಂ
ಪ್ಲವಂಗಮೈಃ ಸೋಽಥ ಯುಯುತ್ಸಯಾ ರಥಂ ॥
ಸಮಾಸ್ಥಿತಃ ಕಾರ್ಮುಕಬಾಣಪಾಣಿಃ
ಪ್ರತ್ಯುದ್ಯಯೌ ಲಕ್ಷ್ಮಣಮಾಶು ಗರ್ಜನ್ ।೧೭೩।

ಅ ॥ ಆ ಲಕ್ಷ್ಮಣನಾದರೂ ಕಪಿಗಳಿಂದ ಕೂಡಿಕೊಂಡು ಹೋಮಿಸತಕ್ಕ ಇಂದ್ರಜಿತುವಿಗೆ ವಿಘ್ನವನ್ನು ಮಾಡಿದನು. ಆ ಮೇಲೆ ಇಂದ್ರಜಿತುವಾದರೂ ಯುದ್ಧಮಾಡುವ ಇಚ್ಛೆಯಿಂದ ರಥವನ್ನು ಏರಿದವನಾಗಿ ಲಕ್ಷ್ಮಣನನ್ನು ಎದುರಿಸಿ ಬೇಗನೇ ಘರ್ಜಿಸುತಾ ಧನಸ್ಸು ಮತ್ತು ಬಾಣವನ್ನು ಕೈಯಲ್ಲಿ ಧರಿಸಿಕೊಂಡವನಾಗಿ ಎದುರುಬಂದನು ॥೧೭೩॥

ಮೂ ॥ ಉಭೌ ಚ ತಾವಸ್ತ್ರವಿದಾಂ ವರಿಷ್ಠೌ
ಶರೈಃ ಶರೀರಾಂತಕರೈಸ್ತತಕ್ಷತುಃ ॥
ದಿಶಶ್ಚ ಸರ್ವಾಃ ಪ್ರದಿಶಃ ಶರೋತ್ತಮೈ-
ರ್ವಿಧಾಯ ಶಿಕ್ಷಾಸ್ತ್ರಬಲೈರ್ನಿರಂತರಾಃ ॥೧೭೪॥

ಅ ॥ ಅಸ್ತ್ರ ತಿಳಿದವರಲ್ಲಿ ಶ್ರೇಷ್ಠರಾದ ಆ ಇಂದ್ರಜಿತು ಮತ್ತು ಲಕ್ಷ್ಮಣ ಇವರಿಬ್ಬರು ಶಿಕ್ಷೆಯಿಂದ ಅಸ್ತ್ರಗಳಿಂದಲೂ, ಬಲಗಳಿಂದಲೂ ಸರಿಸಮಾನಾರಾಗಿ ಸಮಸ್ತಗಳಾದ ಪೂರ್ವಾದಿ ದಿಕ್ಕುಗಳನ್ನೂ ಈಶಾನ್ಯಾದಿಕೋಣ ದಿಕ್ಕುಗಳನ್ನೂ ಕೂಡ ಬಾಣಶ್ರೇಷ್ಠಗಳಿಂದ ಅವಕಾಶರಹಿತಗಳನ್ನಾಗಿ ಮಾಡಿ ಶರೀರಕ್ಕೆ ನಾಶವನ್ನು ಉಂಟುಮಾಡತಕ್ಕ ಬಾಣಗಳಿಂದ ಹೊಡಕೊಂಡರು ॥೧೭೪॥

ಮೂ ॥ ಅಸ್ತ್ರಾಣಿ ತಸ್ಯಾಸ್ತ್ರವರೈಃ ಸ ಲಕ್ಷ್ಮಣೋ
ನಿವಾರ್ಯ ಶತ್ರೋಃ ಶ್ಚಲಕುಂಡಲೋಜ್ಜ್ವಲಂ ॥
ಶಿರಃ ಶರೇಣಾಶು ಸಮಚ್ಛಿನತ್ತಾಥ
ಸುರೈಃ ಪ್ರಸೂನೈರಥ ಚಾಭಿವೃಷ್ಟಃ ।೧೭೫॥

ಅ ॥ ಆ ಲಕ್ಷ್ಮಣನು ಶತ್ರುವಾದ ಆ ಇಂದ್ರಜಿತುವಿನ ಅಸ್ತ್ರಗಳನ್ನು ತನ್ನ ಅಸ್ತ್ರಶ್ರೇಷ್ಠಗಳಿಂದ ತಡೆದು, ಹಂದಾಡತಕ್ಕ ಕುಂಡಲಗಳಿಂದ ಶೋಭಿಸತಕ್ಕ (ಇಂದ್ರಜಿತುವಿನ) ಶಿರಸ್ಸನ್ನು ಬೇಗನೆ ಬಾಣದಿಂದ ತುಂಡರಿಸಿದನು. ಅದರ ಮೇಲೆ ದೇವತೆಗಳಿಂದ ಪುಷ್ಪವೃಷ್ಟಿಮಾಡಿಸಿಕೊಳ್ಳಲ್ಪಟ್ಟನು. ॥೧೭೫॥

ಮೂ ॥ ನಿಪಾತಿತೇಽಸ್ಮಿನ್ನಿತರಾಂ ನಿಶಾಚರಾನ್
ಪ್ಲವಂಗಮಾ ಜಘ್ನುರನೇಕಕೋಟಿಶಃ ॥
ಹತಾವಶಿಷ್ಟಾಸ್ತು ದಶಾನನಾಯ
ಶಶಂಸುರತ್ಯಾಪ್ತಸುತಪ್ರಣಾಶಂ ॥೧೭೬॥

ಅ ॥ (ಲಕ್ಷ್ಮಣನಿಂದ) ಈ ಇಂದ್ರಜಿತುವು ಬೀಳಿಸಲ್ಪಡುತ್ತಿರಲು, ಕಪಿಗಳು ಅನೇಕ ಕೋಟಿ ಸಂಖ್ಯಾಕರಾದ ರಾಕ್ಷಸರುಗಳನ್ನು ಚೆನ್ನಾಗಿ ಹೊಡೆದರು. ಸಂಹರಿಸಿಕೊಳ್ಳಲ್ಪಟ್ಟುಳಿದ ರಾಕ್ಷಸರುಗಳು ಪರಮಾಪ್ತನಾದ ಮಗನ ನಾಶವನ್ನು ರಾವಣನಿಗೋಸ್ಕರ ಹೇಳಿದರು ॥೧೭೬॥

ಮೂ ॥ ಸ ತಂ ನಿಶಮ್ಯಾಪ್ರಿಯಮುಗ್ರರೂಪಂ
ಭೃಶಂ ವಿನಿಃಶ್ವಸ್ಯ ವಿಲಪ್ಯ ದುಃಖಾತ್ ॥
ಸಂಸ್ಥಾಪಯಾಮಾಸ ಮತಿಂ ಪುನಶ್ಚ
ಮರಿಷ್ಯ ಇತ್ಯೇವ ಸು(ವಿ)ನಿಶ್ಚಿತಾರ್ಥಃ ॥೧೭೭॥

ಅ ॥ ಆ ರಾವಣನಾದರೂ ಆ ಕ್ರೂರಸ್ವಭಾವವುಳ್ಳ, ಪ್ರಿಯವಲ್ಲದ ಇರತಕ್ಕಮಾತನ್ನು ಕೇಳಿ ಚೆನ್ನಾಗಿ ನಿಟ್ಟುಸುರು ಬಿಡುತ್ತಾ. (ಎಲೋ ಮಗನೇ! ಮೃತಿಯನ್ನು ಹೊಂದಿದಿಯಾ! ಎಂದು) ದುಃಖದಿಂದ ಪ್ರಲಾಪಿಸುತ್ತಾ, (ಈ ಮೊದಲೇ ಕುಂಭಕರ್ಣನ ಮರಣಾನಂತರ ನನ್ನ ಜೀವನದಲ್ಲಿ ಆಶಾರಹಿತನಾಗಿದ್ದೆನು; ಈಗಲಾದರೂ) ಮತ್ತು ನಿಶ್ಚಯವಾಗಿ ನಾನು ಮೃತಿಯನ್ನು ಹೊಂದುವೆನು ಸಹಜವು. ಎಂದು ಮನಸ್ಸಿನಲ್ಲಿ ದೃಢನಿಶ್ಚಯಿಸಿಕೊಂಡವನಾದನು ॥೧೭೭॥

ಮೂ ॥ ಮರಣಾಭಿಮುಖಃ ಶೀಘ್ರಂ ರಾವಣೋ ರಣಕರ್ಮಣಿ (ಣೇ)
ಸಜ್ಜೀಭವನ್ನಂತರೈವ ದಿದೇಶ ಬಲಮೂರ್ಜಿತಂ ॥೧೭೮॥

ಅ ॥ ಸಾಯಲಿಕ್ಕೆ ಅಭಿಮುಖನಾದ ರಾವಣನಾದರೂ ಬೇಗನೆ ಯುದ್ಧಕರ್ಮದಲ್ಲಿ ಸನ್ನದ್ಧನಾಗಿ ಮಧ್ಯದಲ್ಲಿಯೇ (ಸಂಖ್ಯೆಯಿಂದಲೂ, ಶಸ್ತ್ರಾದಿಗಳಿಂದಲೂ) ಉತ್ಕೃಷ್ಟವಾದ ಸೈನ್ಯವನ್ನು ಅಪ್ಪಣೆಕೊಟ್ಟನು ॥೧೭೮॥

ಮೂ ॥ ತ್ರಿಂಶತ್ಸಹಸ್ರಾಣಿ ಮಹೌಘಕಾನಾ-
ಮಕ್ಷೌಹಿಣೀನಾಂ ಸಹಷಟ್ಸಹಸ್ರಂ ॥
ಶ್ರಮೇಣ ಸಂಯೋಜಯತಾಶು ರಾಮಂ
ಸಜ್ಜೀ (ಜ್ಜೋ)ಭವಾನೀ(ಮಿ)ತಿ ದಿದೇಶ ರಾವಣಃ ॥೧೭೯॥

ಅ ॥ ಮಹೌಘಗಳ ಮೂವತು ಸಾವಿರಗಳನ್ನು ಅಕ್ಷೌಹಿಣಿಗಳ ಆರು ಸಾವಿರಗಳನ್ನು ಕೂಡ ಬೇಗನೆ ಶ್ರಮದಿಂದ ಒಟ್ಟುಕೂಡಿಸಿರಿ, ರಾಮನನ್ನು ನಾನು ಸನ್ನದ್ಧನಾಗಿದ್ದೇನೆ. ಎಂದು ರಾವಣನು ಅಪ್ಪಣೆ ಕೊಟ್ಟನು ॥೧೭೯॥

ಮೂ ॥ ತದಪ್ರಧೃಷ್ಯಂ ವರತಃ ಸ್ವಯಂಭುವೋ
ಯುಗಾಂತಕಾಲಾರ್ಣವಘೂರ್ಣಿತೋಪಮಂ ॥
ಪ್ರಗೃಹ್ಯ ನಾನಾವಿಧಮಸ್ತ್ರಶಸ್ತ್ರಂ
ಬಲಂ ಕಪೀಞ್ಛೀಘ್ರತಮಂ ಜಗಾಮ ॥೧೮೦॥

ಅ ॥ ಬ್ರಹ್ಮದೇವರ ವರದಿಂದ ಬಲಾತ್ಕರಿಸಲಿಕ್ಕೆ ಅಶಕ್ಯವಾದ ಪ್ರಳಯಕಾಲೀನದ ಸಮುದ್ರದ ಧ್ವನಿಗೆ ಸದೃಶವಾದ ಆ ರಾವಣನಿಂದ ಕಳುಹಿಸಲ್ಪಟ್ಟ ಸೈನ್ಯವು ಅನೇಕ ವಿಧವಾದ ಅಸ್ತ್ರ-ಶಸ್ತ್ರವನ್ನು ಹಿಡಿದುಕೊಂಡು ಬೇಗನೆ ಕಪಿಗಳನ್ನು ಕುರಿತು ಹೋಯಿತು. ॥೧೮೦॥

ಮೂ ॥ ಆಗಚ್ಛಮಾನಂ ತದಪಾರಮೇಯಂ
ಬಲಂ ಸುಘೋರಂ ಪ್ರಲಯಾರ್ಣವೋಪಮಂ ।
ಭಯಾತ್ಸಮುದ್ವೀಕ್ಷ್ಯ (ದ್ವಿಗ್ನ) ವಿಷಣ್ಣ ಚೇತಸಃ
ಕಪಿಪ್ರವೀರಾ ನಿತರಾಂ ಪ್ರದುದ್ರುವುಃ ॥೧೮೧॥

ಅ ॥ ಕಪಿಗಳಲ್ಲಿ ಶ್ರೇಷ್ಠರಾದರೂ ಬರತಕ್ಕ ತಿಳಿಯಲಿಕ್ಕಸಾಧ್ಯವಾದ ಅವಧಿಯುಳ್ಳ ಅತ್ಯಂತ ಭಯಂಕರವಾದ ಪ್ರಳಯಕಾಲೀನ ಸಮುದ್ರಕ್ಕೆ ಸದೃಶವಾದ ಆ ಸೈನ್ಯವನ್ನು ಭಯದಿಂದ ನೋಡಿಕೊಂಡು ಅತ್ಯಂತ ದುಃಖಯುಕ್ತವಾದ ಮನಸ್ಸುಳ್ಳವರಾಗಿ ಓಡಿದರು. ॥೧೮೧॥

ಮೂ ॥ ವರೋ ಹಿ ದತ್ತೋಽಸ್ಯ ಪುರಾ ಸ್ವಯಂಭುವಾ
ಧರಾತಲೇಽಲ್ಪೇಽಪಿ ನಿವಾಸಶಕ್ತಿಃ ।
ಅಜೇಯತಾ ಚೇತ್ಯತ ಏವ ಸಾರ್ಕಜಾಃ
ಪ್ಲವಂಗಮಾ ದ್ರಷ್ಟುಮಪಿಸ್ಮ ನಾಶಕನ್ ॥೧೮೨॥

ಅ ॥ ಬ್ರಹ್ಮನಿಂದ ಪೂರ್ವಕಾಲದಲ್ಲಿ ಈ ಸೈನ್ಯಕ್ಕೆ ಅಲ್ಪವಾದ ಭೂಪ್ರದೇಶವಲ್ಲಿಯೂ 'ನಿವಾಸೇ ಶಕ್ತಿರ್ಯಸ್ಮಾತ್' ಎನ್ನುವ ವ್ಯುತ್ಪತ್ತಿಯಿಂದ ನಿವಾಸವಿಷಯದಲ್ಲಿ ಶಕ್ತಿಯುಳ್ಳ ವರವೂ ಅಜೇಯತ್ವ ವರವೂ ಕೂಡ ಕೊಡಲ್ಪಟ್ಟಿದೆ. ಆದುದರಿಂದಲೇ ಸೂರ್ಯಪುತ್ರನಾದ ಸುಗ್ರೀವನಿಂದ ಸಹಿತರಾದ ಕಪಿಗಳು ನೋಡುವುದಕೋಸ್ಕರವೂ ಕೂಡ ಸಮರ್ಥರಾಗಲಿಲ್ಲ. ॥೧೮೨॥

ಮೂ ॥ ಪ್ರಗೃಹ್ಯ ರಾಮೋಽಪಿ ಧನುಃ ಶರಾಂಶ್ಚ
ಸಮಂತತಸ್ತಾನವಧೀಚ್ಛರೌಘೈಃ ।
ಸ ಏವ ಸರ್ವತ್ರ ಚ ದೃಶ್ಯಮಾನೋ
ವಿದಿಕ್ಷು ದಿಕ್ಷು ಪ್ರಜಘಾನ ಸರ್ವಶಃ ೧೮೩॥

ಅ ॥ ರಾಮನಾದರೂ ಧನುಸ್ಸನ್ನೂ, ಬಾಣಗಳನ್ನೂ ಹಿಡಿದುಕೊಂಡು ಸುತ್ತಮುತ್ತಲೂ ಇರತಕ್ಕ ರಾಕ್ಷಸರುಗಳನ್ನು ಬಾಣಸಮೂಹಗಳಿಂದ ಸಂಹಾರಮಾಡಿದನು. ಆ ರಾಮನೇ ಸಮಸ್ತಗಳಾದ ಪೂರ್ವಾದಿ ದಿಕ್ಕುಗಳಲ್ಲಿಯೂ, ಆಗ್ನೇಯಾದಿ ಕೋಣ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳಲ್ಪಡತಕ್ಕವನಾಗಿ ಸಮಸ್ತರನ್ನೂ ಕೂಡ ಸಂಹಾರಮಾಡಿದನು. ॥೧೮೩॥

ಮೂ || ಕ್ಷಣೇನ ಸರ್ವಾಂಶ್ಚ ನಿಹತ್ಯ ರಾಘವಃ
ಪ್ಲವಂಗನಾನಾನ್ವೃಷಭೈಃ ಸುಪೂಜಿತಃ ||
ಅಭಿಷ್ಟುತಃ ಸರ್ವಸುರೋತ್ತಮೈರ್ಮುದಾ
ಭೃಶಂ ಪ್ರಸೂನೋತ್ಕರವರ್ಷಿಭಿಃ ಪ್ರಭುಃ || ೧೪೪ ||

ಅ || ಸರ್ವಸಮರ್ಥರಾದ ರಾಮಚಂದ್ರದೇವರಾದರೂ ಕ್ಷಣಮಾತ್ರದಿಂದ ಸಮಸ್ತರಾದ ರಾಕ್ಷಸರನ್ನೂ ಕೂಡ ಸಂಹಾರ ಮಾಡಿ ಕಪಿಶ್ರೇಷ್ಠರಿಂದ ಪೂಜಿಸಿಕೊಳ್ಳಲ್ಪಟ್ಟವರಾಗಿ ಪುಷ್ಪಸಮೂಹವನ್ನು ವೃಷ್ಟಿಮಾಡತಕ್ಕ ಸಮಸ್ತರಾದ ದೇವಶ್ರೇಷ್ಠರಿಂದ ಸಂತೋಷದಿಂದ ಚೆನ್ನಾಗಿ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟರು || ೧೪೪ ||

ಮೂ || ಅಥಾಯಯೌ ಸರ್ವನಿಶಾಚರೇಶ್ವರೋ
ಹತಾವಶಿಷ್ಟೇನ ಬಲೇನ ಸಂವೃತಃ ||
ವಿಮಾನಮಾರುಹ್ಯ ಚ ಪುಷ್ಪಕಂ ತ್ವರನ್
ಶರೀರನಾಶಾಯ ಮಹಾಯುಧೋದ್ಧತಃ || ೧೪೫ ||

ಅ || ಅನಂತರದಲ್ಲಿ ಸಮಸ್ತರಾಕ್ಷಸರುಗಳಿಗೂ ಸ್ವಾಮಿಯಾದ ರಾವಣನಾದರೂ, ಸಂಹರಿಸಿ ಉಳಿದ ಸೈನ್ಯದಿಂದ ಕೂಡಿದವನಾಗಿ, ಪುಷ್ಪಕಾ ವಿಮಾನವನ್ನು ಏರಿಕೊಂಡು ಮಹತ್ತಾದ ಆಯುಧದಿಂದ ದೃಪ್ತನಾಗಿ ಶರೀರನಾಶಕ್ಕೋಸ್ಕರ ತ್ವರಾಯುಕ್ತನಾಗಿ ಬಂದನು.

**ವಿಶೇಷಾಂಶ—** 'ವಿಮಾನಂ ಪುಷ್ಪಕಂ ತಸ್ಯ ಜಹಾರಾಕ್ರಮ್ಯ ರಾವಣಃ । ಶಶಾಪ ತಂ ವೈಶ್ರವಣಃ ನ ತ್ವಾಮೇತದ್ವಹಿಷ್ಯತಿ || ಯಸ್ತು ತ್ವಾಂ ಸಮರೇ ಹಂತಾ ತಮೇವೈತದ್ವಹಿಷ್ಯತಿ। ಅವಮನ್ಯ ಗುರುಂ ಮಾ ಚ ಕ್ಷಿಪ್ರಂ ತ್ವಂ ನ ಭವಿಷ್ಯಸಿ ||' ಈ ಕುಬೇರನ ಶಾಪವನ್ನು ತಿಳಿದವನಾದಾಗ್ಯೂ ಅದೇ ವಿಮಾನದಲ್ಲಿ ಕುಳಿತುಕೊಂಡು ಯುದ್ಧಕ್ಕೋಸ್ಕರ ಹೊರಟುಹೋದನು||೧೪೫||

ಮೂ || ವಿರೂಪನೇತ್ರೋಽಥ ಚ ಯೂಪನೇತ್ರ-
ಸ್ತಥಾ ಮಹಾಪಾರ್ಶ್ವಮಹೋದರೌ ಚ ||
ಯಯುಸ್ತಮಾವೃತ್ಯ ಸಹೈವ ಮಂತ್ರಿಣೋ
ಮೃತಿಂ ಪುರೋಧಾಯ ರಣಾಯ ಯಾಂತಂ || ೧೪೬ ||

ಅ || ಆ ಮೇಲೆ ವಿರೂಪನೇತ್ರನು, ಯೂಪನೇತ್ರನು ಹಾಗೆ ಮಹಾಪಾರ್ಶ್ವ, ಮಹೋದರ ಎನ್ನುವ ಮಂತ್ರಿಗಳು ಮರಣವನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೋಸ್ಕರ ಹೋಗತಕ್ಕ ರಾವಣನನ್ನು ಅನುಸರಿಸಿ ಹೋದರು. ||೧೪೬||

ಮೂ || ಅಥಾಸ್ಯ ಸೈನ್ಯಾನಿ ನಿಜಘ್ನುರೋಜಸಾ
ಸಮಂತತಃ ಶೈಲಶಿಲಾಭಿವೃಷ್ಟಿಭಿಃ ||
ಪ್ಲವಂಗಮಾಸ್ತಾನಭಿವೀಕ್ಷ್ಯ ವೀರ್ಯವಾ-
ನ್ಸಸಾರ ವೇಗೇನ ಮಹೋದರೋ ರುಷಾ|| ೧೪೭ ||

ಅ ॥ ಆ ಮೇಲೆ ಕಪಿಗಳಾದರೂ ಸಾಮರ್ಥ್ಯದಿಂದ ಈ ರಾವಣನ ಸೈನ್ಯಗಳನ್ನು ಸುತ್ತಮುತ್ತಲೂ ಪರ್ವತಗಳು ಕಲ್ಲುಗಳು ಇವುಗಳ ವೃಷ್ಟಿಯಿಂದ ಹೊಡೆದರು ಆ ಮೇಲೆ ಹಿಂಸಿಸತಕ್ಕ ಆ ಕಪಿಗಳನ್ನು ನೋಡಿ, ಸಾಮರ್ಥ್ಯವುಳ್ಳ ಮಹೋದರ ನಾಮಕನಾದ ರಾವಣನ ಮಂತ್ರಿಯು ಕೋಪದಿಂದ ಬೇಗನೆ ಎದುರುಬಂದನು. ॥ ೧೮೭ ॥

ಮೂ ॥ ವೀಕ್ಷ್ಯಾತಿಕಾಯಂ ತಮಭಿದ್ರವಂತಂ
ಸ ಕುಂಭಕರ್ಣೋಽಯಮಿತಿ ಬ್ರುವಂತಃ ॥
ಪ್ರದುದ್ರುವುರ್ವಾನರವೀರಸಂಘಾ-
ಸ್ತಮಾಸಸಾದಾಶು ಸುತೋಽಥ ವಾಲಿನಃ ॥ ೧೮೮ ॥

ಅ ॥ ಕಪಿಶ್ರೇಷ್ಠರುಗಳ ಸಮೂಹಗಳು, ಓಡಿಬರತಕ್ಕ ಮಹಾದೇಹವುಳ್ಳ ಮಹೋದರನನ್ನು ನೋಡಿ, ಮೊದಲುಸತ್ತ ಕುಂಭಕರ್ಣನು ಇವನೇ ಎಂದು ಹೇಳತಕ್ಕವರಾಗಿ ಓಡಿಹೋದರು. ಆ ಮೇಲೆ ವಾಲಿಯ ಮಗನಾದ ಅಂಗದನು ಬೇಗನೇ ಅವನನ್ನು ಸಮೀಪಿಸಿದನು. ॥೧೮೮ ॥

ಮೂ ॥ ವದನ್ಸ ತಿಷ್ಠಧ್ವಮಿತಿಸ್ಮ ವೀರೋ
ವಿಭೀಷಿಕಾಮಾತ್ರಮಿದಂ ನ ಯಾತ ॥
ಇತೀರಯನ್ನಗ್ರತ ಏವ ಪುಪ್ಲುವೇ
ಮಹೋದರಸ್ಯೇಂದ್ರ ಸುತಾತ್ಮಜೋ ಬಲೀ ॥ ೧೮೯ ॥

ಅ ॥ ಈ ಪುರೋದೃಶ್ಯಮಾನವಾದುದಾದ್ದು (ಅಂದರೆ ಎದುರಾಗಿ ಬರತಕ್ಕ ಮಹೋದರನ ದೇಹವು) ಕೇವಲ ಭಯಜನಕ ಮಾತ್ರವು ಈ ಪ್ರಕಾರ(ಅಂಗದನು) ಹೇಳುತ್ತಾ, ಎಲೋ ಕಪಿಗಳಿರಾ, ನಿಲ್ಲಿರಿ, ಹೋಗಬೇಡಿರಿ; ಎಂದು ಹೇಳುತ್ತಾ ಆರಬ್ಧಾಂತಗಾಮಿಯಾದ ಬಲಿಷ್ಠನಾದ ವಾಲಿಯ ಮಗನಾದ ಅಂಗದನು ಮಹೋದರನ ಎದುರಿಗೆ ಹಾರಿದನು. ॥ ೧೮೯

ಮೂ ॥ ಅಥೋ ಶರಾನಾಶು ವಿಮುಂಚಮಾನಂ
ಶಿರಃ ಪರಾಮೃಶ್ಯ ನಿಪಾತ್ಯ ಭೂತಲೇ ॥
ಮಮರ್ದ ಪದ್ಭ್ಯಾಮಭವದ್ಗತಾಸು-
ರ್ಮಹೋದರೋ ವಾಲಿಸುತೇನ ಚೂರ್ಣಿತಃ ॥ ೧೯೦ ॥

ಅ ॥ ಅಂಗದನು ಆ ಮೇಲೆ ಬೇಗನೇ ಬಾಣಗಳನ್ನು ಬಿಡತಕ್ಕ ಆ ಮಹೋದರನನ್ನು ತಲೆಯನ್ನು ಹಿಡಿದು ಭೂಮಿಯಲ್ಲಿ ಕೆಡಹಾಕಿ ಕಾಲುಗಳಿಂದ ಮರ್ದನಮಾಡಿದನು. ಆ ಮೇಲೆ ಮಹೋದರನಾದರೂ ಅಂಗದನಿಂದ ಪುಡಿಪುಡಿಮಾಡಲ್ಪಟ್ಟವನಾಗಿ ಹೋಗಲ್ಪಟ್ಟ ಪ್ರಾಣವುಳ್ಳವನಾದನು. ॥೧೯೦॥

ಮೂ ॥ ಅಥೋ ಮಹಾಪಾರ್ಶ್ವ ಉಪಾಜಗಾಮ
ಪ್ರವರ್ಷಮಾಣೋಽಸ್ಯ ಶರಾಂಬುಧಾರಾಃ ॥
ಪ್ರಸಹ್ಯ ಚಾಚ್ಛಿದ್ಯ ಧನುಃ ಕರಸ್ಥಂ
ಸಮಾದದೇ ಖಡ್ಗಮಮುಷ್ಯ ಸೋಽಂಗದಃ ॥ ೧೯೧ ॥

ಅ ॥ ಆ ಮೇಲೆ ಮಹಾಪಾರ್ಶ್ವನು ಅಂಗದನಿಗೆ ಬಾಣವೃಷ್ಟಿಯನ್ನು ವರ್ಷಿಸುತ್ತಾ ಬಂದನು. ಅವನ ಬಾಣವೃಷ್ಟಿಯನ್ನು ಸಹಿಸಿಕೊಂಡು ಆ ಅಂಗದನು ಅವನ ಕೈಯಲ್ಲಿರತಕ್ಕ ಧನುಸ್ಸನ್ನು ತುಂಡುಮಾಡಿ ಇವನ ಖಡ್ಗವನ್ನು ಎಳೆದುಕೊಂಡನು. ॥ ೮೧ ॥

ಮೂ ॥ ನಿಗೃಹ್ಯ ಕೇಶೇಷು ನಿಪಾತ್ಯ ಭೂತಲೇ
ಚಕರ್ತ ವಾನರಾಂಸತ ಓದರಂ ಪರಂ ॥
ಯಥೋಪವೀತಂ ಸ ತಥಾ ದ್ವಿಧಾ ಕೃತೋ
ಮಮಾರ ಮಂತ್ರೀ ರಜನೀಚರೇಶಿತುಃ ॥ ೮೨ ॥

ಅ ॥ ಅಂಗದನಾದರೂ (ಮಹಾಪಾರ್ಶ್ವನ) ತಲೆಯನ್ನು ಹಿಡಿದು ಭೂಮಿಯಲ್ಲಿ ಕೆಡಹಾಕಿ ಅವನ ಎಡದ ಭುಜದಿಂದ ಚೆನ್ನಾಗಿ ದಕ್ಷಿಣೋದರ ಪ್ರಾಂತ್ಯವನ್ನು ಅವಧೀಕರಿಸಿ (ಅಂದರೆ ದಕ್ಷಿಣೋದರ ಪ್ರಾಂತ್ಯಪರ್ಯಂತವಾಗಿ) ಯಜ್ಞೋಪವೀತದ ಹಾಗೆ ತುಂಡು ಮಾಡಿದನು. ಈ ರೀತಿ ರಾವಣನ ಮಂತ್ರಿಯಾದ ಈ ಮಹಾಪಾರ್ಶ್ವನು ಎರಡು ಭಾಗವಾಗಿ ತುಂಡರಿಸಿಕೊಂಡವನಾಗಿ ಮೃತಿ ಹೊಂದಿದನು ॥ ೮೨ ॥

ಮೂ ॥ ಅಥೈನಮಾಜಗ್ಮತುರುದ್ಯತಾಯುಧೌ
ವಿರೂಪನೇತ್ರೋsಪ್ಯಥ ಯೂಪನೇತ್ರಃ
ಯಥೈವ ಮೇಘೌ ದಿವಿ ತಿಗ್ಮರಶ್ಮಿಂ
ತಥಾ ಸಮಾಚ್ಛಾದಯತಾಂ ಶರೌಘೈಃ ೮೩ ॥

ಅ ॥ ಆ ಮೇಲೆ ವಿರೂಪನೇತ್ರನು ಮತ್ತು ಯೂಪನೇತ್ರನು ಇವರಿಬ್ಬರು ಧರಿಸಲ್ಪಟ್ಟ ಆಯುಧಗಳುಳ್ಳವರಾಗಿ ಅಂಗದನನ್ನು ಎದುರುಗೊಂಡರು. ಆ ಮೇಲೆ ಆಕಾಶದಲ್ಲಿ ಸೂರ್ಯನನ್ನು ಎರಡುಮೇಘಗಳು ಹೇಗೆ ಆಚ್ಛಾದಿಸುತ್ತಾವೋ ಹಾಗೆ ಇವರಿಬ್ಬರು ಅಂಗದನನ್ನು ಬಾಣಗಳ ಸಮೂಹಗಳಿಂದ ಆಚ್ಛಾದಿಸಿದರು ॥ ೮೩ ॥

ಮೂ ॥ ತಾಭ್ಯಾಂ ಸ ಬದ್ಧಃ ಶರಪಂಜರೇಣ
ವಿಚೇಷ್ಟಿತುಂ ನಾಶಕದತ್ರ ವೀರಃ ॥
ಹರೀಶ್ವರಃ ಶೈಲಮತಿಪ್ರಮಾಣ-
ಮುತ್ಪಾಟ್ಯ ಚಿಕ್ಷೇಪ ತಯೋಃ ಶರೀರೇ ॥ ೮೪ ॥

ಅ ॥ ರಣಮಂಡಲದಲ್ಲಿ ಅವರಿಬ್ಬರುಗಳಿಂದ ಶರಗಳಿಂದ ಮಾಡಲ್ಪಟ್ಟ ಪಂಜರದಿಂದ ಬಂಧಿಸಿಕೊಳ್ಳಲ್ಪಟ್ಟ ವೀರನಾದ ಅಂಗದನು ಅತ್ತಿತ್ತ ಹಂದಾಡುವುದಕ್ಕೋಸ್ಕರವೂ ಕೂಡ ಸಮರ್ಥನಾಗಲಿಲ್ಲ. ಆ ಮೇಲೆ ಕಪಿಗಳಿಗೆ ಸ್ವಾಮಿಯಾದ ಸುಗ್ರೀವನು ಅತಿದೊಡ್ಡದಾದ ಪರ್ವತವನ್ನು ಕಿತ್ತು ತಂದು ಅವರಿಬ್ಬರ ತಲೆಯ ಮೇಲೆ ಹಾಕಿದನು ॥ ೮೪ ॥

ಮೂ ॥ ಉಭೌ ಚ ತೌ ತೇನ ವಿಚೂರ್ಣಿತೌ ರಣೇ
ರವೇಃ ಸುತಸ್ಯೋರುಬಲೇರಿತೇನ ॥
ನಿಶಾಚರೇಶೋಽಥ ಶರೇಣ ಸೂರ್ಯಜಂ
ಬಿಭೇದ ವಕ್ಷಸ್ಯಪಿ ಸೋಽಪತದ್ಭುವಿ ॥೯೫॥

ಅ ॥ ಯುದ್ಧದಲ್ಲಿ ಸೂರ್ಯಪುತ್ರನಾದ ಸುಗ್ರೀವನ ಉತ್ಕೃಷ್ಟವಾದ ಬಲದಿಂದ ಪ್ರೇರಿತವಾದ ಆ ಪರ್ವತದಿಂದ ಅವರಿಬ್ಬರೂ ಕೂಡ ಚೂರ್ಣೀಕರಿಸಲ್ಪಟ್ಟರು. ಆಮೇಲೆ ರಾವಣನಾದರೂ ಬಾಣದಿಂದ ಸುಗ್ರೀವನನ್ನು ವಕ್ಷಸ್ಥಳದಲ್ಲಿ ಹೊಡೆದನು ಅವನು ಬಿದ್ದನು ॥೯೫॥

ಮೂ ॥ ತತಶ್ಚ ಸರ್ವಾಂಶ್ಚ ಕಪಿ(ಹರಿ)ಪ್ರವೀರಾ-
ನ್ವಿಧೂಯ ಬಾಣೈರ್ಬಲವಾನ್ದಶಾನನಃ ॥
ಜಗಾಮ ರಾಮಾಭಿಮುಖಸ್ತದೈನಂ
ರುರೋಧ ರಾಮಾವರಜಃ ಶರೌಘೈಃ ॥೯೬॥

ಅ ॥ ಆಮೇಲೆ ಬಲಿಷ್ಠನಾದ ರಾವಣನಾದರೂ ಸಮಸ್ತರಾದ ಕಪಿಪ್ರವೀರರುಗಳನ್ನು ಬಾಣಗಳಿಂದ ಓಡಿಸಿ, ರಾಮನಿಗೆ ಎದುರಾಗಿ ಹೋದನು. ಆಗ ರಾಮನ ತಮ್ಮನಾದ ಲಕ್ಷ್ಮಣನು ಶರಗಳ ಸಮೂಹಗಳಿಂದ ಈ ರಾವಣನನ್ನು ತಡೆದನು ॥ ೯೬ ॥

ಮೂ ॥ ತದಾ ದಶಾಸ್ಯೋಽನ್ತಕದಂಡಕಲ್ಪಾಂ
ಮಯಾಯ ದತ್ತಾಂ ಕಮಲೋದ್ಭವೇನ ॥
ಮಯಾದ್ಗೃಹೀತಾಂ ಚ ವಿವಾಹಕಾಲೇ
ಪ್ರಗೃಹ್ಯ ಶಕ್ತಿಂ ವಿಸಸರ್ಜ ಲಕ್ಷ್ಮಣೇ ॥೯೭॥

ಅ ॥ ಆಗ ಹತ್ತು ಮುಖಗಳುಳ್ಳ ರಾವಣನು ಯಮನ ದಂಡಕ್ಕೆ ತುಲ್ಯವಾದ, ಬ್ರಹ್ಮನಿಂದ ಮಯನಿಗೋಸ್ಕರ ಕೊಡಲ್ಪಟ್ಟ, ರಾವಣನ ವಿವಾಹ ಕಾಲದಲ್ಲಿ ಮಯನಿಂದ ರಾವಣನಿಗೆ ದತ್ತವಾದ ಶಕ್ತ್ಯಾಖ್ಯ ಆಯುಧವನ್ನು ಹಿಡಿದುಕೊಂಡು ಲಕ್ಷ್ಮಣನಲ್ಲಿ ಬಿಟ್ಟನು ॥ ೯೭ ॥

ಮೂ ॥ ತಯಾ ಸ ವೀರಃ ಸುವಿದಾರಿತೋರಾಃ ॥
ಪಪಾತ ಭೂಮೌ ಸುಭೃಶಂ ವಿಮೂರ್ಚ್ಛಿತಃ ॥
ಮರುತ್ಸುತಃ ಶೈಲಮತಿಪ್ರಮಾಣಂ
ಚಿಕ್ಷೇಪ ರಕ್ಷಃ ಪ್ರತಿ ವಕ್ಷಸಿ ದ್ರುತಂ ॥೯೮॥

ಅ ॥ ಅರಬ್ದಾಂತಗಾಮಿಯೊದ ಲಕ್ಷ್ಮಣನಾದರೂ ಆ ಶಕ್ತಿಯಿಂದ ಚೆನ್ನಾಗಿ ಸೀಳಲ್ಪಟ್ಟ ವಕ್ಷಸ್ಥಳವುಳ್ಳವನಾಗಿ ಅತ್ಯಂತವಾಗಿ ಮೂರ್ಛಾಕ್ರಾಂತನಾಗಿ ಭೂಮಿಯಲ್ಲಿ ಬಿದ್ದನು. ವಾಯುಪುತ್ರನಾದ ಹನುಮಂತನು ಅತಿದೊಡ್ಡದಾದ ಪರ್ವತವನ್ನು ಬೇಗನೆ ರಾವಣನ ವಕ್ಷಸ್ಥಳದಲ್ಲಿ ಹಾಕಿದನು ॥ ೯೮ ॥

ಮೂ ॥ ತೇನಾತಿಗಾಢಂ ವ್ಯಥಿತೋ ದಶಾನನೋ
ಮುಖೈರ್ವಮನ್ ಶೋಣಿತಪೂರಮಾಶು ॥
ತದಂತರೇ ಚ (ಣ) ಪ್ರತಿಗೃಹ್ಯ ಲಕ್ಷ್ಮಣಂ
ಜಗಾಮ ಶಕ್ತ್ಯಾ ಸಹ ರಾಮಸನ್ನಿಧಿಂ ॥ ೧೯೯ ॥

ಅ ॥ ಆ ಪರ್ವತಪತನದಿಂದ ಅತ್ಯಂತ ದುಃಖಿತನಾದ ರಾವಣನು ತನ್ನ ದಶಮುಖ ಗಳಿಂದಲೂ, ರಕ್ತಪ್ರವಾಹವನ್ನು ಕಾರಿದವನಾದನು. ಹನುಮಂತನಾದರೂ ಆ ಮಧ್ಯದಲ್ಲಿ ಬೇಗನೆ ಲಕ್ಷ್ಮಣನನ್ನು ಶಕ್ತಿಸಮೇತವಾಗಿ ಹಿಡಿದುಕೊಂಡು ರಾಮನ ಸಮೀಪವನ್ನು ಕುರಿತು ಹೊರಟು ಹೋದನು ॥ ೧೯೯ ॥

ಮೂ ॥ ಸಮುದ್ವಬರ್ಹಾಥ ಚ ತಾಂ ಸ ರಾಘವೋ
ದಿದೇಶ ಚ ಪ್ರಾಣವರಾತ್ಮಜಂ ಪುನಃ ॥
ಪ್ರಭುಃ ಸಮಾನೇತಮಥೋ ವರೌಷಧೀಃ
ಸ ಚಾನಿನಾಯಾಶು ಗಿರಿಂ ಪುನಸ್ತಂ ॥ ೨೦೦ ॥

ಅ ॥ ಆ ಮೇಲೆ ರಾಮಚಂದ್ರ ದೇವರು ಆ ಶಕ್ತ್ಯಾಖ್ಯ ಆಯುಧವನ್ನು ಕಿತ್ತು ತೆಗೆದರು. ಅನಂತರ ಸರ್ವ ಸಮರ್ಥರಾದ ರಾಮಚಂದ್ರದೇವರು ವಾಯುಪುತ್ರನಾದ ಹನುಮಂತನನ್ನು ಉತ್ತಮಗಳಾದ ಔಷಧಿಗಳನ್ನು ತರುವುದಕ್ಕೋಸ್ಕರ ಅಪ್ಪಣೆಕೊಟ್ಟರು. ಹನುಮಂತನಾದರೂ ಬೇಗನೆ ಮತ್ತೊಂದಾವರ್ತಿ ಆ ಗಂಧಮಾದನ ಪರ್ವತವನ್ನು ತಂದನು ॥ ೨೦೦ ॥

ಮೂ ॥ ತದ್ಗಂಧಮಾತ್ರೇಣ ಸಮುತ್ಥಿತೋಽಸೌ
ಸೌಮಿತ್ರಿರಾತ್ತೋರುಬಲಶ್ಚ ಪೂರ್ವವತ್ ॥
ಶಶಂಸ ಚಾಶ್ಲಿಷ್ಯ ಮರುತ್ಸುತಂ ಪ್ರಭುಃ
ಸ ರಾಘವೋಽಗಣ್ಯಗುಣಾರ್ಣವಃ ಸ್ಮಯನ್ ॥ ೨೦೧ ॥

ಅ ॥ ಈ ಲಕ್ಷ್ಮಣನಾದರೂ ಮೃತಸಂಜೀವಿನ್ಯಾದ್ಯೌಷಧಿಗಳ ಗಂಧಮಾತ್ರದಿಂದ ಮೊದಲಿನಂತೆ ಸ್ವೀಕರಿಸಲ್ಪಟ್ಟ ಮಹಾ ಬಲವುಳ್ಳವನಾಗಿ ಎದ್ದನು. ಸರ್ವ ಸಮರ್ಥರಾದ, ಎಣಿಸಲಿಕ್ಕೆ ಅಶಕ್ಯಗಳಾದ ಗುಣಗಳಿಂದ ಸಮುದ್ರದಂತೆ ಇರತಕ್ಕ ರಾಮಚಂದ್ರದೇವರು ಮಂದಹಾಸವನ್ನು ಮಾಡುತ್ತಾ ವಾಯುಪುತ್ರನಾದ ಹನುಮಂತನನ್ನು ಆಲಿಂಗಿಸಿ ಹೊಗಳಿದರು ॥ ೨೦೧ ॥

ಮೂ ॥ ಪ್ರಾಕ್ಷಿಪತ್ತಂ ಗಿರಿವರಂ ಲಂಕಾಸ್ಥಃಸನ್ನ ಮಾರುತಿಃ ॥
ಅರ್ಧಲಕ್ಷೇ ಯೋಜನಾನಾಂ ಯತ್ರಾಸೌ ಪೂರ್ವಸಂಸ್ಥಿತಃ ॥ ೨೦೨ ॥

ಅ ॥ ಆ ಹನುಮಂತನು ಆ ಪರ್ವತಶ್ರೇಷ್ಠವನ್ನು ಯೋಜನಗಳ ಅರ್ಧಲಕ್ಷಮೂರದಲ್ಲಿ ಎಲ್ಲಿ ಪರ್ವತವು ಮೊದಲು ಇತ್ತೋ, ಆ ಪ್ರದೇಶವನ್ನು ಕುರಿತು ಲಂಕಾಪಟ್ಟಣದಲ್ಲಿದ್ದವನಾಗಿಯೇ ಬಿಸಾಡಿದನು. ॥ ೨೦೨ ॥

ಮೂ ॥ ತದ್ಬಾಹುವೇಗಾತ್ಸಂಶ್ಲೇಷಂ ಪ್ರಾಪ ಪೂರ್ವವದೇವ ಸಃ ॥
ಮೃತಾಶ್ಚ ಯೇ ಪ್ಲವಂಗಾಸ್ತು ತದ್ಗಂಧಾತ್ತೇಽಪಿ ಜೀವಿತಾಃ ॥ ೨೦೩ ॥

ಅ ॥ ಆ ಪರ್ವತವು ಹನುಮಂತನ ಬಾಹುವೇಗದಿಂದ ಮೊದಲಿನಂತೆ ಚೆನ್ನಾಗಿ ಸಂಬಂಧವನ್ನುಹೊಂದಿತು. ಯುದ್ಧದಲ್ಲಿ ಯಾವ ಕಪಿಗಳು ಮೃತರಾಗಿದ್ದರೋ ಅವರೂ ಕೂಡ ಮೃತಸಂಜೀವಿನ್ಯಾದ್ಯೌಷಧಿಗಳ ಗಂಧದಿಂದ ಬದುಕಿದರು. ॥ ೨೦೩ ॥

ಮೂ ॥ *ರಾಮಾಜ್ಞಯೈವ ಹಿ ರಕ್ಷಾಂಸಿ ಹರಯೋಽಬ್ಧಾವವಾಕ್ಷಿಪನ್ ॥
ನೋಜ್ಜೀವಿತಾಸ್ತತಸ್ತೇ ತು ವಾನರಾ ನೀರುಜೋಽಭವನ್ ॥ ೨೦೪ ॥

ಅ ॥ ರಾಮನ ಅಪ್ಪಣೆಯಿಂದಲೇ ಕಪಿಗಳು ರಾಕ್ಷಸರುಗಳನ್ನು ಸಮುದ್ರದಲ್ಲಿ ಬಿಸಾಡಿದರು ಆದುದರಿಂದ ಆ ರಾಕ್ಷಸರುಗಳು ಜೀವಂತರಾಗಲಿಲ್ಲ. ಕಪಿಗಳಾದರೂ ರೋಗರಹಿತರಾದರು.

ವಿಶೇಷಾಂಶ—ಮುಂದಕ್ಕೆ ಗಂಧಮಾದನಪರ್ವತವನ್ನು ತರುವಾಗ ಮೃತರಾದ ರಾಕ್ಷಸರು ಪುನಃ ಜೀವಂತರಾಗುವರು, ಎಂದು ಮುಂದಿನ ಅರ್ಥವನ್ನು ತಿಳಿದ ಸರ್ವಜ್ಞರಾದ ರಾಮಚಂದ್ರದೇವರು ಆಜ್ಞಾಪಿಸಿರುವರು. ಕಪಿಗಳಾದರೂ ಸರ್ವಜ್ಞರಾಗದಿದ್ದಪ್ರಯುಕ್ತ ತಿಳಿಯದೇ ಇರುವುದರಿಂದ ರಾಮನ ಅಪ್ಪಣೆಯಿಂದಲೇ ಸಮುದ್ರಕ್ಕೆ ಬಿಸಾಡಿದರು. ಎಂದು ಏವಕಾರದ ಅರ್ಥವು — ॥ ೨೦೪ ॥

ಮೂ ॥ ಛಿನ್ನಪ್ರರೋಹಿಣಶ್ಚೈವ ವಿಶಲ್ಯಾಃಪೂರ್ವವರ್ಣಿನಃ ॥
ಓಷಧೀನಾಂ ಪ್ರಭಾವೇಣ ಸರ್ವೇಽಪಿ ಹರಯೋಽಭವನ್ ॥ ೨೦೫ ॥

ಅ ॥ ಸಮಸ್ತರಾದ ಕಪಿಗಳು ಮೃತಸಂಜೀವಿನ್ಯಾದ್ಯೌಷಧಿಗಳ ಪ್ರಭಾವದಿಂದ (''ಛಿನ್ನಾನಾಂ ಅಂಗಾನಾಂ ಪ್ರರೋಹಃ ಸಂಧಾನಂ ಯೇಭ್ಯಸ್ತೇ' ಎನ್ನುವ ವ್ಯುತ್ಪತ್ತಿಯಿಂದ) ಯುದ್ಧದಲ್ಲಿ ಛಿನ್ನಗಳಾದ ಅವಯವಗಳ ಕೂಡುವಿಕೆವುಳ್ಳವರಾಗಿ ಮತ್ತು ಹೋಗಲ್ಪಟ್ಟ ಬಾಣಗಳುಳ್ಳವರಾಗಿ ಪೂರ್ವವರ್ಣಗಳುಳ್ಳವರೂ ಆದರು. ॥ ೨೦೫ ॥

ಮೂ ॥ ಅ ಸಸಾದೋತ್ತಮಪೂರುಷಂ ಪ್ರಭುಂ
ವಿಮಾನಗೋ ರಾವಣ ಆಯುಧೌಘಾನ್ ॥
ಪ್ರವರ್ಷಮಾಣೋ ರಘುವಂಶನಾಥಂ
ತಮಾತ್ತಧನಾಭಿಯಯೌ ಸ (ಚ) ರಾಮಃ ॥ ೨೦೬ ॥

ಅ ॥ ಆ ಮೇಲೆ ರಾವಣನಾದರೂ, ಪುರುಷೋತ್ತಮನೂ ಸರ್ವಸಮರ್ಥನೂ ಆದ ರಘುವಂಶಕ್ಕೆ ಸ್ವಾಮಿಯಾದ ರಾಮಚಂದ್ರದೇವರನ್ನು ಆಯುಧಸಮೂಹಗಳನ್ನು ವರ್ಷಿಸುತ್ತಾ ವಿಮಾನದಲ್ಲಿ ಕುಳಿತುಕೊಂಡವನಾಗಿ ಸಮೀಪಿಸಿದನು. ರಾಮಚಂದ್ರದೇವರಾದರೂ ಸ್ವೀಕರಿಸಲ್ಪಟ್ಟ ಧನುಸ್ಸುಳ್ಳವರಾಗಿ ಆ ರಾವಣನನ್ನು ಸಮೀಪಿಸಿದರು. ॥ ೨೦೬ ॥

---

*'ರಾಮಾಜ್ಞಯೈವ' ಎಂದು ವಾದಿರಾಜೀಯ ಪಾಠ.

ಮೂ ॥ ಸ್ವನರ್ಾನಯನ್ ರಾಘವಮಾದಿಪೂರುಷಂ
ನಿರ್ಯಾತಯಾಮಾಸ ರಥಂ ಪುರಂದರಃ ॥
ಸಹಾಯುಧಂ ಮಾತಲಿಸಂಗ್ರಹೀತಂ
ಸಮಾರುರೋಹಾಶು ಸ ಲಕ್ಷ್ಮಣಾಗ್ರಜಃ ॥ ೨೦೭ ॥

ಅ ॥ ಆದಿಪುರುಷನಾದ ರಾಮಚಂದ್ರದೇವರನ್ನು ಬಹುಮಾನಿಸತಕ್ಕವನಾಗಿ ಇಂದ್ರನು ತನ್ನ ರಥವನ್ನು ಭೂಮಿಗೆ ಕಳುಹಿಸಿಕೊಟ್ಟನು. ಲಕ್ಷ್ಮಣನ ಅಣ್ಣನಾದ ರಾಮಚಂದ್ರದೇವರಾದರೂ ಮಾತಲಿಯಿಂದ ತರಲ್ಪಟ್ಟ ಆಯುಧದಸಮೇತವಾದರಥವನ್ನು ಬೇಗನೆ ಏರಿದರು ॥ ೨೦೭ ॥

ಮೂ ॥ ಆರುಹ್ಯ ತದ್ರ(ತಂ ರ)ಥವರಂ ಜಗದೇಕನಾಥೋ
ಲೋಕಾಭಯಾಯ ರಜನೀಚರನಾಥಮಾಶು ॥
ಅಭ್ಯುದ್ಯಯೌ ದಶಶತಾಂಶುರಿವಾಂಧಕಾರಂ
ಲೋಕಾನಶೇಷತ ಇಮಾನ್ನಿಗಿರಂತಮುದ್ಯನ್ ॥ ೨೦೮ ॥

ಅ ॥ ಲೋಕಕ್ಕೆ ಮುಖ್ಯ ಒಡೆಯರಾದ ರಾಮಚಂದ್ರದೇವರು ಆ ಇಂದ್ರನಿಂದ ಕಳುಹಿಸಲ್ಪಟ್ಟ ರಥಶ್ರೇಷ್ಠವನ್ನಾದರೂ ಏರಿ, ಲೋಕದ ಅಭಯಕ್ಕೋಸ್ಕರ ಈ ಸಮಸ್ತಗಳಾದ ಪಾತಾಳಾದಿಲೋಕಗಳನ್ನು ಆಕ್ರಮಿಸತಕ್ಕ ರಾಕ್ಷಸಸ್ವಾಮಿಯಾದ ರಾವಣನನ್ನು, ಕತ್ತಲೆಯನ್ನು ಉದಯಿಸಿಕೊಂಡು ಬರತಕ್ಕಸೂರ್ಯನಂತೆ ಬೇಗನೆ ಎದುರುಗೊಂಡರು ॥ ೨೦೮ ॥

ಮೂ ॥ ಆಯಾಂತಮೀಕ್ಷ್ಯ ರಜನೀಚರಲೋಕನಾಥಃ
ಶಸ್ತ್ರಾಣ್ಯಥಾಸ್ತ್ರಸಹಿತಾನಿ ಮುಮೋಚ ರಾಮೇ ॥
ರಾಮಸ್ತು ತಾನಿ ವಿನಿಕೃಂತ್ಯ ನಿಜೈರ್ಮಹಾಸ್ತ್ರೈ-
ಸ್ತಸ್ಯೋತ್ತಮಾಂಗದಶಕಂ ಯುಗಪನ್ನ್ಯಕೃಂತತ್ ॥ ೨೦೯ ॥

ಅ ॥ ಆ ಮೇಲೆ ರಾಕ್ಷಸರಿಗೆ ಸ್ವಾಮಿಯಾದ ರಾವಣನಾದರೂ ಎದುರುಬಂದ ರಾಮನನ್ನುನೋಡಿ ಅಸ್ತ್ರಸಹಿತಗಳಾದ ಬಾಣಗಳನ್ನು ರಾಮನಲ್ಲಿ ಬಿಟ್ಟನು. ರಾಮನಾದರೂ ಅವುಗಳನ್ನು ತನ್ನ ಮಹಾಸ್ತ್ರಗಳಿಂದ ತುಂಡುಮಾಡಿ ಆ ರಾವಣನ ಹತ್ತುತಲೆಗಳನ್ನು ಏಕಕಾಲದಲ್ಲಿ ಛೇದಿಸಿದನು ॥ ೨೦೯ ॥

ಮೂ ॥ ಕೃಂತಾನಿ ತಾನಿ ಪುನರೇವ ಸಮುತ್ಥಿತಾನಿ
ದೃಷ್ಟ್ವಾ ನರಾಚ್ಛತಧೃತೇರ್ಹೃದಯಂ ಬಿಭೇದ ॥
ಬಾಣೇನ ವಜ್ರಸದೃಶೇನ ಸ ಭಿನ್ನಹೃತ್ಕೋ
ರಕ್ತಂ ವಮನ್ನ್ಯಪತದಾಶು ಮಹಾವಿಮಾನಾತ್ ॥ ೨೧೦ ॥

ಅ ॥ ಛೇದಿಸಲ್ಪಟ್ಟ ಆ ಶಿರಸ್ಸುಗಳು ಬ್ರಹ್ಮನ ವರದಿಂದ, ಪುನಃ ಉತ್ಥಿತಗಳಾದದ್ದನು ನೋಡಿ ರಾಮಚಂದ್ರದೇವರು (ಆ ರಾವಣನ) ಹೃದಯವನ್ನು ಛೇದಿಸಿದರು. ರಾವಣನು ಆ

ವಜ್ರಸದೃಶವಾದ ಬಾಣದಿಂದ ಭೇದಿಸಲ್ಪಟ್ಟ ಹೃದಯವುಳ್ಳವನಾಗಿ (ಅಥವಾ ಭೇದಿಸಲ್ಪಟ್ಟ ಹೃದಯವು ತಲೆಗಳು ಇವುಗಳುಳ್ಳವನಾಗಿ) ರಕ್ತವನ್ನು ವಾಂತಿಮಾಡತಕ್ಕವನಾಗಿ ಬೇಗನೇ ಆ ಮಹಾವಿಮಾನದಿಂದ ಬಿದ್ದನು ॥ ೨೧೦ ॥

ಮೂ ॥ ತಸ್ಮಿನ್ಹತೇ ತ್ರಿಜಗತಾಂ ಪರಮಪ್ರತೀಪೇ
ಬ್ರಹ್ಮಾ ಶಿವೇನ ಸಹಿತಃ ಸಹ ಲೋಕಪಾಲೈಃ ॥
ಅಭ್ಯೇತ್ಯ ಪಾದಯುಗಲಂ ಜಗದೇಕಭರ್ತು
ರಾಮಸ್ಯ ಭಕ್ತಿ ಭರಿತಃ ಶಿರಸಾ ನನಾಮ ॥ ೨೧೧ ॥

ಅ ॥ ಮೂರುಲೋಕಕ್ಕೂಕೂಡ ಅತ್ಯಂತ ವಿರೋಧಿಯಾದ ಆ ರಾವಣನು ಮೃತನಾದ ಮೇಲೆ ಬ್ರಹ್ಮನು ರುದ್ರನಿಂದಲೂ, ಇಂದ್ರಾದ್ಯಷ್ಟದಿಕ್ಪಾಲಕರಿಂದಲೂ ಕೂಡಿಕೊಂಡು ಬಂದು ಲೋಕಕ್ಕೆ ಮುಖ್ಯಸ್ವಾಮಿಯಾದ ರಾಮನ ಪಾದಗಳಿಗೆ ಭಕ್ತಿಯುಕ್ತನಾಗಿ ಶಿರಸಾ ನಮಸ್ಕಾರ ಮಾಡಿದನು ॥ ೨೧೧ ॥

ಮೂ ॥ ಅಥೈನಮುಸ್ತೌತ್ಪಿತರಂ ಕೃತಾಂಜಲಿ-
ರ್ಗುಣಾಭಿರಾಮಂ ಜಗತಃ ಪಿತಾಮಹಃ ॥
ಜಿತಂ ಜಿತಂ ತೇ ಜಿತಲೋಕಭಾವನ
ಪ್ರಪನ್ನಪಾಲಾಯ ನತಾಃ ಸ್ಮ ತೇ ವಯಂ ॥೨೧೨॥

ಅ ॥ ಆ ಮೇಲೆ ಜಗತ್ತಿಗೆ ಪಿತಾಮಹನಾದ ಬ್ರಹ್ಮನು ತನಗೆ ತಂದೆಯಾದ ಜ್ಞಾನಾನಂದಾದಿ ಗುಣಗಳಿಂದ ಮನೋಹರನಾದ ರಾಮಚಂದ್ರನನ್ನು ಅಂಜಲೀಬದ್ಧನಾಗಿ (ಅಂದರೆ, ಕೈಮುಗಿದುಕೊಂಡು) ಸ್ತೋತ್ರಮಾಡಿದನು. ಪರಾಜಯ ರಹಿತನಾದ ಲೋಕೋತ್ಪಾದಕನಾದ ರಾಮನೇ! ನಿನ್ನಿಂದ ಜಯಿಸಲ್ಪಟ್ಟಿತು; ಜಯಿಸಲ್ಪಟ್ಟಿತು. ಶರಣಾಗತಪಾಲಕನಾದ ನಿನಗೋಸ್ಕರ ನಾವು ನಮ್ರೀಭೂತರಾಗಿದ್ದೇವೆ. ॥ ೨೧೨ ॥

ಮೂ ॥ ತ್ವಮೇಕ ಈಶೋಽಸಿ ನ ಚಾದಿರಂತ-
ಸ್ತವೇಶ್ಯ ಕಾಲೇನ ತಥೈವ ದೇಶತಃ ॥
ಗುಣಾ ಹ್ಯಗಣ್ಯಾಸ್ತವ ತೇಽಪ್ಯನಂತಾಃ
ಪ್ರತ್ಯೇಕಶಶ್ಚಾದಿವಿನಾಶವರ್ಜಿತಾಃ ॥ ೨೧೩ ॥

ಅ ॥ ಎಲೋ ಸ್ತುತ್ಯನಾದ ರಾಮನೆ! ನೀನು ಮುಖ್ಯ ಸ್ವಾಮಿಯಾಗಿರುತ್ತಿದ್ದಿ. ನಿನಗೆ ಕಾಲದಿಂದಲೂ ದೇಶದಿಂದಲೂ ಉತ್ಪತ್ತಿವಿನಾಶವಿರುವುದಿಲ್ಲ. ನಿನ್ನ ಜ್ಞಾನಾನಂದಾದಿ ಗುಣಗಳು ಎಣಿಸಲಿಕ್ಕಶಕ್ಯಗಳಾಗಿದ್ದಾವೆ. ಮತ್ತು ಅವುಗಳು ಪ್ರತ್ಯೇಕವಾಗಿ ಅನಂತಗಳಾಗಿದ್ದಾವೆ. ಉತ್ಪತ್ತಿವಿನಾಶರಹಿತಗಳೂ ಆಗಿದ್ದಾವೆ. ॥ ೨೧೩ ॥

ಮೂ ॥ ನ ಚೋದ್ಭವೋ ನೈವ ತಿರಸ್ಕೃತಿಸ್ತೇ
ಕ್ವಚಿದ್ಗುಣಾನಾಂ ಪರತಃ ಸ್ವತೋ ವಾ ॥
ತ್ವಮೇಕ ಆದ್ಯಃ ಪರಮಃ ಸ್ವತಂತ್ರೋ
ಭೃತ್ಯಾಸ್ತವಾಹಂ ಶಿವಪೂರ್ವಕಾಶ್ಚ ಯೇ ॥ ೨೧೪ ॥

ಅ ॥ ನಿನ್ನ ಜ್ಞಾನಾನಂದಾದಿ ಗುಣಗಳಿಗೆ ಯಾವ ಕಾಲದಲ್ಲಿಯೂ ಅನ್ಯರಿಂದಲಾಗಲೀ, (ಅಂದರೆ ಶಾಪದಿಂದಲಾಗಲೀ ವರದಿಂದಲಾಗಲೀ) ತಿರಸ್ಕಾರವು ಇಲ್ಲವೇ ಇಲ್ಲ; ಆವಿರ್ಭಾವವೂ ಕೂಡ ಇಲ್ಲ. (ವೃದ್ಧನಿಗೆ ಸ್ವಾಭಾವಿಕವಾಗಿಯೇ ಸೌಂದರ್ಯಾದಿ ಗುಣಗಳ ತಿರಸ್ಕಾರ ದಂತೆ) ನಿನ್ನ ಗುಣಗಳಿಗೆ, ಸ್ವಾಭಾವಿಕವಾಗಿಯೂ ತಿರಸ್ಕಾರವು ಇಲ್ಲ ಬಾಲಕನಿಗೆ ಕ್ರಮಾ ದಿಂದ ಸ್ವಾಭಾವಿಕವಾಗಿಯೇ ಆವಿರ್ಭಾವದಂತೆಯೇ ಆವಿರ್ಭಾವವೂ ಇಲ್ಲ. ತಿರಸ್ಕಾರವೂ ಕೂಡ ಇಲ್ಲ. ನೀನು ಒಬ್ಬನೇ ಆದಿಪುರುಷನು, ಉತ್ತಮನು, ಸ್ವಾತಂತ್ರ್ಯವುಳ್ಳವನು. ನಾನು ನಿನ್ನ ಸೇವಕನು. ಶಿವನೇ ಮೊದಲಾಗಿವುಳ್ಳ ಯಾವ ದೇವತೆಗಳಿದ್ದಾರೋ ಅವರೂ ಕೂಡ ನಿನ್ನ ಸೇವಕರು. ॥ ೨೧೪ ॥

ಮೂ ॥ ಯಥಾರ್ಚಿಷೋ ಽಗ್ನೇಃ ಪವನಸ್ಯ ವೇಗಾ
ಮರೀಚಯೋಽರ್ಕಸ್ಯ ನದೀಷು ಚಾಪಃ ।
ಗಚ್ಛಂತಿ ಚಾಯಾಂತಿ ಚ ಸಂತತಾಶ್ಚ (ಸ್ತ್ವಂ)
ತದ್ವನ್ಮದಾದ್ಯಾಃ ಶಿವಪೂರ್ವಕಾಶ್ಚ ಯೇ ॥ ೨೧೫ ॥

ಅ ॥ ಹೇಗೆ ವಹ್ನಿಯ ಜ್ವಾಲೆಗಳು, ವಾಯುವಿನ ವೇಗಗಳು, ಸೂರ್ಯನ ಕಿರಣಗಳು, ನದಿಗಳಲ್ಲಿ ನೀರೂ ಬರುತ್ತವೋ, ಹೋಗುತ್ತವೋ, ಹಾಗೇ ನಾನೇ ಮೊದಲಾಗಿವುಳ್ಳ ಅನಾದಿ ಕಾಲಸ್ಥರಾದ, ಶಿವಪೂರ್ವಕರಾದ ದೇವತೆಗಳು ಪ್ರಳಯಕಾಲದಲ್ಲಿ ಲಯವನ್ನು ಹೊಂದಿರುತ್ತಾರೆ. ಸೃಷ್ಟಿಕಾಲದಲ್ಲಿ ಬರುತ್ತಾರೆ ॥ ೨೧೫ ॥

ಮೂ ॥ ಯೇ ಯೇ ಚ ಮುಕ್ತಾ ಸ್ತ್ವಥ ಯೇ ಚ ಬದ್ಧಾಃ
ಸರ್ವೇ ತವೇಶೇಶ ವಶೇ ಸದೈವ ॥
ವಯಂ ಸದಾ ತದ್ಗುಣಪೂಗಮುಂಚ್ಯೈಃ
ಸರ್ವೇ ವದಂತೋಽಪಿ ನ ಪಾರಗಾಮಿನಃ ॥ ೨೧೬ ॥

ಅ ॥ ಎಲೋ ರುದ್ರಾದಿ ದೇವತೆಗಳಿಗೆ ಸ್ವಾಮಿಯಾದ ರಾಮನೇ! ಯಾರ್ಯಾರು ಸಂಸಾರಾನ್ಮುಕ್ತರಾಗಿದ್ದಾರೋ (ಅಂದರೆ ವೈಕುಂಠಾದಿ ಲೋಕಗಳಲ್ಲಿದ್ದಾರೋ ಮತ್ತು ಯಾರು ತಮಸ್ಸಿನಲ್ಲಿದ್ದಾರೋ,) ಆ ಮೇಲೆ ಯಾರು ನಿತ್ಯಸಂಸಾರಿಗಳಾಗಿದ್ದಾರೊ, ಅವರೆಲ್ಲರೂ ಯಾವಾ ಗಲೂ ನಿನ್ನ ಅಧೀನದಲ್ಲಿಯೇ ಇರುವರು. ನಾವು ಎಲ್ಲರೂ ನಿನ್ನ ಜ್ಞಾನಾನಂದಾದಿ ಗುಣಗಳ ವೃಂದವನ್ನು ಯಾವಾಗಲೂ ಚೆನ್ನಾಗಿ ಹೇಳತಕ್ಕವರಾದರೂ ಕೂಡ ಅವುಗಳ ಅಂತ್ಯವನ್ನು ಹೊಂದುವವರಾಗುವುದಿಲ್ಲ. ॥ ೨೧೬ ॥

ಮೂ ॥ ಕಿಮೇಷ ಈದೃಗ್ಗುಣಕಸ್ಯ ತೇ ಪ್ರಭೋ
ರಕ್ಷೋ ವಧೋಽಶೇಷಸುರ ಪ್ರಪಾಲನಂ ।
ಅನನ್ಯಸಾಧ್ಯಂ ಹಿ ತಥಾಪಿ ತದ್ದ್ವಯಂ
ಕೃತಂ ತ್ವಯಾ ತಸ್ಯ ನಮೋ ನಮಸ್ತೇ ॥ ೨೧೭ ॥

ಅ ॥ ಸರ್ವಸಮರ್ಥನಾದ ರಾಮನೇ! ಇಂಥಾ ಜ್ಞಾನಾನಂದಾದಿ ಗುಣಗಳುಳ್ಳ ನಿನಗೆ ರಾಕ್ಷಸರುಗಳ ವಧೆಯೂ ಸಮಸ್ತರಾದ ದೇವತೆಗಳ ಪಾಲನೆಯೂ ಕೂಡ ಏನು ಆಶ್ಚರ್ಯವು?

(ಯದ್ಯಪಿ ನಿನಗೆ ಇದು ಕೇವಲ ಕ್ರೀಡೆಯು ಆದಾಗ್ಯೂ) ನಿನ್ನಿಂದ ಮಾಡಲ್ಪಟ್ಟ ರಾಕ್ಷಸರುಗಳ ವಧೆಯೂ, ದೇವತೆಗಳ ಪಾಲನೆಯೂ ಇವೆರಡೂ ಕೂಡ ನೀನು ಹೊರತು ಬೇರೆಯವರಿಂದ ಅಸಾಧ್ಯವಾಗಿದೆ. ಅಂತಹ ನಿನಗೋಸ್ಕರ ನಮಸ್ಕಾರವು ॥ ೨೧೭ ॥

ಮೂ ॥ ಇತೀರಿತೇ ತ್ವಬ್ಜಭವೇನ ಶೂಲೀ
ಸಮಾಹ್ವಯದ್ರಾಘವಮಾಹವಾಯ ॥
ವರಂ ಮದೀಯಂ ತ್ವಗಣಯ್ಯ ರಕ್ಷೋ
ಹತಂ ತ್ವಯಾ ತೇನ ರಣಾಯ ಮೈಹಿ ॥ ೨೧೮ ॥

ಅ ॥ ಹಿಂದೆ ಹೇಳಿದಪ್ರಕಾರ ಬ್ರಹ್ಮನಿಂದಲಾದರೂ ಹೇಳಲ್ಪಡುತ್ತಿರಲು, ರುದ್ರನು ಯುದ್ಧಕ್ಕಾಗಿ ಶ್ರೀ ರಾಮನನ್ನು ಕರೆದನು. ತನ್ನ ಸಂಬಂಧಿಕವಾದ ವರವನ್ನು ಗಣನಮಾಡದೆ ನಿನ್ನಿಂದ ರಾಕ್ಷಸನಾದ ರಾವಣನು ಸಂಹರಿಸಿಕೊಳ್ಳಲ್ಪಟ್ಟನು. ಆದುದರಿಂದ ಯುದ್ಧಕ್ಕಾಗಿ ನನ್ನನ್ನು ಹೊಂದು. ಹೀಗೆ ಶ್ರೀ ರಾಮನನ್ನು ಕರೆದನು ॥ ೨೧೮ ॥

ಮೂ ॥ ಇತೀರಿತೇ ಽಸ್ತ್ವಿತ್ಯಭಿಧಾಯ ರಾಘವೋ
ಧನುಃ ಪ್ರಗೃಹ್ಯಾಶು ಶರಂ ಚ ಸಂದಧೇ ॥
ವಿಕೃಷ್ಯಮಾಣೇ ಚಲಿತಾ ವಸುಂಧರಾ
ಪಪಾತ ರುದ್ರೋಽಪಿ ಧರಾಪ್ರಕಂಪತಃ ॥ ೨೧೯ ॥

ಅ ॥ ಹೀಗೆ (ರುದ್ರನು) ಹೇಳುತ್ತಿರಲು ಶ್ರೀ ರಾಮನು ಹಾಗೆಯೇ ಆಗಲಿ ಎಂದು ಹೇಳಿ ಧನುಸ್ಸನ್ನು ಹಿಡಿದು ಶೀಘ್ರದಲ್ಲಿ ಬಾಣವನ್ನು ಕೂಡಿಸಿದನು. (ಧನುಸ್ಸು) ಸೆಳೆಯಲ್ಪಡುತ್ತಿರಲು ಭೂಮಿಯು ಕಂಪಿಸಿತು. ಭೂಮಿಯ ಚಲನದೆಸೆಯಿಂದ ರುದ್ರನೂ ಕೂಡ ಬಿದ್ದನು ॥ ೨೧೯ ॥

ಮೂ ॥ ಅಥೋತ್ಥಿತಶ್ಚಾಸುರಭಾವವರ್ಜಿತಃ
ಕ್ಷಮಸ್ವ ದೇವೇತಿ ನನಾಮ ಪಾದಯೋಃ ॥
ಉವಾಚ ಚ ತ್ವದ್ವಶಗೋಽಸ್ಮಿ ಸರ್ವದಾ
ಪ್ರಸೀದ ಮೇ ತ್ವದ್ವಿಷಯಂ ಮನಃ ಕುರು ॥ ೨೨೦ ॥

ಅ ॥ ಬಿದ್ದಮೇಲೆ ಎದ್ದ ಅಸುರಭಾವದಿಂದ ಬಿಡಲ್ಪಟ್ಟ ರುದ್ರನು ಎಲೋ ಶ್ರೀ ಹರಿಯೇ! (ನಾನು ಮಾಡಿದ ಅಪರಾಧವನ್ನು) ಕ್ಷಮಿಸುವವನಾಗು, ಹೀಗೆ(ಹೇಳುತ್ತಾ) ಪಾದಗಳಲ್ಲಿ ನಮಸ್ಕರಿಸಿದನು. ಮತ್ತು ಹೇಳಿದನು(ಪ್ರಾರ್ಥಿಸಿಕೊಂಡನು( ಯಾವಾಗಲೂ ನಿನ್ನ ಅಧೀನನಾಗಿರುತ್ತೇನೆ. ಪ್ರಸನ್ನನಾಗು. ನನ್ನಮನಸ್ಸನ್ನು ನಿನ್ನಲ್ಲಿ ಆಸಕ್ತವಾದುದನ್ನಾಗಿಮಾಡು ॥ ೨೨೦ ॥

ಮೂ ॥ ಅಥೇಂದ್ರಮುಖ್ಯಾಶ್ಚ ತಮೂಚಿರೇ ಸುರಾ–
ಸ್ತ್ವಯಾವಿತಾಃ ಸ್ಮೋಽಸ್ಯ ನಿಶಾಚರಾದ್ವಯಂ ॥
ತಥೈವ ಸರ್ವಾಪದ ಏವ ನಸ್ತ್ವಂ
ಪ್ರಪಾಹಿ ಸರ್ವೇ ಭವದೀಯಕಾಃ ಸ್ಮಃ ॥ ೨೨೧ ॥

ಅ॥ ಆ ಮೇಲೆ ಇಂದ್ರನೇ ಪ್ರಧಾನನಾಗಿವುಳ್ಳ ದೇವತೆಗಳು ಆ ಶ್ರೀ ರಾಮನನ್ನು ಕುರಿತು ಹೇಳಿದರು. ನಾವು ಈಗ ನಿನ್ನಿಂದ ರಾವಣನದ್ದೆಶೆಯಿಂದ ಹೇಗೆ ರಕ್ಷಿಸಿಕೊಳ್ಳಲ್ಪಟ್ಟವರು ಆಗಿರುತ್ತೇವೋ. ಹಾಗೆಯೇ ಮೇಲೆಯೂ ಕೂಡ ನೀನು ನಮ್ಮನ್ನು ಸಮಸ್ತ ಆಪತ್ತಿನ ಸಕಾಶ ದ್ದೆಸೆಯಿಂದ ರಕ್ಷಿಸು. ನಾವೆಲ್ಲರೂ ನಿನ್ನಭಕ್ತರು ಆಗಿರುತ್ತೇವೆ ॥ ೨೨೧ ॥

ಮೂ ॥ ಸೀತಾಕೃತಿಂ ತಾಮಥ ತತ್ರ ಚಾಗತಾಂ
ದಿವ್ಯಚ್ಛಲೇನ ಪ್ರಣಿಧಾಯ ಪಾವಕೇ ।
ಕೈಲಾಸತಸ್ತಾಂ ಪುನರೇವ ಚಾಗತಾಂ
ಸೀತಾಮಗೃಹ್ಣಾ ದ್ದು ತಭುಕ್ಸಮರ್ಪಿತಾಂ ॥ ೨೨೨ ॥

ಅ॥ ಅನಂತರದಲ್ಲಿ, ತನ್ನ ಸಮೀಪಕ್ಕೆ ಬಂದಿರತಕ್ಕ, ರಾವಣನಿಂದ ಅಪಹರಿಸಿಕೊಳ್ಳಲ್ಪಟ್ಟ ಸೀತೆಯ ಪ್ರತಿಬಿಂಬವನ್ನು ಶಪಥದ ಅಥವಾ ಅಗ್ನಿಪ್ರವೇಶಾಖ್ಯವಾದ ವ್ಯಾಜದಿಂದ ಅಗ್ನಿಯಲ್ಲಿ ಪ್ರವೇಶಮಾಡಿಸಿ, ಕೈಲಾಸಪರ್ವತದೆಶೆಯಿಂದ ಬಂದಿರತಕ್ಕ ಅಗ್ನಿಯಿಂದ ಕೊಡಲ್ಪಟ್ಟ ಸೀತಾದೇವಿಯನ್ನು ಲೋಕದೃಷ್ಟ್ಯನುಸಾರ ಸ್ವೀಕರಿಸಿದನು ॥ ೨೨೨ ॥

ಮೂ ॥ ಜಾನನ್ ಗಿರೀಶಾಲಯಗಾಂ ಸ ಸೀತಾಂ
ಸಮಗ್ರಹೀತ್ಪಾವಕಸಂ ಪ್ರದತ್ತಾಂ ।
ಮುಮೋದ ಸಂಪ್ರಾಪ್ಯ ಚ ತಾಂ ಸ ರಾಮಃ
ಸಾ ಚೈವ ದೇವೀ ಭಗವಂತಮಾಪ್ಯ ॥ ೨೨೩ ॥

ಅ॥ ಆ ಶ್ರೀ ರಾಮನು ರುದ್ರನ ಮಂದಿರವಾದ ಕೈಲಾಸಪರ್ವತದಲ್ಲಿ ಇರತಕ್ಕ ಸೀತಾದೇವಿಯನ್ನು ತಿಳಿದಿರತಕ್ಕ ಶ್ರೀ ರಾಮನು ಅಗ್ನಿಯಿಂದ ಕೊಡಲ್ಪಟ್ಟ ಸೀತಾದೇವಿಯನ್ನು ಸ್ವೀಕರಿಸಿದನು. (ರಾವಣನಿಂದ ಅಪಹರಿಸಲ್ಪಟ್ಟ ಸೀತಾಕೃತಿಯನ್ನು ಸ್ವೀಕರಿಸಲಿಲ್ಲ.) ಆ ಶ್ರೀ ರಾಮನು ಆ ಸೀತಾದೇವಿಯನ್ನು ಹೊಂದಿ ಸಂತೋಷಪಟ್ಟನು. ಆ ಸೀತಾದೇವಿಯು ಶ್ರೀ ರಾಮನನ್ನು ಹೊಂದಿ ಸಂತೋಷಪಟ್ಟಳು ॥ ೨೨೩ ॥

ಮೂ ॥ ಅಥೋ ಗಿರೇರಾನಯನಾತ್ಪರಸ್ತಾದ್ಯೇ
ವಾನರಾ ರಾವಣಬಾಣಪೀಡಿತಾಃ ।
ತಾರಾಪಿತಾ ತಾನ್ನಿರುಜಶ್ಚಕಾರ
ಸುಷೇಣನಾಮಾ ಭಿಷಜಾಂ ವರಿಷ್ಠಃ ॥ ೨೨೪ ॥

ಅ॥ ಆ ಮೇಲೆ ಗಂಧಮಾದನ ಪರ್ವತದ ತರೋಣದಿಂದ ಮೇಲೆ (ಅಂದರೆ–ಗಂಧಮಾದನ ಪರ್ವತವನ್ನು ತಂದ ಮೇಲೆ) ಯಾವ ಕಪಿಗಳು ರಾವಣನ ಬಾಣದಿಂದ ಪೀಡಿಸಿಕೊಳ್ಳಲ್ಪಟ್ಟಿರುತ್ತಾರೋ, ಆ ಕಪಿಗಳನ್ನು ವಾಲಿ ಭಾರ್ಯಳಾದ ತಾರೆಯ ತಂದೆಯಾದ, ವೈದ್ಯರ ಮಧ್ಯದಲ್ಲಿ ಶ್ರೇಷ್ಠನಾದ ಸುಷೇಣನೆಂದು ಹೆಸರುಳ್ಳ ವಾನರನು ರಾವಣನ ಬಾಣದಿಂದ ಪೀಡಿಸಿಕೊಳ್ಳಲ್ಪಟ್ಟ ಕಪಿಗಳನ್ನು ನಿರೋಗಿಗಳನ್ನಾಗಿ ಮಾಡಿದನು.

**ವಿಶೇಷಾಂಶ**— ಸುಷೇಣನೂ ಕೂಡ ಅಶ್ವಿನೀದೇವತೆಗಳ ರೂಪಾಂತರವು. ಮೈಂದ ವಿವಿದರಾದರೂ ರಾಮಾವತಾರದ್ದೆಶೆಯಿಂದ ಮೊದಲೇ ಇರತಕ್ಕವರು. ಅಶ್ವಿನೀದೇವತೆಗಳ ಅವತಾರಭೂತರು. ರಾಮಾವತಾರಕಾಲದಲ್ಲಿ ಸುಷೇಣಾಖ್ಯವಾದ ರೂಪಾಂತರವು ಹುಟ್ಟಿತು. ॥ ೨೨೪ ॥

ಮೂ ॥ ತದಾ ಮೃತಾನ್ಪ್ಲವಗಾನಿನಾಯ
ಯಮಕ್ಷಯಾದ್ದೇವಗಣಾಂಶ್ಚ ಸರ್ವಶಃ
ಸಮನ್ವಜಾನಾತ್ಪಿತರಂ ಚ ತತ್ರ
ಸಮಾಗತಂ ಗಂತುಮಿಯೇಷ ಚಾಥ ॥ ೨೨೫ ॥

ಅ ॥ ಶ್ರೀ ರಾಮನು ಪರ್ವತವನ್ನು ತಂದಮೇಲೆ ಮೃತರಾದ ಕಪಿಗಳನ್ನು ಯಮ ಲೋಕದ್ದೆಸೆಯಿಂದ ತರಿಸಿದನು. ಎಲ್ಲಾ ತನ್ನನ್ನು ಸ್ತೋತ್ರಮಾಡಲಿಕ್ಕೆ ಬಂದಿರತಕ್ಕ ಬ್ರಹ್ಮಾದಿ ದೇವತೆಗಳ ಸಮೂಹಗಳನ್ನು, ತನ್ನ ಸಮೀಪಕ್ಕೆ ದೇವತೆಗಳಿಂದ ಕೂಡಿಕೊಂಡು ಮೃತರಾದವರ ಒಟ್ಟಿಗೆ ಬಂದಿರತಕ್ಕ ದಶರಥರಾಜನನ್ನು (ನಿನ್ನಸ್ಥಾನಕ್ಕೆ ಹೋಗು ಎಂದು) ಆಜ್ಞಾಪಿಸಿದನು. ಬ್ರಹ್ಮಾದಿಗಳು ಹೋದಮೇಲೆ ತಾನೂ ಕೂಡ ಅಯೋಧ್ಯಾಪಟ್ಟಣಕ್ಕೆ ಹೋಗಲಿಕ್ಕೆ ಇಚ್ಛಿಸಿದನು.

**ವಿಶೇಷಾಂಶ**— (1) ಕಪಿಗಳೆಲ್ಲರೂ ಮೃತಸಂಜೀವನಾದ್ಯೌಷಧಿಗಳಿಂದ ಬದುಕಿದು ದರಿಂದಲೂ, ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಮೊದಲೇ ಬಂದಿರುವುದರಿಂದಲೂ ಮೃತರಾದವರನ್ನು ತರಿಸಿದನು, ದೇವತೆಗಳ ಸಮೂಹಗಳನ್ನು ತರಿಸಿದನು ಎನ್ನುವುದಕ್ಕೆ ಏನು ಅರ್ಥವು? ಎಂದರೆ— ತನ್ನ ವಿಯೋಗದಿಂದ ಮೃತನಾದ ಯಮಲೋಕದಲ್ಲಿರತಕ್ಕ ತಂದೆಯಾದ ದಶರಥರಾಜನಿಗೆ ತನ್ನ ದರ್ಶನದಿಂದ ಸುಖವನ್ನು ಕೊಡುವುದಕ್ಕಾಗಿ ಯಮಲೋಕದಿಂದ ತರಿಸಿರತಕ್ಕ ಶ್ರೀ ರಾಮನು ಲೌಕಿಕಪುರುಷನಂತೆ ತನಗೆ ಬಂಧುಗಳಲ್ಲಿ ಆಸಕ್ತಿಯುಲ್ಲವೆಂದು ತಿಳಿಸಿ ಕೊಡುವುದಕ್ಕಾಗಿ ಆ ದಶರಥರಾಜನಿಂದ ಕೂಡಿಕೊಂಡು ಮೃತರಾದ ಯೋಗ್ಯರಾದ ಎಲ್ಲಾ ಜೀವರನ್ನೂ ತನ್ನ ದರ್ಶನದಿಂದ ಕೃತಾರ್ಥರನ್ನಾಗಿ ಮಾಡುವುದಕ್ಕಾಗಿ ಕರಿಸಿದನು, ಎಂದು ಒಂದು ಭಾವವು. (2) ಜೈಲಿನಲ್ಲಿರತಕ್ಕವರನ್ನು ಜೈಲಿಗೆ ಅಧಿಪತಿಗಳಾದವರಿಂದ ಒಡಗೂಡಿಯೇ ತರಿಸುವುದರಂತೆಯೇ ಯಮಪಟ್ಟಣದಲ್ಲಿರತಕ್ಕವರನ್ನೂ ಯಮಭಟರಿಂದ ಕೂಡಿಕೊಂಡೇ ತರಿಸ ಬೇಕು. ಆ ಭಟರನ್ನು ಉಲ್ಲಂಘಿಸಿ ತರಿಸುವುದಿಲ್ಲ, ಎನ್ನುವ ರಾಜನೀತಿಯನ್ನು ಪ್ರಕಟೀಕರಿಸುವು ದಕ್ಕಾಗಿ ಯಮನನ್ನೂ ದೇವತೆಗಳ ಸಮೂಹವನ್ನೂ ಕೂಡ ಒಟ್ಟಿಗೇನೇ ತರಿಸಿರುವನು ಎಂದು ಮತ್ತೊಂದು ಭಾವವು ॥ ೨೨೫ ॥

ಮೂ ॥ ವಿಭೀಷಣೇನಾರ್ಪಿತಮಾರುರೋಹ
ಸ ಪುಷ್ಪಕಂ ತತ್ಸಹಿತಃ ಸವಾನರಃ ॥
ಪುರೀಂ ಜಗಾಮಾಶು ನಿಜಾಮಯೋಧ್ಯಾಂ
ಪುರೋ ಹನೂಮಂತಮಥೋ ನ್ಯಯೋಜಯತ್ ॥ ೨೨೬ ॥

ಅ ॥ ಆ ಶ್ರೀ ರಾಮನು ವಿಭೀಷಣನಿಂದ ಸಮರ್ಪಿಸಿಕೊಳ್ಳಲ್ಪಟ್ಟ ಪುಷ್ಪಕಾಖ್ಯವಾದ ವಿಮಾನವನ್ನು ಏರಿದನು. ಆ ವಿಭೀಷಣನಿಂದ ಕೂಡಿದ, ಕಪಿಗಳಿಂದ ಸಹಿತನಾದ ಆ ಶ್ರೀರಾಮನು ಶೀಘ್ರದಲ್ಲಿ ಸ್ವಕೀಯವಾದ ಅಯೋಧ್ಯಾಪಟ್ಟಣವನ್ನು ಹೊಂದಿದನು. ಆ ಮೇಲೆ ಮುಂಭಾಗದಲ್ಲಿ ಹನುಮಂತನಿಗೆ ಅಪ್ಪಣೆಕೊಟ್ಟನು (ಅಂದರೆ ತನ್ನ ಆಗಮನವನ್ನು ಭರತನಿಗೆ ಸೂಚಿಸುವುದ ಕ್ಕಾಗಿ ಹನುಮಂತನನ್ನು ಮೊದಲೇ ಕಳುಹಿಸಿಕೊಟ್ಟನು) ॥ ೨೨೬ ॥

ಮೂ ॥ ದದರ್ಶ ಚಾಸೌ ಭರತಂ ಹುತಾಶನಂ
ಪ್ರವೇಷ್ಟುಕಾಮಂ ಜಗದೀಶ್ವರಸ್ಯ ॥
ಅದರ್ಶನಾತ್ತಂ ವಿನಿವಾರ್ಯ ರಾಮಂ
ಸಮಾಗತಂ ಚಾಸ್ಯ ಶಶಂಸ ಮಾರುತಿಃ ॥ ೨೨೭ ॥

ಅ ॥ ಈ ಹನುಮಂತನು, ಸರ್ವಜಗತ್ತಿಗೆ ನಿಯಾಮಕನಾದ ಶ್ರೀ ರಾಮನು (ಈವರೆಗೂ) ಕಾಣದೆ ಇರೋಣದರಿಂದ (ಅಂದರೆ ಶ್ರೀ ರಾಮನು ಬಾರದೆ ಇದ್ದುದರಿಂದ) ಅಗ್ನಿಯನ್ನು ಪ್ರವೇಶಿಸಲಿಕ್ಕೆ ಇಚ್ಛಿಸಿಕೊಂಡು ಇರತಕ್ಕ ಭರತನನ್ನು ಕಂಡನು. ಹನುಮಂತನು ಆ ಭರತನನ್ನು (ಅಗ್ನಿಗೆ ಪ್ರವೇಶಮಾಡಬೇಡವೆಂದು)ತಡೆದು, ಶ್ರೀರಾಮನ ಆಗಮನವನ್ನು ಕುರಿತು ಭರತನಿಗೆ ತಿಳಿಸಿದನು. (ಅಂದರೆ ಶ್ರೀ ರಾಮನು ಬಂದನು ಎಂದು ಹೇಳಿದನು) ॥ ೨೨೭ ॥

ಮೂ ॥ ಶ್ರುತ್ವಾ ಪ್ರಮೋದೋರುಭರಃ ಸ ತೇನ
ಸಹೈವ ಪೌರೈಃ ಸಹಿತಃ ಸಮಾತೃಕಃ ॥
ಶತ್ರುಘ್ನಯುಕ್ತೋಽಭಿಸಮೇತ್ಯ ರಾಘವಂ
ನನಾಮ ಬಾಷ್ಪಾಕುಲಲೋಚನಾನನಃ ॥ ೨೨೮ ॥

ಅ ॥ ಆ ಭರತನು (ಶ್ರೀರಾಮನು ಬಂದಿರುತ್ತಾನೆ ಎನ್ನುವ ಹನುಮಂತನ ವಾಕ್ಯವನ್ನು) ಕೇಳಿ ಉತ್ಕೃಷ್ಟವಾದ ಆನಂದದ ಮಹಾತಿಶಯವುಳ್ಳವನಾಗಿ ಹನುಮಂತನಿಂದ ಕೂಡಿಕೊಂಡೇ ಪಟ್ಟಣಿಗರಿಂದಲೂ, ತಾಯಿಯಿಂದಲೂ, ಶತ್ರುಘ್ನನಿಂದಲೂ ಕೂಡಿದವನಾಗಿ ಶ್ರೀರಾಮನನ್ನು ಹೊಂದಿ ಆನಂದಬಾಷ್ಪಗಳಿಂದ ಸಂಭ್ರಾಂತಗಳಾದ ಕಣ್ಣುಗಳುಳ್ಳ ಮುಖವುಳ್ಳವನಾಗಿ ಶ್ರೀ ರಾಮನನ್ನು ನಮಸ್ಕರಿಸಿದನು ॥ ೨೨೮ ॥

ಮೂ ॥ ಉತ್ಥಾಪ್ಯ ತಂ ರಘುಪತಿಃ ಸಸೃಜೇ ಪ್ರಣಯಾನ್ವಿತಃ ॥
ಶತ್ರುಘ್ನಂ ಚ ತದನ್ಯೇಷು ಪ್ರತಿಪೇದೇ ಯಥಾ ವಯಃ ॥ ೨೨೯ ॥

ಅ ॥ ಶ್ರೀ ರಾಮನು ಆ ಭರತನನ್ನು ಎಬ್ಬಿಸಿ, ಪ್ರೀತಿಯಿಂದ ಯುಕ್ತನಾದವನಾಗಿ ಆಲಿಂಗಿಸಿದನು. ಶತ್ರುಘ್ನನನ್ನೂ ಎಬ್ಬಿಸಿ ಆಲಿಂಗಿಸಿದನು. ಆ ಭರತಶತ್ರುಘ್ನರಿಂದ ಇತರರಾದ ತಾಯಿ ಮೊದಲಾದವರಲ್ಲಿ ವಯಸ್ಸನ್ನು ಅನುಸರಿಸಿ (ಅಂದರೆ ವಯೋಜ್ಯೇಷ್ಠರನ್ನು ಆರಂಭಿಸಿ) ಲೌಕಿಕಮರ್ಯಾದಾನುಸಾರವಾಗಿ ತಾನು ನಮಸ್ಕರಿಸಿದನು. ಅಥವಾ ಪ್ರಿಯವಾಕ್ಯವನ್ನು ಪ್ರತಿಪಾದಿಸಿದನು ॥ ೨೨೯ ॥

ಮೂ ॥ ಪುರೀಂ ಪ್ರವಿಶ್ಯ ಮುನಿಭಿಃ ಸಾಮ್ರಾಜ್ಯೇ ಚಾಭಿಷೇಚಿತಃ ॥
ಯಥೋಚಿತಂ ಚ ಸಮ್ಮಾನ್ಯ ಸರ್ವಾನಾಹೇದಮೀಶ್ವರಃ ॥ ೨೩೦ ॥

ಅ ॥ ಅಯೋಧ್ಯಾ ಪಟ್ಟಣವನ್ನು ಪ್ರವೇಶಮಾಡಿ ಋಷಿಗಳಿಂದ ಸಾಮ್ರಾಜ್ಯದಲ್ಲಿ ಅಭಿಷೇಕ ಮಾಡಿಸಿಕೊಳ್ಳಲ್ಪಟ್ಟ ಶ್ರೀರಾಮನು ಯಥಾಯೋಗ್ಯವಾಗಿ ಮಾನಿಸಿ ಮೇಲೆ ಹೇಳತಕ್ಕ ವಾಕ್ಯವನ್ನು ಸರ್ವರನ್ನು ಕುರಿತು ಹೇಳಿದನು ॥ ೨೩೦ ॥

ಮೂ ॥ ಸರ್ವೈರ್ಭವದ್ಭಿಃ ಸುಕೃತಂ ವಿಧಾಯ
ದೇಹಂ ಮನೋ ವಾಕ್ಸಹಿತಂ ಮದೀಯಂ ॥
ಏತಾವದೇವಾಖಿಲಸದ್ವಿಧೇಯಂ
ಯತ್ಕಾಯವಾಕ್ಚಿತ್ತಭವಂ ಮದರ್ಚನಂ ॥ ೨೩೧ ॥

ಅ ॥ ನಿಮ್ಮೆಲ್ಲರಿಂದ ಮನಸ್ಸು ವಚನಗಳಿಂದ ಕೂಡಿದ ಶರೀರವನ್ನು ನನ್ನ ಸಂಬಂಧಿ ಯವನ್ನಾಗಿ ಮಾಡಿ (ನನ್ನ ಕಾರ್ಯದಲ್ಲಿ ಸಮರ್ಪಿಸಿ,) (ಅಂದರೆ ಇಷ್ಟುಕಾಲ ತನಕ ನನಗೆ ದೇಹದಿಂದ ನಮಸ್ಕಾರವನ್ನು ಮಾಡಿ, ವಚನದಿಂದ ಸ್ತೋತ್ರವನ್ನು ಮಾಡಿ, ಮನಸ್ಸಿನಿಂದ ಧ್ಯಾನಿಸಿ) ಚೆನ್ನಾಗಿಯೇ ಮಾಡಲ್ಪಟ್ಟಿತು. (ಉದರಭರಣವನ್ನೇ ಮಾಡಿ ನಿಂತದ್ದಲ್ಲ.) ಶರೀರ ವಚನ ಮನಸ್ಸುಗಳಿಂದ ಸಂಪಾದಿಸಿಕೊಳ್ಳಲ್ಪಟ್ಟ ಯಾವ ನನ್ನ ಪೂಜೆಯು (ನಿಮ್ಮಿಂದ) ಚೆನ್ನಾಗಿ ಮಾಡಲ್ಪಟ್ಟಿತೋ. ಎಲ್ಲಾ ಸಜ್ಜನರಿಂದ ಮಾಡಲು ಯೋಗ್ಯವಾದುದು ಇಷ್ಟೇ. (ಇದಕ್ಕಿಂತ ಹೆಚ್ಚು ಇಲ್ಲವು.) ॥ ೨೩೧ ॥

ಮೂ ॥ ಮುಕ್ತಿಪ್ರದಾನಾತ್ಪ್ರತಿಕರ್ತೃತಾ ಮೇ
ಸರ್ವಸ್ಯ ಚಾಥೋ ಭವತಾಂ ಭವೇತ ॥
ಹನೂಮಂತೋ ನ ಪ್ರತಿಕರ್ತೃತಾ ಸ್ಯಾ-
ತ್ಸ್ವಭಾವಭಕ್ತಸ್ಯ ನಿರೌಪಧಂ ಮೇ ॥ ೨೩೨ ॥

ಅ ॥ ನಿಮ್ಮಿಂದ ಮಾಡಲ್ಪಟ್ಟ ಸೇವೆಯ ಮೇಲೆ ನಿಮ್ಮ ಎಲ್ಲಾದಕ್ಕೆ (ಅಂದರೆ ನಿಮ್ಮಿಂದ ಮಾಡಲ್ಪಟ್ಟ ಪೂಜೆಗೆ) ಅಥವಾ ನನ್ನ ಸೇವಾರೂಪವಾದ ಸುಕೃತಕ್ಕೆ ಮುಕ್ತಿಯನ್ನು ಕೊಡುವು ದರಿಂದ ನನಗೆ ಪ್ರತ್ಯುಪಕಾರಕತ್ವವು ಬರುವುದು. ಮೋಕ್ಷಾದಿ ಪ್ರಯೋಜನಾಪೇಕ್ಷಾರಹಿತ ಹೇಗೆ ಆದೀತೋ ಹಾಗೆ ಸ್ವಾಭಾವಿಕವಾಗಿಯೇ ನನಲ್ಲಿ ಭಕ್ತಿಯುಳ್ಳ ಹನುಮಂತನಿಗೆ ಮೋಕ್ಷವನ್ನು ಕೊಡುವುದರಿಂದ ಪ್ರತ್ಯುಪಕಾರಕತ್ವವು ಆಗಲಾರದು. (ಅಂದರೆ ಮೋಕ್ಷಾದಿ ಪುರುಷಾರ್ಥ ಗಳಲ್ಲಿ ಹನುಮಂತನಿಗೆ ಅಪೇಕ್ಷೆಯಿಲ್ಲದಿರುವುದರಿಂದ ಪ್ರತ್ಯುಪಕಾರಕತ್ವವೇ ಆಗಲಾರದು) ॥೨೩೨॥

ಸರ್ವಾಧಿಕ್ಯವನ್ನೂ ಪ್ರಕಟಿಸಿರುತ್ತಾರೆ.—

ಮೂ ॥
ಮದ್ಭಕ್ತೌ ಜ್ಞಾನಪೂರ್ತಾವನುಪಧಿಕಬಲಪ್ರೋನ್ನತಿಸ್ಥೈರ್ಯಧೈರ್ಯ
ಸ್ವಾಭಾವ್ಯಾಧಿಕ್ಯತೇಜಃ ಸುಮತಿದಮಶಮೇಷ್ವಸ್ಯ ತುಲ್ಯೋ ನ ಕಶ್ಚಿತ್ ॥
ಶೇಷೋ ರುದ್ರಃ ಸುಪರ್ಣೋಽಪ್ಯುರುಗುಣಸಮಿತಾ ನೋ ಸಹಸ್ರಾಂಶತುಲ್ಯಾ
ಅಸ್ಯೇತ್ಯಸ್ಮಾ*ನ್ಮದೀ(ದೈ)ಶಂ ಪದಮಹಮನುನಾ ಸಾರ್ಧಮೇವೋಽಪ.
ಭೋಕ್ಷ್ಯೇ ॥ ೨೩೩ ॥

ಅ ॥ ನನ್ನ ಭಕ್ತಿವಿಷಯದಲ್ಲಿಯೂ, ಸವಿಶೇಷಜ್ಞಾನಪೂರ್ಣತ್ವವಿಷಯದಲ್ಲಿಯೂ, ವರಾಸ್ತ್ರವೇಶಾದ್ಯುಪಾಧಿ ರಹಿತವಾದ ಬಲದ ಆಧಿಕ್ಯವಿಷಯದಲ್ಲಿಯೂ, ಸ್ಥಿರಭಾವದಲ್ಲಿಯೂ,

* 'ಮದಂಶಂ' ಎಂದು ವಾದಿರಾಜೀಯ ಪಾಠವು

ಧಾರ್ಷ್ಟ್ಯ ವಿಷಯದಲ್ಲಿಯೂ, ಅನ್ಯಾವೇಶನಿಮಿತ್ತರಹಿತವಾದ ಶ್ರೇಷ್ಠತ್ವದಲ್ಲಿಯೂ, ಅಥವಾ ಋಜು ಕುಲದಲ್ಲಿ ಹುಟ್ಟುವಿಕೆಯಂತೆಯೇ ಸ್ವಭಾವದಿಂದಲೇ ಸಕಲಜೀವೋತ್ತಮತ್ವ ವಿಷಯದಲ್ಲಿಯೂ. ಸಾಮರ್ಥ್ಯದಲ್ಲಿಯೂ, ಅವಧಾರಣಶಕ್ತಿಯಲ್ಲಿಯೂ, ಅಥವಾ ಅಜ್ಞಾನನಿಮಿತ್ತವಾದ ಅಹಂಕಾರ ಪರಧಿಕ್ಕಾರ ಮೊದಲಾದ ದೋಷಗಳಿಂದ ರಹಿತವಾಗಿರುವುದರಿಂದ ಶೋಭನವಾದ ಬುದ್ಧಿಯಲ್ಲಿಯೂ, ಇಂದ್ರಿಯನಿಗ್ರಹದಲ್ಲಿಯೂ, ಹರಿಯಲ್ಲಿ ಆಸಕ್ತವಾದ ಬುದ್ಧಿಯಲ್ಲಿಯೂ, ಈ ವಿಷಯಗಳಲ್ಲಿ ಹನುಮಂತನಿಗೆ ಸದೃಶನಾದವನು ಯಾರೊಬ್ಬನೂ ಇಲ್ಲ. ಈ ಹನುಮಂತನಿಗೆ ಉತ್ತಮಗಳಾದ ಗುಣಗಳ ಸಮೂಹದಲ್ಲಿ ಶೇಷನೂ, ರುದ್ರನೂ, ಗರುಡನೂ ಕೂಡ ಸಹಸ್ರ ಭಾಗದಿಂದಲೂ ಸಮನಿಕರು ಅಲ್ಲವೇ ಅಲ್ಲ ನನ್ನ ಭಕ್ತರ ಮಧ್ಯದಲ್ಲಿ ಉತ್ತಮತ್ವ ನಿಮಿತ್ತವಾಗಿ ನಾನು ಈ ಹನುಮಂತನಿಂದ ಕೂಡಿಕೊಂಡೇ ನಾನೇ ಸ್ವಾಮಿಯಾಗಿವುಳ್ಳ, ಅಥವಾ ವೈಕುಂಠಾದಿ ಲೋಕಗಳಲ್ಲಿದ್ದಂತೆಯೇ ಮಮ = ನನ್ನ. ಅಂಶಃ = ವಿಶೇಷಾಂಶವು. 'ಯಸ್ಮಿನ್' ಎನ್ನುವ ವ್ಯುತ್ಪತ್ತಿಯಿಂದ ನನ್ನ ವಿಶೇಷಾಂಶವುಳ್ಳ ಸತ್ಯಲೋಕವನ್ನು ಅನುಭವಿಸುವೆನು. (ಬ್ರಹ್ಮಲೋಕಾಧಿಪತ್ಯವನ್ನು ಕೊಡುವುದೇ ಸಪಭೋಜನವು) ॥ ೨೩೩ ॥

ತಾನು ಹೇಳಿದ ಅರ್ಥವನ್ನು ಪ್ರತಿಪಾದಿಸತಕ್ಕ ಇತಿಹಾಸವನ್ನು ಹೇಳುತ್ತಾರೆ—

ಮೂ ॥ ಪೂರ್ವಂ ಜಿಗಾಯ ಭುವನಂ ದಶಕಂಧರೋಽಸಾ-
ವಬ್ಜೋದ್ಭವಸ್ಯ ವರತೋ ನ ತು ತಂ ಕದಾಚಿತ್ ॥
ಕಶ್ಚಿಜ್ಜಿಗಾಯ ಪುರುಹೂತಸುತಃ ಕಪಿತ್ವಾ-
ದ್ವಿಷ್ಣೋರ್ವರಾದಜಯದರ್ಜುನ ಏನ ಚೈನಂ ॥ ೨೩೪ ॥

ಅ ॥ ಹತ್ತು ತಲೆಯುಳ್ಳ ಈ ರಾವಣನು ಬ್ರಹ್ಮನ ವರ ದೆಶೆಯಿಂದ ಮೊದಲು ತ್ರೈಲೋಕ್ಯವನ್ನೇ ಗೆದ್ದಿರುವನು. ಯಾವನೊಬ್ಬ ಪುರುಷನು ಯಾವಾಗಲಾದರೂ, ಆ ರಾವಣನನ್ನು ಗೆಲ್ಲಲೇ ಇಲ್ಲ. (ಈ ವಿಷಯದಲ್ಲಿ ಹೇತುಪೂರ್ವಕವಾಗಿ ಅಪವಾದವನ್ನು ಹೇಳುತ್ತಾರೆ.) ದೇವೇಂದ್ರನ ಮಗನಾದ ವಾಲಿಯು ಕಪಿಜಾತಿಯಾದುದರಿಂದ ರಾವಣನನ್ನು ಗೆದ್ದಿರುವನು. ಕಾರ್ತವೀರ್ಯಾರ್ಜುನನು ದತ್ತಾತ್ರೇಯ ರೂಪನಾದ ವಿಷ್ಣುವಿನ ವರದಿಂದಲೇ ಈ ರಾವಣನನ್ನು ಗೆದ್ದಿರುವನು.

ವಿಶೇಷಾಂಶ—(1) ಭೂಮಿಗೆ ಪ್ರದಕ್ಷಿಣೆಯನ್ನು ಮಾಡತಕ್ಕ ವಾಲಿಯು ತನ್ನನ್ನು ತಡೆಯಲಿಕ್ಕೆ ಬಂದಿರತಕ್ಕ ರಾವಣನನ್ನು ಹಿಡಿದು ತನ್ನ ಮನೆಗೆ ತೆಗೆದುಕೊಂಡು ಹೋಗಿ, ತನ್ನ ಮಗನಾದ ಅಂಗದನ ತೊಟ್ಟಿಲಿನ ಮೇಲೆ ವಿನೋದಕ್ಕಾಗಿ ಕೃತ್ರಿಮವಾದ ಗೊಂಬೆಯಂತೆ ಕಟ್ಟಿ ಹಾಕಿದನು. ಎಂದು ಕಥೆಯು ಪುರಾಣದಲ್ಲಿ ಇದೆ. (2) ಕಾರ್ತವೀರ್ಯಾರ್ಜುನನಿಗೆ ದತ್ತಾತ್ರೇಯ ರೂಪಿಯಾದ ಶ್ರೀ ಹರಿಯು ಗುರುವೆಂದು ಪುರಾಣದಲ್ಲಿದೆ. ॥ ೨೩೪ ॥

'ಕಪಿತ್ವಾತ್' ಎನ್ನುವ ಉಕ್ತಿಗೆ ಕಾರಣವನ್ನು ಹೇಳುತ್ತಾರೆ—

ಮೂ ॥ ದತ್ತೋ ವರೋ ನ ಮನುಜಾನ್ಪ್ರತಿ ನಾಕಪಾಂಶ್ಚ
ಧಾತ್ರಾಸ್ಯ ತೇನ ವಿಜಿತೋ ಯುಧಿ ವಾಲಿನೈಷಃ ॥
ಅಬ್ಜೋದ್ಭವಸ್ಯ ವರಮಾಶ್ವಭಿಭೂಯ ರಕ್ಷೋ
ಜಿಗ್ಯೇ ತ್ವಹಂ ರಣಮುಖೇ ಬಲಿನಾಪ್ಯಯಂತಂ ॥ ೨೩೫ ॥

ಅ ॥ (ಯಾವ ಕಾರಣದಿಂದ) ಚತುರ್ಮುಖ ಬ್ರಹ್ಮನಿಂದ ಈ ರಾವಣನಿಗೆ ಮನುಷ್ಯರನ್ನೂ ಕಪಿಗಳನ್ನೂ ಕೂಡ ಕುರಿತು ಅಜೇಯತ್ವ ವರವು ಕೊಡಲ್ಪಡಲೇ ಇಲ್ಲವೋ, ಆ ಕಾರಣದಿಂದ ಈ ರಾವಣನು ಯುದ್ಧದಲ್ಲಿ ವಾಲಿಯಿಂದ ಪರಾಜಿತನಾದನು. (ಮುಖ್ಯನಾದ ಪ್ರಯುಕ್ತವೂ ವಿಷ್ಣುವಿನ ವರದಿಂದಲೂ ಕಾರ್ತವೀರ್ಯಾರ್ಜುನನಿಂದಲೂ ಪರಾಜಿತನಾದನು.) (ಕಪಿತ್ವ ಮೊದಲಾದ ಉಪಾಧಿಗಳ ವಶದಿಂದ ಅವರಿಬ್ಬರಿಂದ ಪರಾಜಿತನಾದನು. ಎನ್ನುವ ಉಕ್ತಿಯಿಂದ ತನಗೂ ವಾಯುದೇವರಿಗೂ ಜಯಪ್ರಕಾರವನ್ನು ಹೇಳುತ್ತಾರೆ.) ನಾನು ರಾವಣನನ್ನು ಉದ್ದೇಶಿಸಿಕೊಂಡು (ಕೊಡಲ್ಪಟ್ಟ) ಬ್ರಹ್ಮನ ವರವನ್ನು ಶೀಘ್ರದಲ್ಲಿ ತಿರಸ್ಕರಿಸಿ, ರಣಾಂಗಣದಲ್ಲಿ ಪ್ರಹ್ಲಾದನ ಪೌತ್ರನಾದ ಬಲಿಚಕ್ರವರ್ತಿಯನ್ನು (ಯುದ್ಧಕ್ಕಾಗಿ) ಕರೆಯತಕ್ಕ ರಾವಣನನ್ನು ಗೆದ್ದಿರುವನು. ॥ ೨೩೫ ॥

ಜಯಿಸುವ ವಿಷಯದಲ್ಲಿ ಕಾರಣವನ್ನು ಹೇಳುತ್ತಾರೆ—

ಮೂ ॥ ಬಲೇರ್ದ್ವಾರಸ್ಥೋಽಹಂ ವರಮನುಸ್ತ್ಯ ಸಂಪ್ರದಾಯ ಪೂರ್ವಂ ತು ॥
ತೇನ ಮಯಾ ರಕ್ಷೋಽಸ್ತಂ ಯೋಜನ ಮಯುತಂ ಪದಾಂಗುಲ್ಯಾ ॥
॥ ೨೩೬ ॥

ಅ ॥ (ಯಾವ ಕಾರಣದಿಂದ) ತ್ರೈಲೋಕ್ಯವನ್ನು ಕೊಡುವುದಕ್ಕಿಂತ ಮೊದಲು ಈ ಬಲಿಚಕ್ರವರ್ತಿಗೋಸ್ಕರ ಸಂತುಷ್ಟನಾದ ನಾನು (ನಿನ್ನ ದ್ವಾರವನ್ನು ರಕ್ಷಿಸುತ್ತಾ ಇರುತ್ತೇನೆ ಎನ್ನುವ) ವರವನ್ನು ಕೊಟ್ಟು ನಾನು ಬಲಿಚಕ್ರವರ್ತಿಯ ದ್ವಾರದಲ್ಲಿರತಕ್ಕವನು ಆಗಿರುತ್ತೇನೋ, ಅಂದರೆ- ಬಲಿಚಕ್ರವರ್ತಿಯ ಭಕ್ತಿಯಿಂದಲೇ ದ್ವಾರದಲ್ಲಿರತಕ್ಕವನು ಆಗಿರುತ್ತೇನೆ. ಅವನ ಶಕ್ತಿಯಿಂದ ಅಲ್ಲ.) ಆ ಕಾರಣದಿಂದ ನನ್ನಿಂದ ರಾಕ್ಷಸನಾದ ರಾವಣನು ಪಾದದ ಕನಿಷ್ಠಾಂಗುಲಿಯಿಂದ ಅಯುತ (೧೦೦೦೦) ಯೋಜನಗಳನ್ನು ಅತಿಕ್ರಮಿಸಿ ನಿರಸ್ತನಾದನು. (ಅಂದರೇ ಹತ್ತು ಸಹಸ್ರ ಯೋಜನ ಪರ್ಯಂತವಾಗಿ ರಾವಣನನ್ನು ದೂರಕ್ಕೆ ಬಿಸಾಡಿದನು.) ॥ ೨೩೭ ॥

ಮೂ ॥ ಪುನಶ್ಚ ಯುದ್ಧಾಯ ಸಮಾಹ್ವಯಂತಂ
ನ್ಯಪಾತಯಂ ರಾವಣಮೇಕಮುಷ್ಟಿನಾ ॥
ಮಹಾಬಲೋಽಹಂ ಕಪಿಲಾಖ್ಯರೂಪ-
ಸ್ತ್ರಿಕೋಟಿರೂಪಃ ಪವನಶ್ಚ ಮೇ ಸುತಃ ॥ ೨೩೮ ॥

ಅ ॥ ಮಹಾ ಸಾಮರ್ಥ್ಯವುಳ್ಳ, ಕಪಿಲ ಎನ್ನುವ ರೂಪವುಳ್ಳ, (ಅಂದರೆ ಕಪಿಲಾವತಾರನಾದ) ನಾನು ಸಮಯಾಂತರದಲ್ಲಿ ಮತ್ತೂ ಮತ್ತೂ ತಿರುಗಿ ಯುದ್ಧಕ್ಕೋಸ್ಕರ ಬಲಿಚಕ್ರವರ್ತಿಯನ್ನು ಕರೆಯತಕ್ಕ ರಾವಣನನ್ನು ಒಂದೇ ಮುಷ್ಟಿಯಿಂದ ಕೆಡಹಾಕಿದನು. (ವಾಲಿ-ಕಾರ್ತವೀರ್ಯಾರ್ಜುನರಂತೆ ಅಲ್ಲ.) ಮಹಾ ಬಲಿಷ್ಠನಾದ ಮೂರು ಕೋಟಿಸಂಖ್ಯಾಕ ಚತುರ್ಭುಜಾದಿ ರೂಪಗಳುಳ್ಳ ಕಪಿಲರೂಪಿಯಾದ. ನನ್ನ ಮಗನಾದ ವಾಯುರೂಪಿಯಾದ ಹನುಮಂತನೂ ಕೂಡ ಒಂದೇ ಮುಷ್ಟಿಪ್ರಕಾರದಿಂದ ರಾವಣನನ್ನು ಭೂತಲದಲ್ಲಿ ಕೆಡಹಾಕಿದನು.

**ವಿಶೇಷಾಂಶ—** (1) **ತ್ರಿಕೋಟಿಮೂರ್ತಿಸಂಯುಕ್ತಃ ತ್ರೇತಾಯಾಂ ರಾಕ್ಷಸಾಂತಕಃ । ಹನೂಮಾನಿತಿ ವಿಖ್ಯಾತೋ ರಾಮಕಾರ್ಯ ಧುರಂಧರಃ ॥** ಎನ್ನುವ

ವಚನದ್ವಯದಿಂದ 'ತ್ರಿಕೋಟಿರೂಪಃ ಪವನಶ್ಚ ಮೇ ಸುತಃ' ಎನ್ನುವುದರಿಂದ ಹನುಮಂತನನ್ನು ಇಟ್ಟುಕೊಳ್ಳಬೇಕು (2) ಹನುಮಂತನಿಗೆ ವಾಲಿಯಂತೆ ಕಪಿತ್ವದಿಂದಲೇ ಜಯವೆಂದು ಏಕೆ ಹೇಳಬಾರದು. ಎಂದರೆ— ವಾಲಿಯು ಇಂದ್ರರೂಪನಾದುದರಿಂದ ಬ್ರಹ್ಮನ ವರವನ್ನುಲ್ಲಂಘಿಸಲಿಕ್ಕೆ ಸಾಮರ್ಥ್ಯವಿಲ್ಲದಿರುವುದರಿಂದ ಕಪಿತ್ವದಿಂದಲೇ ಜಯವು. ಹನುಮಂತನಾದರೂ ಮುಖ್ಯಪ್ರಾಣನ ಸ್ವರೂಪನಾದುದರಿಂದ, ಬ್ರಹ್ಮನಿಗೆ ಸಮಾನಿಕನಾದುದರಿಂದ ತನ್ನ ಸಾಮರ್ಥ್ಯದಿಂದಲೇ ಜಯವು; ಕಪಿತ್ವದಿಂದಲೇ ಅಲ್ಲ ಎನ್ನುವ ವಿವೇಕವು ಕೂಡುತ್ತದೆ. ॥ ೨೩೭ ॥

ಮೂ ॥ ಆವಾಂ ಸ್ವಶಕ್ತ್ಯಾ ಜಯಿನಾವಿತಿ ಸ್ಮ
ಶಿವೋ ವರಾನ್ನೋಽಜಯದೇನಮೇವ (ವಂ) ॥
ಜ್ಞಾತ್ವಾ ಸುರಾಜೇಯಮಿಮಂ ಹಿ ವವ್ರೇ
ಹರೋ ಜಯೋಯಾಹಮಮುಂ ದಶಾನನಂ ॥ ೨೩೮ ॥

ಅ ॥ ಹಿಂದೆ ಹೇಳಿದ ಕಾರಣದಿಂದ ನಾವಿಬ್ಬರೂ (ಅಂದರೆ— ನಾನೂ ವಾಯುವೂ ಕೂಡ) ಸ್ವರೂಪಬಲದಿಂದ, ಸ್ವರೂಪಶಕ್ತಿಯಿಂದಲೇ ಜಯವುಳ್ಳವರು. ರುದ್ರನು ನನ್ನ ವರದಿಂದಲೇ ಕಾರ್ತವೀರ್ಯಾರ್ಜುನನಂತೆ ಈ ರಾವಣನನ್ನು ಗೆದ್ದಿರುವನು. ರುದ್ರನು ದೇವತೆಗಳಿಂದ ಜಯಿಸಲಿಕ್ಕೆ ಅಶಕ್ಯನಾದ ರಾವಣನನ್ನು ತಿಳಿದು, ನಾನು ಈ ಕೈಲಾಸವನ್ನು ಕೀಳಲಿಕ್ಕೆ ಇಚ್ಛಿಸತಕ್ಕ ರಾವಣನನ್ನು ತಿರಸ್ಕರಿಸುವೆನು. ಈ ಪ್ರಕಾರವಾದ ವರವನ್ನು ಬೇಡಿಕೊಂಡನು. (ಸ್ಮ=) ತನಗೆ ಅನಂತ ಬಲವಿದೆ ಎನ್ನುವುದೂ, ಹನುಮಂತನಿಗೆ ಸರ್ವಜೀವರಕ್ಕಿಂತಲೂ ಅಧಿಕ ಬಲವಿದೆ ಎನ್ನುವುದೂ ಪ್ರಸಿದ್ಧವು.

**ವಿಶೇಷಾಂಶ**—(1) ಬಲೋದ್ಧತನಾದ ರಾವಣನು ರುದ್ರನಿಂದ ಕೂಡಿಕೊಂಡೇ ಕೈಲಾಸಪರ್ವತವನ್ನು ತನ್ನ ಲಂಕಾಪಟ್ಟಣಕ್ಕೆ ಒಯ್ಯುವೆನು ಎಂದು ತನ್ನ ಇಪ್ಪತ್ತು (೨೦) ಕೈಗಳಿಂದ ಪರ್ವತವನ್ನು ಸೆಳೆಯುತ್ತಿರಲು ರುದ್ರನು ಗಿರಿಸ್ತಂಭನವನ್ನು ಮಾಡಿದನು. ಆಗ ರಾವಣನು ಪರ್ವತವನ್ನು ಬಲಾತ್ಕಾರದಿಂದ ಸೆಳೆದವನಾಗಿ ತಾನೇ ಬಿದ್ದುಬಿಟ್ಟನು, ಎನ್ನುವ ಕಥೆಯು ಪುರಾಣಗಳಲ್ಲಿದೆ॥ ೨೩೮ ॥

ಮೂ ॥ ಅತಃ ಸ್ವಭಾವಾಜ್ಜಯಿನಾವಹಂ ಚ
ವಾಯುಶ್ಚ ವಾಯುರ್ಹನುಮಾನ್ಸ ಏಷಃ ॥
ಅಮುಷ್ಯ ಹೇತೋಸ್ತು ಪುರಾ ಹಿ ವಾಯುನಾ
ಶಿವೇಂದ್ರಪೂರ್ವಾ ಅಪಿ ಕಾಷ್ಠವತ್ಕೃತಾಃ ॥೨೪೯ ॥

ಅ ॥ ಆದಕಾರಣ ವರಾವೇಶಾದ್ಯುಪಾಧಿಗಳು ಇಲ್ಲದೇನೇ ಸ್ವರೂಪಸಾಮರ್ಥ್ಯದಿಂದಲೇ ಜಯವುಳ್ಳವರು- ನಾನು, ವಾಯುದೇವರು ಇಬ್ಬರೇ. (ಮಾತ್ತೊಬ್ಬನಿಲ್ಲ.) ಈ ವಾಯುದೇವರು ಹನುಮಂತನು. (ಆದಕಾರಣ ಹನುಮಂತನಿಂದ ತನ್ನ ಶಕ್ತಿಯಿಂದಲೇ ರಾವಣನು ಪರಾಜಿತನಾದನು.) (ಇತಿಹಾಸಾಂತರವನ್ನೂ ಹೇಳುತ್ತಾರೆ) ಹನುಮಂತನು ಹುಟ್ಟುವ ಕಾಲದಲ್ಲಿ ಹನುಮಂತನ ಹೇತುವಿಗಾಗಿ ವಾಯುದೇವರಿಂದ ರುದ್ರ-ಇಂದ್ರ ಮೊದಲಾದ ದೇವತೆಗಳೂ ಕೂಡ ಕಟ್ಟಿಗೆಯಂತೆ ಮಾಡಲ್ಪಟ್ಟಿರುತ್ತಾರೆ. (ಅಂದರೆ ಜಡೀಕೃತರಾಗಿರುತ್ತಾರೆ.)

**ವಿಶೇಷಾಂಶ**—(1) ಹನುಮಂತನು ಶಿಶುವಾಗಿಕೊಂಡು ಇರುವಾಗ ಇಂದ್ರನು ವಜ್ರಾಯುಧದಿಂದ ಹನುಮಂತನ ಶಿರಸ್ಸಿನಲ್ಲಿ ಹೊಡೆದಮೇಲೆ ಕುಪಿತರಾದ ಮೂಲರೂಪಿಯಾದ ವಾಯುದೇವರು ಶಿವ-ಇಂದ್ರಾದಿದೇವತೆಗಳನ್ನು ಶ್ವಾಸವನ್ನು ತಡೆದು ಕಟ್ಟಿಗೆಯಂತೆ ಚೇಷ್ಟಾರಹಿತರನ್ನಾಗಿ ಅಂದರೆ ಜ್ಞಾನರಹಿತರನ್ನಾಗಿ ಮಾಡಿರುತ್ತಾರೆ ಎಂದು ರಾಮಾಯಣದಲ್ಲಿ ಕಥೆಯಿದೆ ಹೀಗೆಯೇ ವಿಷ್ಣುಧರ್ಮೋತ್ತರದಲ್ಲಿ ಹೇಳಿರುತ್ತಾರೆ. ತಂ ಪ್ರದುದ್ರಾವ ಭಕ್ಷಾರ್ಥೀ ಸ ಶಕ್ರಂ ಕುಂಜರೋತ್ತಮಂ । ಪ್ರಾಹರತ್ತ್ರಯಾ ವಜ್ರಂ ತತಸ್ತಸ್ಯ ಸ ರಾಥಿಪಃ । ಕ್ರುದ್ಧಂಚ ಜಗತಾಂ ವಾಯುಂ ಸಾಂತಯಿತ್ವಾ ಪಿತಾಮಹಃ, ॥ ಎಂದು ॥ ೨೪೯ ॥

ಮೂ ॥ ಅತೋ ಹನೂಮಾನ್ಪದಮೇತು ಧಾತು-
ರ್ಮದಾಜ್ಞಾ ಯಾ ಸೃಷ್ಟ್ಯವನಾದಿ ಕರ್ಮ ॥
ಮೋಕ್ಷಂ ಚ ಲೋಕಸ್ಯ ಸದೈವ ಕುರ್ವ-
ನ್ಮುಕ್ತಶ್ಚ ಮುಕ್ತಾನ್ಸುಖಯನ್ಪ್ರವರ್ತತಾಂ ॥ ೨೫೦ ॥

ಅ॥ ಶೇಷಾದಿಗಳಿಂದ ಉತ್ತಮನಾದಪ್ರಯುಕ್ತ ಹನುಮಂತನು ಬ್ರಹ್ಮನ ಸ್ಥಾನವಾದ ಸತ್ಯಲೋಕಾಧಿಪತ್ಯವನ್ನು ಹೊಂದಲಿ. (ಅಲ್ಲಿರುವವನಾಗಿ) ನನ್ನ ಆಜ್ಞೆಯಿಂದ ಜಗತ್ತಿಗೆ ಉತ್ಪತ್ತಿಯು, ರಕ್ಷಣೆಯು ಮೊದಲಾದ ಸಂಹಾರಾದಿಗಳುಳ್ಳ ಕರ್ಮವನ್ನೂ ಮೋಕ್ಷವನ್ನೂ ಕೂಡ ಯಾವಾಗಲೂ ಮುಕ್ತಿಪರ್ಯಂತವಾಗಿ ಮಾಡುವವನಾಗಿ ತನ್ನ ನಿಯತಕಾಲದಲ್ಲಿ ಮುಕ್ತನಾಗಿ, ಮುಕ್ತರಾದ ಜನರನ್ನು ಅವರವರಿಗೆ ಯೋಗ್ಯವಾದ ಸ್ವರೂಪಾನಂದದಿಂದ ಸುಖಪಡಿಸುವವನಾಗಿ ಇರಲಿ । ೨೫೦ ॥

ಸಹಭೋಜನವು ಕೊಡಲ್ಪಟ್ಟಿತು ಎನ್ನುವ ಪುರಾಣದಲ್ಲಿರತಕ್ಕ ವಾಕ್ಯವಿರೋಧವನ್ನು ಪರಿಹರಿಸುತ್ತಾರೆ—

ಮೂ ॥ ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾ-
ನ್ಯನಾದ್ಯನಂತಾನಿ ಮಮೇಹ ಸಂತಿ ॥
ಮದಾಜ್ಞಾ ಯಾ ತಾನ್ಯಖಿಲಾನಿ ಸಂತಿ
ಧಾತುಃ ಪದೇ ತತ್ಸಹಭೋಗನಾಮ ॥ ೨೫೧ ॥

ಅ॥ ನನಗೆ ಯಾವುವು ಭೋಗಗಳು ಇರುತ್ತವೋ, ಈ ಜಗದ್ವಿಷಯದಲ್ಲಿ ಉತ್ಪತ್ತಿಧ್ವಂಸರಹಿತಗಳಾದ ಕರ್ಮಗಳ ಸಮೂಹಗಳು ಇರುತ್ತವೋ, ನನ್ನ ಆಜ್ಞೆಯಿಂದ ಆ ಎಲ್ಲಾ ಭೋಗಾದಿ ಕರ್ಮಗಳ ಸಮೂಹಗಳು (ಯಾವ ಕಾರಣದಿಂದ) ಬ್ರಹ್ಮನ ಪದವಿಯಲ್ಲಿರುತ್ತವೋ ಆದಕಾರಣ ಆ ಬ್ರಹ್ಮನ ಪದವಿಯು ಸಹಭೋಗವೆಂದು ಹೆಸರುಳ್ಳದ್ದು.

**ವಿಶೇಷಾಂಶ**—ಈ ಲೋಕದಲ್ಲಿ ಅನಾದ್ಯನಂತಗಳಾದ ಯಾವ ಕರ್ಮಗಳ ಸಮೂಹಗಳು ಇರುತ್ತವೋ ಆಯಾಯ ಅನಂತಾನಂತಪ್ರಾಣಿಗಳಿಂದ ಮಾಡಲ್ಪಡುವ ಪುಣ್ಯರೂಪಗಳಾದ ಆ ಕರ್ಮಗಳ ಸಮೂಹಗಳು ನನ್ನ ಅಧೀನದಲ್ಲಿ ಇರುತ್ತಾವೆ. ಅವುಗಳು ನನ್ನ ಆಜ್ಞೆಯಿಂದ ಬ್ರಹ್ಮನ ಪದವಿಯಲ್ಲಿಯೂ ಕೂಡ ಪ್ರತಿಕಲ್ಪದಲ್ಲಿಯೂ ಆಯಾಯ ಪದವನ್ನು ಹೊಂದಿದ ಬ್ರಹ್ಮರ

ವಶದಲ್ಲಿಯೂ ಕೂಡ ಇರುತ್ತವೆ ನಾವಿಬ್ಬರೇ ಸಮಸ್ತ ಪ್ರಾಣಿಗಳು ಮಾಡತಕ್ಕ ಶುಭಕರ್ಮ ಗಳಿಗೆ ಮುಖ್ಯ ಕಾರಣರು. ನಮ್ಮಿಬ್ಬರಿಗೇನೇ ಕರ್ಮದಿಂದುಂಟಾಗತಕ್ಕ ಸಾರಭೂತವಾದ ಸುಖಾಂಶಭೋಕ್ತೃತ್ವವು. ಆದಕಾರಣ ಆ ಕರ್ಮಕ್ಕೆ ಫಲಭೂತಗಳಾದ ಯಾವವು ಸುಖಾ ನುಭವಗಳು ಇರುತ್ತಾವೋ ಅವುಗಳೆಲ್ಲವೂ ನನಗೆ ಇರುತ್ತವೆ. ಕ್ರೀಡೆಯಿಂದ ಬೋಧದಿಂದ ಬಾಧಕತ್ವವಿಲ್ಲದಿರುವುದರಿಂದ ಮುಖ್ಯವಾಗಿಯೇ ನನಗೆ ಇರುತ್ತವೆ. ಬ್ರಹ್ಮನ ಪದವಿಯಲ್ಲಿರತಕ್ಕ ವರಿಗೂ ಸುಖಾನುಭವಗಳು ಇರುತ್ತವೆ. ಆ ಎಲ್ಲಾ ಭೋಗಗಳನ್ನು ಬ್ರಹ್ಮನಿಂದ ಕೂಡಿಕೊಂಡು ಬ್ರಹ್ಮಾಂತರ್ಯಾಮಿಯಾಗಿ ನಾನು ಭೋಜಿಸುತ್ತೇನೆ. ಆದುದರಿಂದ ಬ್ರಹ್ಮನ ಪದವಿಗೆ ಸಹಭೋಗವೆಂದು ಹೆಸರು ॥ ೨೪೧ ॥

ಮೂ ॥ ಏತಾದೃಶಂ ಮೇ ಸಹಭೋಜನಂ ತೇ
ಮಯಾ ಪ್ರದತ್ತಂ ಹನುಮನ್ಸದೈವ ॥
ಇತೀರಿತಸ್ತಂ ಹನುಮಾನ್ಪ್ರಣಮ್ಯ
ಜಗಾದ ವಾಕ್ಯಂ ಸ್ಥಿರಭಕ್ತಿನಮ್ರಃ ॥ ೨೪೨ ॥

ಅ ॥ ಎಲೋ ಹನುಮಂತನೇ! ಇಂತಹ ಸತ್ಯಲೋಕಾಧಿಪತ್ಯಾತ್ಮಕವಾದ ನನ್ನ ಸಹ ಭೋಜನವು ನನ್ನಿಂದ ನಿನಗೆ ಸರ್ವ ಕಲ್ಪಗಳಲ್ಲಿಯೂ ಕೊಡಲ್ಪಟ್ಟಿತು. ಈ ಪ್ರಕಾರ(ರಾಮನಿಂದ) ಹೇಳಿಸಿಕೊಳ್ಳಲ್ಪಟ್ಟ ನಿಶ್ಚಲವಾದ ಭಕ್ತಿಯಿಂದ ನಮ್ರಭೂತನಾದ ಹನುಮಂತನು ಆ ಶ್ರೀ ರಾಮ ದೇವರನ್ನು ನಮಸ್ಕರಿಸಿ ವಾಕ್ಯವನ್ನು ಹೇಳಿದನು. ॥ ೨೪೨ ॥

ಮೂ ॥ ಕೋನ್ವೀಶ ತೇ ಪಾದಸರೋಜಭಾಜಾಂ
ಸುದುರ್ಲಭೋಽರ್ಥೇಷು ಚತುರ್ಷ್ವಪೀಹ
ತಥಾಪಿ ನಾಹಂ ಪ್ರವೃಣೋಮಿ ಭೂಮ-
ನ್ಭವತ್ಪದಾಂಭೋಜನಿಷೇವಣಾದೃತೇ ॥ ೨೪೩ ॥

ಅ ॥ ಸರ್ವಸಮರ್ಥನಾದ ಶ್ರೀ ಹರಿಯೇ! ನಿನ್ನಪಾದಕಮಲವನ್ನು ಹೊಂದಿಕೊಂಡು ಇರುವ, ನಿನ್ನನ್ನು ಉಪಾಸನಾಮಾಡುವವರಿಗೆ ಈ ಸಂಸಾರದಲ್ಲಿ ಧರ್ಮ-ಅರ್ಥ-ಕಾಮ-ಮೋಕ್ಷ ವೆನ್ನುವ ನಾಲ್ಕು ಪುರುಷಾರ್ಥಗಳಲ್ಲಿಯೂ, ಅತಿಪ್ರಯಾಸಸಾಧ್ಯವಾದುದು ಯಾವ ಪುರು ಷಾರ್ಥವಿದೆ? (ಯಾವುದೂ ಇಲ್ಲ.) ಎಲೋ ಸರ್ವಗುಣಪರಿಪೂರ್ಣನೇ! ಪುರುಷಾರ್ಥಗಳು ಪ್ರಯಾಸವಿಲ್ಲದೇನೇ ಸಿಗುವುದಾದರೂ ನಾನು ನಿನ್ನ ಪಾದಕಮಲದ ಉಪಾಸನೆಯ ಹೊರತು ಬೇರೆ ಪುರುಷಾರ್ಥವನ್ನು ಸ್ವೀಕರಿಸುವುದಿಲ್ಲ ॥ ೨೪೩ ॥

ಮೂ ॥ ತ್ವಮೇವ ಸಾಕ್ಷಾತ್ಪರಮಃ ಸ್ವತಂತ್ರ
ಸ್ತ್ವಮೇವ ಸಾಕ್ಷಾದಖಿಲೋರುಶಕ್ತಿಃ ॥
ತ್ವಮೇವ ಚಾಗಣ್ಯಗುಣಾರ್ಣವಃ ಸದಾ
ರಮಾವಿರಿಂಚಾದಿಭಿರಪ್ಯಶೇಷೈಃ ॥ ೨೪೪ ॥

ಅ ॥ ನೀನೇ ಮುಖ್ಯವಾಗಿ ಸರ್ವೋತ್ತಮನು, ಸರ್ವಸ್ವತಂತ್ರನು. ನೀನೇ ಮುಖ್ಯವಾಗಿ ಸರ್ವವಿಷಯದಲ್ಲಿ ಉತ್ಕೃಷ್ಟವಾದ ಶಕ್ತಿಯುಳ್ಳವನು. ಯಾವಾಗಲೂ ಎಲ್ಲಾ ರಮಾ-ವಿರಿಂಚಾದಿಗಳಿಂದಲೂ ಎಣಿಕೆಮಾಡಲಿಕ್ಕೆ ಅಶಕ್ಯಗಳಾದ ಅನಂತಗಳಾದ ಗುಣಗಳಿಂದ ಸಮುದ್ರವಂತಿರುವನು ॥ ೨೫೪ ॥

'ಅಗಣ್ಯಗುಣಾರ್ಣವಃ' ಎಂದು ಹೇಳಿದ್ದನ್ನು ವಿವರಿಸುತ್ತಾರೆ.—

ಮೂ ॥ ಸಮೇತ್ಯ ಸರ್ವೇಽಪಿ ಸದಾ ವದಂತೋಽ-
ಪ್ಯನಂತಕಾಲಾಚ್ಚ ನ ವೈ ಸಮಾಪ್ನುಯುಃ ॥
ಗುಣಾಂಸ್ತ್ವದೀಯಾನ್ಪರಿಪೂರ್ಣಸೌಖ್ಯ
ಜ್ಞಾನಾತ್ಮಕಸ್ತ್ವಂ ಹಿ ಸದಾತಿಶುದ್ಧಃ ॥ ೨೫೫ ॥

ಅ ॥ ಎಲ್ಲಾ ಮುಕ್ತಾಮುಕ್ತ ಬ್ರಹ್ಮಾದಿಗಳೂ, ನಿತ್ಯಮುಕ್ತಳಾದ ಲಕ್ಷ್ಮೀದೇವಿಯೂ ಕೂಡ ಒಟ್ಟುಗೂಡಿ ನಿನ್ನ ಸಂಬಂಧಿಗಳಾದ ಗುಣಗಳನ್ನು ಅನಂತಕಾಲದೆಶೆಯಿಂದ ವರ್ಣಿಸುತ್ತಾ ಇದ್ದಾಗ್ಯೂ ನಿಶ್ಚಯವಾಗಿಯೂ (ಯಾವಕಾರಣದಿಂದ) ಸಮಾಪ್ತಿಯನ್ನು ಹೊಂದಲಾರರೋ, ಆದಕಾರಣ ಯಾವಾಗಲೂ ನೀನು ಸಂಪೂರ್ಣ ಆನಂದಜ್ಞಾನ ಸ್ವರೂಪವುಳ್ಳವನು. ಅತಿ ಪವಿತ್ರನು. (ಅಂದರೆ ಕಲಂಕರಹಿತನು.) ॥ ೨೫೫ ॥

ಮೂ ॥ ಯಸ್ತೇ ಕಥಾಸೇವಕ ಏವ ಸರ್ವದಾ
ಸದಾ ರತಿಸ್ತ್ವಯ್ಯಚಲೈಕಭಕ್ತಿಃ ॥
ಸ ಜೀವನಾನೋ ನ ಪರಃ ಕಥಂಚಿ-
ತ್ತಜ್ಜೀವನಂ ಮೇಽಸ್ತ್ವಧಿಕಂ ಸಮುಸ್ತಾತ್ ॥ ೨೫೬ ॥

ಅ ॥ ಯಾವಾತನು ಯಾವಾಗಲೂ ನಿನ್ನ ಗುಣತವರ್ಗಗಳನ್ನು ಹೊಗಳತಕ್ಕ ಕಥೆಯನ್ನು ಸೇವಿಸುತ್ತಾ ಇದ್ದಾನೋ, ನಿನ್ನಲ್ಲಿ ಯಾವಾಗಲೂ ಪ್ರೀತಿಯುಳ್ಳವನೋ ಅಥವಾ(ರತಿಃ= ಪರಮಾತ್ಮನಿಂದ ಕೂಡಿಕೊಂಡು ಅವತಾರಾದಿಗಳಲ್ಲಿಯೂ, ಪ್ರತಿ ಶರೀರಗಳಲ್ಲಿಯೂ ಕೂಡಿಕೊಂಡು ಕ್ರೀಡೆಯು.) ನಿನ್ನಲ್ಲಿ ಸ್ಥಿರವಾದ ಮುಖ್ಯವಾದ ಭಕ್ತಿಯುಳ್ಳವನೋ, ಅಂತಹ ಪುರುಷನೇ ಜೀವನ ಫಲವುಳ್ಳವನೇ. (ಅಂದರೆ ಅಂತಹ ಪುರುಷನ ಜೀವನವೇ ಸಾರ್ಥಕವಾದುದು.) ಕಥಾಶ್ರವಣಾದಿ ಗುಣಗಳಿಂದ ವಿಶಿಷ್ಟನಾದ ಪುರುಷನದೆಶೆಯಿಂದ ಇತರನಾದ ಪುರುಷನು ಯಾವಪ್ರಕಾರದಿಂದಲೂ ಜೀವನಫಲವುಳ್ಳವನು ಆಗುವುದೇ ಇಲ್ಲ (ಅಂದರೆ ಜೀವನ್ಮೃತನು.) ಅಂತಹ ಜೀವನವು ನನಗೆ ಸದುಸ್ತಜೀವರ ಸಮೂಹದೆಶೆಯಿಂದ ಅಧಿಕವು ಹೇಗೆ ಆದೀತೋ ಹಾಗೆ ಆಗಲಿ ॥ ೨೫೬ ॥

ಮೂ ॥ ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ
ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ ॥
ಅನುಗ್ರಹಸ್ತೇ ಮಯಿ ಚೈವಮೇವ
ನಿರೌಪಧೌ ತೌ ಮಮ ಸರ್ವಕಾಮಃ ॥ ೨೫೭ ॥

ಅ ॥ ಸರ್ವಸ್ವಾಮಿಯಾದ ಶ್ರೀ ರಾಮನೇ! ಎಲ್ಲದಕ್ಕೂ ಹಾನಿಕರಗಳಾದ ಕಾಮಕ್ರೋಧಾದಿ ದೋಷಗಳಿಂದ ವಿರಹಿತವಾದ ನಿನ್ನಲ್ಲಿರತಕ್ಕ ನನ್ನ ಭಕ್ತಿಯು ಯಾವಾಗಲೂ ಮುಕ್ತಿ ಪರ್ಯಂತವಾಗಿ ಪ್ರತಿಕ್ಷಣದಲ್ಲಿಯೂ ನನಗೆ ಯೋಗ್ಯತಾಪೂರ್ತಿಯು ಹೇಗೆ ಆಗುವುದೋ ಹಾಗೆಯೇ ವೃದ್ಧಿಯನ್ನು ಹೊಂದಲಿ. ಹೀಗೆಯೇ ನಿನ್ನ ಅನುಗ್ರಹವು ನನ್ನಲ್ಲಿ ಅಭಿವೃದ್ಧಿಯಾಗಲಿ. ನಿರುಪಾಧಿಕಗಳಾದ ಭಕ್ತ್ಯನುಗ್ರಹಗಳೇ ನನಗೆ ಸಮಸ್ತ ಪುರುಷಾರ್ಥವು.

**ವಿಶೇಷಾಂಶ**—(1) ನಿರುಪಾಧಿಕಗಳಾದ ಭಕ್ತ್ಯನುಗ್ರಹಗಳೇ ನನಗೆ ಸಮಸ್ತಾಭೀಷ್ಟವು. ಹೇಗೆಂದರೆ ಶ್ರೀ ಹರಿಯು ದ್ರವ್ಯವನ್ನು ಕೊಡುತ್ತಾನೆಂದು ನಾನು ಯಾವಾಗಲೂ ಭಕ್ತಿಯನ್ನು ಮಾಡಕೂಡದು. ಮಾತ್ರ ನನಗೆ ನೀನೇ ಸ್ವಾಮಿಯು ಎಂದೇ ನಿನ್ನಲ್ಲಿ ಭಕ್ತಿಯು ಉಂಟಾಗಲಿ. ಹಣವನ್ನು ಕೊಡುತ್ತಾನೆಂದು ನೀನೂ ಅನುಗ್ರಹಮಾಡಕೂಡದು. ಏಕೆಂದರೆ ನಿನ್ನ ಭಕ್ತರಾದ ಸನಕಾದಿಗಳಲ್ಲಿ ವಿತ್ತವೇ ಇಲ್ಲ ಅಲ್ಲದೆ ಹಣವಂತನಾದ ದುರ್ಯೋಧನನನ್ನು ಬಿಟ್ಟು ನಿರ್ಧನನಾದ ವಿದುರನಲ್ಲಿ ನಿನ್ನ ಅನುಗ್ರಹವೂ ಕಂಡದೆ. ಆದುದರಿಂದ ಅನಾದ್ಯನಂತ ಕಾಲಗಳನ್ನು ಆರಂಭಿಸಿ ಇವನು ನನ್ನಭಕ್ತನು ಎಂದೇ ನೀನೂಕೂಡ, ಅನುಗ್ರಹವನ್ನು ಮಾಡು. (2) ಆದುದರಿಂದಲೇ ಯಮುನು ಹೇಳಿರುವನು— '**ದ್ರವಾಣ್ಯಾಮುಷ್ಯಭಾವೇ ತು ಸಲಿಲೇನಾಪಿ ಪೂಜಿತಃ । ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ**' ಎಂದು (3) ಮತ್ತು ನಿನ್ನಿಂದಲೇ ಗೀತೆಯಲ್ಲಿ ಹೇಳಲ್ಪಟ್ಟದೆ. '**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ । ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ**' ಎಂದು. (4) ಭಾಗವತದಲ್ಲಿ ಏಕಾಂತ ಭಕ್ತನಾದ ಪ್ರಹ್ಲಾದನೂ ಹೇಳಿರುತ್ತಾನೆ. '**ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ ಮಾನಂ ಜನಾದವಿದುಷಃ ಕರುಣೋ ವೃಣೀತೇ । ಯದ್ಯಜ್ಜನೋ ಭಗವತೇ ವಿದಧೀತ ಮಾನಂ ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ**' ಎಂದು ॥ ೨೪೭ ॥

ಮೂ ॥　ಇತೀರಿತಸ್ತಸ್ಯ ದದೌ ಸ ತದ್ದ್ವಯಂ
ಪದಂ ವಿಧಾತುಃ ಸಕಲಂ (ಲೈಶ್ಚ) ಚ ಶೋಭನಂ ॥
ಸಮಾಶ್ಲಿಷಜ್ಜೈನಮುಥಾರ್ದ್ರಯಾ ಧಿಯಾ
ಯಥೋಚಿತಂ ಸರ್ವಜನಾನಪೂಜಯತ್ ॥ ೨೪೮ ॥

ಅ ॥ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಆ ಶ್ರೀ ರಾಮನು ಹನುಮಂತನಿಗೆ ಆ ಎರಡನ್ನು (ಅಂದರೆ ಭಕ್ತ್ಯನುಗ್ರಹಗಳನ್ನು) ಕೊಟ್ಟನು. ಬ್ರಹ್ಮನ ಪದವಿಯನ್ನು (ಅಂದರೆ ಸತ್ಯಲೋಕಾಧಿಪತ್ಯವನ್ನೇ) ಕೊಟ್ಟನು ಮತ್ತು ಮಂಗಲರೂಪವಾದ ಎಲ್ಲಾ ಭೋಗಾದಿಗಳನ್ನು ಕೊಟ್ಟನು. ಅಥವಾ ಬ್ರಹ್ಮನ ಪದವಿಯನ್ನೂ ಸರ್ವ ಜನರಿಂದ ಮಾಡಲ್ಪಡತಕ್ಕ ಶೋಭನವಾದ ಪುಣ್ಯವನ್ನೂ ಪುಣ್ಯಫಲವನ್ನೂ ಕೂಡ ಕೊಟ್ಟನು. ಆ ಮೇಲೆ ಸ್ನೇಹದಿಂದ ಕ್ಲಿನ್ನವಾದ ಬುದ್ಧಿಯಿಂದ (ಅಂತಃಕರಣದಿಂದ) ಈ ಹನುಮಂತನನ್ನು ಆಲಿಂಗಿಸಿಕೊಂಡನು. ಹಾಗೆಯೇ ವಾನರ, ಪೌರ, ಜಾನಪದ ಮೊದಲಾದ ಎಲ್ಲಾ ಭಕ್ತಜನರನ್ನೂ ಯಥಾಯೋಗ್ಯವಾಗಿ ಪೂಜಿಸಿದನು. (ಅಂದರೆ ವಸ್ತ್ರಾಭರಣಾದಿಗಳಿಂದ ಸಂತೋಷೀಕರಿಸಿದನು.) ॥ ೨೪೮ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ಕೃತೇ) ವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ಶ್ರೀ ರಾಮಚರಿತೇ
ಯುದ್ಧಕಾಂಡಕಥಾನಿರೂಪಣಂ ನಾಮಾಷ್ಟಮೋಽಧ್ಯಾಯಃ

ಈ ಪ್ರಕಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ
ನಿರ್ಮಿಸಿಕೊಳ್ಳಲ್ಪಟ್ಟ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ
ಶ್ರೀ ರಾಮ ಚರಿತ್ರೆಯಲ್ಲಿ ಯುದ್ಧಕಾಂಡಕಥಾನಿರೂಪಣವೆನ್ನುವ
ಎಂಟನೇ ಅಧ್ಯಾಯವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ಒಂಭತ್ತನೇ ಅಧ್ಯಾಯವು.

---

ಮೂ ॥ ಓಂ ಅಥಾಪ್ತರಾಜ್ಯೋ ಭಗವಾನ್ಸ ಲಕ್ಷ್ಮಣಂ
ಜಗಾದ ರಾಜಾ ತರುಣೋ ಭವಾಶು ॥
ಇತೀರಿತಸ್ತ್ವಾಹ ಸ ಲಕ್ಷ್ಮಣೋ ಗುರುಂ
ಭವತ್ಪದಾಬ್ಜಾನ್ನ ಪರಂ ವೃಣೋವ್ಮ್ಯಹಂ ॥ ೧ ॥

ಅ ॥ ಯಥಾಯೋಗ್ಯವಾಗಿ ಸರ್ವಜನರನ್ನು ಪೂಜಿಸಿಡ ಮೇಲೆ ಹೊಂದಲ್ಪಟ್ಟ ಸಾಮ್ರಾಜ್ಯವುಳ್ಳ ಪೂಜ್ಯರಾದ ಶ್ರೀ ರಾಮಚಂದ್ರದೇವರು ಲಕ್ಷ್ಮಣನನ್ನು ಕುರಿತು ಶೀಘ್ರದಲ್ಲಿ ಯುವರಾಜನಾಗು ಎಂದು ಹೇಳಿದರು. ಹೀಗೆ(ರಾಮಚಂದ್ರದೇವರಿಂದ) ಹೇಳಿಸಿಕೊಳ್ಳಲ್ಪಟ್ಟ ಆ ಲಕ್ಷ್ಮಣನು ನಿಮ್ಮ ಚರಣಕಮಲದೆಸೆಯಿಂದ ಇತರವಾದ ವಿಷಯಸೇವನವನ್ನು ಅಂಗೀಕರಿಸುವುದಿಲ್ಲ. ಹೀಗೆ ಮುಖ್ಯಗುರುಗಳಾದ ಶ್ರೀ ರಾಮಚಂದ್ರದೇವರನ್ನು ಕುರಿತು ಹೇಳಿದನು. (ಯುಧಿಷ್ಠಿರನು ಜ್ಯೇಷ್ಠನಾದ ಪ್ರಯುಕ್ತ ಭೀಮಾರ್ಜುನರಿಗೆ ಹೇಗೆ ಗುರುವೋ ಹಾಗೆ ಅಲ್ಲ. ಮತ್ತೆ ಮುಖ್ಯ ಗುರುವೇ ಆಗಿರುತ್ತಾರೆ) ॥ ೧ ॥

ಮೂ ॥ ನ ಮಾಂ ಭವತ್ಪಾದನಿಷೇವಣೈಕ
ಸ್ಪೃಹಂ ತದನ್ಯತ್ರ ನಿಯೋಕ್ತುಮರ್ಹಸಿ (ಶಿ) ॥
ನ ಹೀದೃಶಃ ಕಶ್ಚಿದನುಗ್ರಹಃ ಕ್ವಚಿ-
ತ್ತದೇವ ಮೇ ದೇಹಿ ತತಃ ಸದೈವ ॥ ೨ ॥

ಅ ॥ ನಿನ್ನ ಪಾದಗಳ ಸೇವೆಯಲ್ಲಿಯೇ ಮುಖ್ಯವಾದ ಇಚ್ಛೆಯುಳ್ಳ ನನ್ನನ್ನು ಪಾದಗಳ ಶುಶ್ರೂಷೆಯಿಂದ ಇತರ ವಿಷಯದಲ್ಲಿ ಆಜ್ಞಾಪಿಸಲಿಕ್ಕೆ ಯೋಗ್ಯನಾಗುವುದಿಲ್ಲ ಎಲ್ಲಿಯೂ ಇಂತಹ ಸೇವಾಪ್ರಧಾನರೂಪವಾದ ಯಾವುದೊಂದು ಅನುಗ್ರಹವೂ ಇಲ್ಲ. ಆ ಕಾರಣದಿಂದ ಯಾವಾಗಲೂ ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ ಇಂತಹ ಅನುಗ್ರಹ ಕರಣವನ್ನೇ ಕೊಡು· ಅಥವಾ ನಿನ್ನ ಪಾದಸೇವೆಯನ್ನೇ ಕೊಡು ॥ ೨ ॥

ಮೂ ॥ ಇತೀರತಸ್ತಸ್ಯ ತದೇವ ದತ್ವಾ
ದೃಢಂ ಸಮಾಶ್ಲಿಷ್ಯ ಚ ರಾಘವಃ ಪ್ರಭುಃ ॥
ಸ ಯೌವರಾಜ್ಯೇ ಭರತಂ ನಿಧಾಯ
ಜುಗೋಪ ಲೋಕಾನಖಿಲಾನ್ಸಧರ್ಮಕಾನ್ ॥ ೩ ॥

ಅ ॥ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ಸರ್ವಸಮರ್ಥನಾದ ಶ್ರೀ ರಾಮನು ಆ ಲಕ್ಷ್ಮಣನಿಗೆ ಪಾದಸೇವೆಯನ್ನೇ ಕೊಟ್ಟು, ಚೆನ್ನಾಗಿ ಅಪ್ಪಿಕೊಂಡು, ಯುವರಾಜಪದವಿಯಲ್ಲಿ ಭರತನನ್ನು ಸ್ಥಾಪಿಸಿ, ಆಯಾಯ ವರ್ಣಗಳಿಗೂ, ಆಶ್ರಮಗಳಿಗೂ ಯೋಗ್ಯಗಳಾದ ಧರ್ಮಗಳುಳ್ಳ ಅಥವಾ ತಮ್ಮ ತಮ್ಮ ಧರ್ಮಗಳಿಂದ ಕೂಡಿದ ಎಲ್ಲಾ ಲೋಕಗಳನ್ನೂ ರಕ್ಷಿಸಿದನು.

(ಅಂದರೆ — ಹೇಗೆ ಎಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿ ಆಸಕ್ತರಾಗುತ್ತಾರೋ ಹಾಗೆಯೇ ರಕ್ಷಿಸುತ್ತಾ ಇದ್ದನು) ॥ ೩ ॥

ಮೂ ॥ ಪ್ರಶಾಸತೀಶೇ ಪೃಥಿವೀ ಬಭೂವ
ವಿರಿಂಚಲೋಕಸ್ಯ ಸಮಾ ಗುಣೋನ್ನತೌ ॥
ಜನೋಽಖಿಲೋ ವಿಷ್ಣುಪರೋ ಬಭೂವ
ನ ಧರ್ಮಹಾನಿಶ್ಚ ಬಭೂವ ಕಸ್ಯಚಿತ್ ॥ ೪ ॥

ಅ ॥ ಸರ್ವಸ್ವಾಮಿಯಾದ ಶ್ರೀ ರಾಮನು (ಭೂಮಿಯನ್ನು) ಚೆನ್ನಾಗಿ ಆಳುತ್ತಿರಲು, ಭೂಮಿಯು ಗುಣಗಳ ಉತ್ಕರ್ಷ ವಿಷಯದಲ್ಲಿ ಬ್ರಹ್ಮಲೋಕಕ್ಕೆ ಸಮಾನವಾಯಿತು. (ಗುಣೋನ್ನತಿ ಪ್ರವೃತ್ತಿಯನ್ನು ಸ್ಪಷ್ಟೀಕರಿಸುತ್ತಾರೆ.) ಎಲ್ಲಾ ಜನರೂ ವಿಷ್ಣುವೇ ಉತ್ಕೃಷ್ಟನಾಗಿ ಉಳ್ಳವರು ಆದರು. ಯಾರಿಗೂ ವಿಹಿತ ಧರ್ಮಗಳ ತ್ಯಾಗವು ಆಗಲಿಲ್ಲ ॥ ೪ ॥

ಮೂ ॥ ಗುಣೈಶ್ಚ ಸರ್ವೈರುದಿತಾಶ್ಚ ಸರ್ವೇ
ಯಥಾ ಯಥಾ ಯೋಗ್ಯತಯೋಚ್ಚನೀಚಾಃ ॥
ಸಮಸ್ತರೋಗಾದಿಭಿರುಜ್ಝಿತಾಶ್ಚ
ಸರ್ವೇ ಸಹಸ್ರಾಯುಷ ಊರ್ಜಿತಾ ಧನೈಃ ॥ ೫ ॥

ಅ ॥ ಎಲ್ಲಾ ಸಜ್ಜನರೂ ಹೇಗೆ ತಮ್ಮ ತಮ್ಮ ಸ್ವರೂಪಯೋಗ್ಯತೆಯಿಂದ ಉತ್ತಮರೂ ಅಧಮರೂ ಆಗಿರುತ್ತಾರೋ, ಹಾಗೆಯೇ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಜ್ಞಾನಭಕ್ತಿ ಸಂಪದಾದಿ ಎಲ್ಲಾ ಗುಣಗಳಿಂದಲೂ ಆವಿರ್ಭೂತರಾಗಿರುತ್ತಾರೆ. ಎಲ್ಲಾ ರೋಗಗಳೂ ಮನೋವ್ಯಥೆಯೂ ಇತ್ಯಾದಿಗಳಿಂದ ರಹಿತರೂ ಆಗಿರುತ್ತಾರೆ. ಎಲ್ಲರೂಕೂಡ ಸಹಸ್ರವರ್ಷ ಪರಿಮಿತವಾದ ಆಯುಷ್ಯವುಳ್ಳವರೂ, ದ್ರವ್ಯಗಳಿಂದ ಉತ್ಕೃಷ್ಟರೂ ಆಗಿರುತ್ತಾರೆ ॥ ೫ ॥

ಮೂ ॥ ಸರ್ವೇ ಜನಾ (ಽಜರಾ) ನಿತ್ಯಬಲೋಪಪನ್ನಾ
ಯಥೇಷ್ಟಸಿದ್ಧ್ಯಾ ಚ ಸದೋಪಪನ್ನಾಃ ॥
ಸಮಸ್ತದೋಷೈಶ್ಚ ಸದಾ ವಿಹೀನಾಃ
ಸರ್ವೇ ಸುರೂಪಾಶ್ಚ ಸದಾ ಮಹೋತ್ಸವಾಃ ॥ ೬ ॥

ಅ ॥ ಎಲ್ಲಾ ಜನರೂ ಕೂಡ ಮುಪ್ಪು ಇಲ್ಲದಿದ್ದವರು. ನಿತ್ಯವಾದ ಸಾಮರ್ಥ್ಯದಿಂದ ಕೂಡಿದವರು. ಯಾವು ಯಾವುದು ಅಭೀಷ್ಟವೋ ಅದರ ಪ್ರಾಪ್ತಿಯಿಂದ ಕೂಡಿದವರು. ಎಲ್ಲಾ ಒಂಭತ್ತು ವಿಧಗಳಾದ ದ್ವೇಷರೂಪಗಳಾದ ದೋಷಗಳಿಂದ ಅಥವಾ ರಾಗಾದಿಗಳಿಂದ ಯಾವಾಗಲೂ ರಹಿತರಾಗಿರುತ್ತಾರೆ. ಎಲ್ಲರೂ ಶೋಭನವಾದ ರೂಪವುಳ್ಳವರ; ಯಾವಾಗಲೂ ಮಹೋತ್ಸವವುಳ್ಳವರು ॥ ೬ ॥

ಮೂ ॥ ಸರ್ವೇ ಮನೋವಾಕ್ತನುಭಿಃ ಸದೈವ
ವಿಷ್ಣುಂ ಯಜಂತೇ ನ ತು ಕಂಚಿದನ್ಯಂ ॥
ಸಮಸ್ತರತ್ನೋದ್ಧರಿತಾ ಚ ಪೃಥ್ವೀ
ಯಥೇಷ್ಟಧಾನ್ಯಾ ಬಹುದುಗ್ಧಗೋಮತೀ ॥ ೭ ॥

ಅ ॥ ಎಲ್ಲರೂ ಮನಸ್ಸು, ವಚನ, ಶರೀರಗಳಿಂದ ಯಾವಾಗಲೂ ವಿಷ್ಣುವನ್ನೇ (ಸರ್ವೋತ್ತಮನನ್ನಾಗಿ) ಪೂಜಿಸುತ್ತಾರೆ. ರಮಾದೇವಿ ಮೊದಲಾದ ಇತರ ದೇವಸಮೂಹವನ್ನು ವಿಶೇಷವಾಗಿ (ಅಂದರೆ ಸರ್ವೋತ್ತಮನನ್ನಾಗಿ) ಪೂಜಿಸುವುದಿಲ್ಲ. (ಮತ್ತೆ ವಿಷ್ಣುವಿನ ಪರಿವಾರ ರೆಂದು ತಿಳಿದು ಪೂಜಿಸುತ್ತಾರೆ.) ಭೂಮಿಯು ಸಮಸ್ತ ನವರತ್ನಗಳಿಂದಲೂ ಸಂಪೂರ್ಣ ವಾದದು. ಇಚ್ಛಾನುಸಾರಗಳಾದ ಬಹುಧಾನ್ಯಗಳುಳ್ಳದ್ದು, ಹೆಚ್ಚು ಹಾಲುಳ್ಳ ಗೋವು ಗಳುಳ್ಳದ್ದು.

ವಿಶೇಷಾಂಶ— ಭೂಮಿಯಲ್ಲಿ ಹೆಚ್ಚು ಹುಲ್ಲುಮೊದಲಾದುವುಗಳು ಆದರೇನೇ ಗೋವು ಗಳಿಗೆ ಹಾಲು ಜಾಸ್ತಿಯಾಗುತ್ತದೆ ಎನ್ನುವ ತಾತ್ಪರ್ಯದಿಂದ 'ಬಹುದುಗ್ಧಗೋಮತೀ' ಎಂದು ಭೂಮಿಗೆ ವಿಶೇಷಣವನ್ನು ಕೊಟ್ಟಿರುತ್ತಾರೆ ॥ ೭ ॥

ಮೂ ॥ ಸಮಸ್ತಗಂಧಾಶ್ಚ ಸದಾತಿಹೃದ್ಯಾ
ರಸಾ ಮನೋಹಾರಿಣ ಏವ ತತ್ರ ॥
ಶಬ್ದಾಶ್ಚ ಸರ್ವೇ ಶ್ರವಣಾತಿಹಾರಿಣಃ
ಸ್ಪರ್ಶಾಶ್ಚ ಸರ್ವೇ ಸ್ಪರ್ಶೇಂದ್ರಿಯಪ್ರಿಯಾಃ ॥ ೮ ॥

ಅ ॥ ಆ ರಾಮ ರಾಜ್ಯದಲ್ಲಿ ಎಲ್ಲಾ ಗಂಧಗಳೂ (ಚಂದನಾದಿ ದ್ರವ್ಯಗಳು) ಯಾವಾಗಲೂ ಅತ್ಯಂತ ಮನೋಹರಗಳು. ಷಡ್ರಸಗಳೂ ಮನಸ್ಸನ್ನು ಅಪಹರಿಸತಕ್ಕವುಗಳು. ಎಲ್ಲಾ ಶಬ್ದಗಳೂ ಶ್ರವಣೇಂದ್ರಿಯವನ್ನು ಅತ್ಯಂತವಾಗಿ ಅಪಹರಿಸತಕ್ಕವುಗಳು (ಅಂದರೆ ಕಿವಿಯನ್ನು ತಮ್ಮ ಅಭಿಮುಖವನ್ನಾಗಿ ಮಾಡತಕ್ಕವುಗಳು, ಅತಿಶಯವಾಗಿ ಪ್ರಿಯಗಳು.) ಎಲ್ಲಾ ಸ್ಪರ್ಶ ಗಲೂ ತ್ವಗಿಂದ್ರಿಯಕ್ಕೆ ಪ್ರಿಯಗಳಾಗಿರುತ್ತವೆ ॥ ೮ ॥

ಮೂ ॥ ನ ಕಸ್ಯಚಿದ್ದುಃಖಮನುಭೂತ್ಕಥಂಚಿ-
ನ್ನ ವಿತ್ತಹಾನಿರ್ಹೀನಶ್ಚ ಬಭೂವ ಕಸ್ಯಚಿತ್ (ಶ್ಚನ) ॥
ನಾಧರ್ಮಶೀಲೋ ನ ಚ ಕಶ್ಚನಾಪ್ರಜೋ
ನ ದುಷ್ಪ್ರಜೋ ನೈವ ಕುಭಾರ್ಯಕಶ್ಚ ॥ ೯ ॥

ಅ ॥ ಯಾರಿಗೂ ಯಾವರೀತಿಯಿಂದಲೂ ದುಃಖವು ಆಗಲಿಲ್ಲ. ಯಾರಿಗೂ ದ್ರವ್ಯ ಹಾನಿಯೂ ಆಗಲಿಲ್ಲ. ಅಥವಾ ಯಾರೊಬ್ಬನೂ ದ್ರವ್ಯವಿಲ್ಲದವನು ಇರಲಿಲ್ಲ. ಅಧರ್ಮ ಬುದ್ಧಿಯುಳ್ಳವನೂ ಇರಲಿಲ್ಲ. ಸಂತಾನರಹಿತನು ಯಾರೊಬ್ಬನೂ ಇರಲಿಲ್ಲ. ದುಷ್ಟಪ್ರಜೆಗಳು ಳ್ಳವನೂ ಇರಲಿಲ್ಲ. ಕುತ್ಸಿತಳಾದ ಹೆಂಡತಿಯುಳ್ಳವನೂ ಇರಲಿಲ್ಲ. ॥ ೯ ॥

ಮೂ ॥ ಸ್ತ್ರಿಯೋ ನ ಚಾಸನ್ವಿಧವಾಃ ಕಥಂಚಿ-
ನ್ನ ನೈ ಪುಮಾಂಸೋವಿಧುರಾ ಬಭೂವುಃ ॥
ನಾನಿಷ್ಟಯೋಗಶ್ಚ ಬಭೂವ ಕಸ್ಯಚಿ-
ನ್ನ ಚೇಷ್ಟಹಾನಿರ್ನ ಚ ಪೂರ್ವಮೃತ್ಯುಃ ॥ ೧೦ ॥

ಅ || ಯಾವ ಪ್ರಕಾರದಿಂದಲೂ ಸ್ತ್ರೀಯರು ವಿಧವೆಯರಾಗಿ ಇರಲಿಲ್ಲ. ಪುರುಷರು ಸ್ತ್ರೀರಹಿತರಾಗಿಯೂ ಇರಲಿಲ್ಲ. ಇದು ರಾಮಾಯಣದಲ್ಲಿ ಪ್ರಸಿದ್ಧವು. ಯಾರೊಬ್ಬನಿಗೂ ಅಪ್ರಿಯವಾದ ವಸ್ತುವಿನ ಸಂಬಂಧವೂ ಆಗಲಿಲ್ಲ. ಪ್ರಿಯವಸ್ತುವಿನ ವಿಯೋಗವೂ ಆಗಲಿಲ್ಲ. ವೃದ್ಧನ ಎದುರಿನಲ್ಲಿ ಮೊದಲು ತರುಣನಿಗೆ ಮರಣವೂ ಆಗಲಿಲ್ಲ. ಅಥವಾ ಸಹಸ್ರವರುಷ ದೆಶೆಯಿಂದ ಮೊದಲು ಮೃತ್ಯುವೂ ಅಪಮೃತ್ಯುವೂ ಆಗಲಿಲ್ಲ.

ವಿಶೇಷಾಂಶ—(1) ಸರ್ವರಿಗೂ ಸಹಸ್ರಾಯುಷ್ಯ ನಿಯಮವಿದ್ದರೂ ಪರಿಹಾರವನ್ನು ಮಾಡದೆ ಇದ್ದ ಶಾಪದಿಂದಲೂ, ಸರ್ಪದಂಶಾದಿಗಳಿಂದಲೂ, ಪತಿಗಳಿಗಾಗಲೀ, ಸ್ತ್ರೀಯರಿಗಾಗಲೀ, ಮರಣವು ಬರಬಹುದಾದುದರಿಂದ ಕಥಂಚಿತ್ ಎಂದು ಹೇಳಿರುವರು; ಆದುದರಿಂದ ಪೂರ್ವೋತ್ತರ ವಿರೋಧವಿಲ್ಲ. (2) ಸ್ತ್ರೀಯರಿಗೂ, ಪುರುಷರಿಗೂ ಸಮಾನವಾದ ಆಯುಷ್ಯವಿರುವುದಾದರೆ ಸ್ತ್ರೀಪುಂಭಾವವೇ ಕೂಡಲಾರದು. ಸ್ತ್ರೀಯರಿಗೆ ಸ್ವಲ್ಪ ಕಮ್ಮಿ ಆಯುಷ್ಯವಾದರೆ ಸಹಸ್ರವರುಷ ಆಯುಷ್ಯವೆನ್ನುವುದು ಕೂಡದೆ ಹೋಗುವುದು. ಎಂದರೆ— 'ನೈವ ಕುಭಾರ್ಯಃಕಶ್ಚ' ಎಂದು ಹೇಳಿದುದರಿಂದ ಪುರುಷರಿಗೇನೇ ಈ ನಿಯಮವು; ಸ್ತ್ರೀಯರಿಗಾದರೂ ಸ್ವಲ್ಪ ನ್ಯೂನತೆಯಿದ್ದರೂ, ಹಾನಿಯಿಲ್ಲವೆಂದು ಪರಿಹಾರವು ಕೊಡುತ್ತದೆ || ೧೦ ||

ಮೂ || ಯಥೇಷ್ಟ ಮಾಲ್ಯಾ ಭರಣಾನುಲೇಪನಾ
ಯಥೇಷ್ಟ ಪಾನಾಶನವಾಸಸೋಽಖಿಲಾಃ ||
ಬಭೂವುರೀಶೇ ಜಗತಾಂ ಪ್ರಶಾಸತಿ
ಪ್ರಕೃಷ್ಟಧರ್ಮೇಣ ಜನಾರ್ದನೇ ನೃಪೇ || ೧೧ ||

ಅ || ಸರ್ವಲೋಕಗಳಿಗೆ ಸ್ವಾಮಿಯಾದ ದುಷ್ಟರನ್ನು ಶಿಕ್ಷಿಸಿಕೊಂಡು ಇರತಕ್ಕ ಸಜ್ಜನರನ್ನು ರಕ್ಷಿಸಿಕೊಂಡು ಇರತಕ್ಕ ಶ್ರೀ ರಾಮನು ಉತ್ಕೃಷ್ಟ ಧರ್ಮದಿಂದ (ಭೂಮಿಯನ್ನು) ರಕ್ಷಿಸುತ್ತಾ ಇರಲು ಎಲ್ಲಾ ಜನರು ಬಹುಪುಷ್ಪಗಳೂ, ಆಭರಣಗಳೂ, ಚಂದನಾದಿ ಅನುಲೇಪನದ್ರವ್ಯವುಳ್ಳವರೂ, ಮತ್ತು ಇಚ್ಛಾನುಸಾರವಾಗಿ ಜಲ-ಹಾಲು ಮೊದಲಾದ ಪಾನಗಳೂ, ಭಕ್ಷ್ಯ, ಭೋಜ್ಯ ಮೊದಲಾದ ಅನ್ನಗಳೂ, ಪ್ರಶಸ್ತವಾದ ವಸ್ತ್ರಗಳೂ ಇವುಗಳುಳ್ಳವರು ಆದರು || ೧೧ ||

ಮೂ || ಸ ಬ್ರಹ್ಮರುದ್ರಮರುದಶ್ವಿದಿವಾಕರಾದಿ
ಮೂರ್ಧನ್ಯರತ್ನ ಪರಿಘಟ್ಟಿತಪಾದಪೀಠಃ ||
ನಿತ್ಯಂ ಸುರೈಃ ಸಹ ನರೈರಥ ವಾನರೈಶ್ಚ
ಸಂಪೂಜ್ಯಮಾನಚರಣೋ ರಮತೇ ರಮೇಶಃ || ೧೨ ||

ಅ || ಬ್ರಹ್ಮನು, ರುದ್ರನು (ಮನು ಅವಬೋಧನೇ ಎನ್ನುವ ಧಾತುವಿನ ದೆಶೆಯಿಂದ, ಮಂ=ಜ್ಞಾನವನ್ನು, ರೋಹಯತಿ-ಉತ್ಪಾದಯತಿ, ಎನ್ನುವ ವ್ಯುತ್ಪತ್ತಿಯಿಂದ) ಮರುತ್= ಮನೋಭಿಮಾನಿಯಾಗಿರುವುದರಿಂದ ಮಾನಸ ಜ್ಞಾನವನ್ನು ಹುಟ್ಟಿಸತಕ್ಕ ಇಂದ್ರನು, (ಮತ್ತು ಮೃಜ್ ಪ್ರಾಣತ್ಯಾಗೇ ಎನ್ನುವ ಧಾತುವಿನ ದೆಶೆಯಿಂದ, ಮಂ-ಮರಣವನ್ನು 'ರುಣದ್ಧಿ' ಎನ್ನುವ ವ್ಯುತ್ಪತ್ತಿಯಿಂದ,) ಪ್ರಾಣನು, (ಗುರುರೂಪದಿಂದ ಮಂ=ಜ್ಞಾನವನ್ನು, 'ರೋಹಯತಿ-ಜನಯತಿ' ಎನ್ನುವ ವ್ಯುತ್ಪತ್ತಿಯಿಂದ) ಮರುತ್ = ಬೃಹಸ್ಪತಿಯೂ ಕೂಡ, ಅಶ್ವಿನೀ ದೇವತೆಗಳು ಅಥವಾ ಅಶ್ವಿ=ಶೀಘ್ರದಲ್ಲಿ ಗತಿಯುಳ್ಳ ಪ್ರವಹಾಖ್ಯವಾಯುವೂ, ಸೂರ್ಯನೂ ಇವರೇ

ಮೊದಲಾದ ದೇವತೆಗಳ ಶಿರಸ್ಸಿನಲ್ಲಿರತಕ್ಕ ರತ್ನಗಳಿಂದ ಸಂಘರ್ಷಿತಗಳಾದ ಪಾದಪೀಠಗಳುಳ್ಳವನು, ಮತ್ತು, ಬ್ರಹ್ಮರುದ್ರಾದಿ ದೇವತೆಗಳಿಂದಲೂ, ಮನುಷ್ಯರಿಂದಲೂ ಕೂಡಿಕೊಂಡು ಕಪಿಗಳಿಂದಲೂ ಕೂಡ ಪ್ರತಿನಿತ್ಯವೂ, ಚೆನ್ನಾಗಿ ಷೋಡಶೋಪಚಾರ ಪೂಜೆಯಿಂದ ಪೂಜಿಸಿಕೊಳ್ಳಲ್ಪಡತಕ್ಕ ಪಾದಗಳುಳ್ಳವನು, ಇಂತಹ ಲಕ್ಷ್ಮೀಪತಿಯಾದ ಶ್ರೀರಾಮನು ಕ್ರೀಡಿಸುತ್ತಾ ಇರುತ್ತಾನೆ. (ಅಂದರೆ ಮೊದಲು ಶಿರಸ್ಸಿನಿಂದ ಸಾಷ್ಟಾಂಗನಮಸ್ಕಾರ ಮಾಡಿ ಆ ಮೇಲೆ ಚೆನ್ನಾಗಿ ಪೂಜೆಯನ್ನು ಮಾಡುತ್ತಾರೆ. ಆದುದರಿಂದ ಪೌನರುಕ್ತ್ಯವಿಲ್ಲ) ॥ ೧೨ ॥

ಮೂ ॥ ತಸ್ಯಾಖಿಲೇಶಿತುರನಾದ್ಯನುಗೈವ ಲಕ್ಷ್ಮೀಃ
ಸೀತಾಭಿಧಾ ತ್ವರಮಯತ್ಸ್ವರತಂ ರಮೇ(ಸುರೇ)ಶಂ ॥
ನಿತ್ಯಾವಿಯೋಗಿಪರಮೋಚ್ಚನಿಜಸ್ವಭಾವ (ವಾ)
ಸೌಂದರ್ಯವಿಭ್ರಮಸುಲಕ್ಷಣಪೂರ್ವಭಾವಾ ॥ ೧೩ ॥

ಅ ॥ ನಿತ್ಯದಲ್ಲಿಯೂ, ವಿಯೋಗರಹಿತಗಳಾದ, ಅತ್ಯುತ್ತಮಗಳಾದ, ಸ್ವಸ್ವರೂಪಭೂತಗಳಾದ, ಸೌಂದರ್ಯ ವಿಲಾಸವೂ, ಸಲ್ಲಕ್ಷಣಗಳೂ ಇವುಗಳೇ ಮೊದಲಾಗಿವುಳ್ಳ ಧರ್ಮಗಳುಳ್ಳ, ಸರ್ವರಿಗೂ ಸ್ವಾಮಿಯಾದ ಶ್ರೀರಾಮನನ್ನು ಅನಾದಿಕಾಲದಿಂದ ಅನುಸರಿಸಿಕೊಂಡು ಇರತಕ್ಕ (ಅಂದರೆ ನಿರಂತರದಲ್ಲಿಯೂ ವಿಯೋಗವಿಲ್ಲದಿರುವ) ಸೀತಾದೇವಿಯೆಂದು ಹೆಸರುಳ್ಳ ಲಕ್ಷ್ಮೀದೇವಿಯು, ತು ವಿಶೇಷವಾಗಿ, ಪಾದಸಂವಾಹನ, ಗಂಧಮಾಲ್ಯಾದ್ಯರ್ಪಣ, ತಾಂಬೂಲದಾನಾದಿಗಳಿಂದ ಕ್ರೀಡಿಸುತ್ತಿದ್ದಳು. (ಅಂದರೆ ನಿತ್ಯದಲ್ಲಿಯೂ ಸುಖವನ್ನು ವ್ಯಕ್ತೀಕರಿಸಿಕೊಂಡಿದ್ದಳು) ॥ ೧೩ ॥

ಮೂ ॥ ರೇಮೇ ತಯಾ ಸ ಪರಮಃ ಸ್ವರತೋಽಪಿ ನಿತ್ಯಂ
ನಿತ್ಯೋನ್ನತಪ್ರಮುದಧಾರಸ್ವತಸ ಭಾವಃ ॥
ಪೂರ್ಣೇಂದುರಾಜಸುವಿರಾಜಿತಸನ್ನಿಶಾಸು
ದೀಪ್ಯತ್ಸ್ವಕೀಯಪವಿಕಾಸು ಸುಪುಷ್ಪಿತಾಸು ॥ ೧೪ ॥

ಅ ॥ ನಿತ್ಯದಲ್ಲಿಯೂ [illegible]

[illegible]

ಮೂ ॥ [illegible]

[illegible] ॥ ೧೫ ॥

ಅ ॥ ಪ್ರೀತಿಯುಕ್ತವಾದ ಬುದ್ಧಿಯುಳ್ಳ, ಶೋಭನ ಸ್ವರವುಳ್ಳ ಗಂಧರ್ವರೂ, ಚಾರಣರೂ ಇವರ ಸಮೂಹಗಳು ಅಪ್ಸರ ಸ್ತ್ರೀಯರಿಂದ ಕೂಡಿಕೊಂಡು ಈ ರಾಮನನ್ನು ಕುರಿತು ಗಾನ ಮಾಡುತ್ತವೆ ದೇವಶ್ರೇಷ್ಠರಿಂದ ಕೂಡಿದ ಋಷಿಗಳ ಸಮೂಹಗಳೂ ಈ ರಾಮನನ್ನು ಸ್ತೋತ್ರ ಮಾಡುತ್ತವೆ. ಮದರಹಿತರಾದ ರಾಜರು ಯಾವಾಗಲೂ ಈ ರಾಮನನ್ನು ಅನುಸರಿಸುತ್ತಾರೆ. (ಅಂದರೆ ಅನುಕೂಲರಾಗಿರುತ್ತಾರೆ.) ॥ ೧೫ ॥

ಮೂ ॥ ಏವಂ ತ್ರಯೋದಶಸಹಸ್ರಸಮಾಃ ಸಮಸ್ತಾಂ
ಪೃಥ್ವೀಂ ರರಕ್ಷ ವಿಜಿತಾರಿರಮೋಘವೀರ್ಯಃ ॥
ಆನಂದಮಿಂದುರಿವ ಸಂದಧದಿಂದಿರೇಶೋ
ಲೋಕಸ್ಯ ಸಾಂದ್ರಸುಖವಾರಿಧಿರಪ್ರಮೇಯಃ ॥ ೧೬ ॥

ಅ ॥ ಗೆಲ್ಲಲ್ಪಟ್ಟ ಶತ್ರುಗಳುಳ್ಳ ಸಫಲವಾದ ಪರಾಕ್ರಮವುಳ್ಳ, ಲೋಕಕ್ಕೆ ಸಂತೋಷ ವನ್ನು ಚಂದ್ರನಂತೆ ಧರಿಸತಕ್ಕ (ಅಂದರೆ ಉಂಟುಮಾಡತಕ್ಕ) ಪೂರ್ಣವಾದ ಸುಖದಿಂದ ಸಮುದ್ರ ದಂತೆ ಇರುವ, ತಿಳಿಯಲಿಕ್ಕೆ ಅಶಕ್ಯನಾದ ಲಕ್ಷ್ಮೀಪತಿಯಾದ ಶ್ರೀ ರಾಮನು ಪೂರ್ವೋಕ್ತಪ್ರಕಾರ ವಾಗಿ ಹದಿಮೂರು ಸಹಸ್ರ(೧೩೦೦೦) ಸಂವತ್ಸರಗಳಲ್ಲಿ ತು=ವಿಶೇಷವಾಗಿ ದೃಷ್ಟಿಗೋಚರನಾಗಿ ಭೂಮಿಯನ್ನು ರಕ್ಷಿಸುತ್ತಿದ್ದನು.

ವಿಶೇಷಾಂಶ— ಪಾಲಕನಾಗಿ ದೃಷ್ಟ್ಯಗೋಚರವಾದ ಮೂಲರೂಪದಿಂದ ಸರ್ವದಾ ರಕ್ಷಿಸುತ್ತಿದ್ದರೂ ಈಗ ಮೂರ್ತಿವಿಶೇಷದಿಂದ ಸರ್ವರ ದೃಷ್ಟಿಗೆ ಗೋಚರನಾಗಿ ರಕ್ಷಿಸಿದನು ॥೧೬॥

ಮೂ ॥ ದೇವ್ಯಾಂ ಸ ಚಾಜನಯದಿಂದ್ರಹುತಾಶನೌ ದ್ವೌ
ಪುತ್ರೌ ಯಮೌ ಕುಶಲವೌ ಬಲಿನೌ ಗುಣಾಢ್ಯೌ ॥
ಶತ್ರುಘ್ನತೋ ಲವಣಮುಲ್ಬಣಬಾಣದಗ್ಧಂ
ಕೃತ್ವಾ ಚಕಾರ ಮಥುರಾಂ ಪುರಮುಗ್ರವೀರ್ಯಃ ॥ ೧೭ ॥

ಅ ॥ ಆ ಶ್ರೀ ರಾಮನಾದರೂ ಸೀತಾದೇವಿಯಲ್ಲಿ (ಮೊದಲು) ಇಂದ್ರಾಗ್ನಿಸ್ವರೂಪ ರಾದ ಬಲಿಷ್ಠರಾದ, ಗುಣಗಳಿಂದ ಯುಕ್ತರಾದ, ಯಮಳರಾದ (ಅಂದರೆ ಒಬ್ಬಳಲ್ಲಿ ಒಂದೇ ಸಮಯದಲ್ಲಿ ಹುಟ್ಟಿರುವ) ಕುಶ–ಲವ ಎನ್ನುವ ಇಬ್ಬರು ಮಕ್ಕಳನ್ನು ಹುಟ್ಟಿಸಿದನು. ಸಹಿಸ ಲಿಕ್ಕೆ ಅಶಕ್ಯವಾದ ಪರಾಕ್ರಮವುಳ್ಳ ಶ್ರೀ ರಾಮನು ಶತ್ರುಘ್ನನಿಂದ ಲವಣಾಸುರನನ್ನು ತನ್ನ ಕೈಯಲ್ಲಿರತಕ್ಕ ಕ್ರೂರವಾದ ಬಾಣಗಳಿಂದ ಸುಡಲ್ಪಟ್ಟವನನ್ನಾಗಿ ಮಾಡಿಸಿ (ಲವಣಾಸುರನ ಮಧು ವನವನ್ನು) ಮಥುರಾಪುರಿಯನ್ನಾಗಿ ಮಾಡಿಸಿದನು. ॥ ೧೭ ॥

ಮೂ ॥ ಕೋಟಿತ್ರಯಂ ಸ ನಿಜಘಾನ ತಥಾಸುರಾಣಾಂ
ಗಂಧರ್ವಜನ್ಮ ಭರತೇನ ಸತಾಂ ಚ ಧರ್ಮಂ ॥
ಸಂಶಿಕ್ಷಯನ್ನಯಜದುತ್ತಮಕಲ್ಪಕೈಃ ಸ್ವಂ
ಯಜ್ಞೈರ್ಭನಾಬ್ಜಜಮುಖಾಸ್ಸ್ವ(ಋಸತ್ಸ)ಚಿನಾಶ್ಚ ಯತ್ರ ॥ ೧೮ ॥

ಅ ॥ ಆ ಶ್ರೀ ರಾಮನು ಗಂಧರ್ವರಲ್ಲಿ ಉತ್ಪತ್ತಿಯುಳ್ಳ (ಹಾಗೆಯೇ ಗಂಧರ್ವರಿಂದ ಹುಟ್ಟಿರುವ) ಮಹಾಸುರರ ಕೋಟಿಗಳ ಮೂರನ್ನು (೩೦೦೦೦೦೦೦) ನ್ನು ಲವಣಾಸುರನ

ಸಂಹಾರದಂತೆ ಭರತನಿಮಿತ್ತದಿಂದ ಕೊಲ್ಲಿಸಿದನು. (ಅಂದರೆ ಭರತನಿಗೆ ಕೀರ್ತಿಯನ್ನು ಕೊಡ್ಡುವುದಕ್ಕಾಗಿ ಭರತನ ಹೃದಯದಲ್ಲಿದ್ದವನಾಗಿ ಸಂಹರಿಸಿದನು.) ಸಜ್ಜನರ ಧರ್ಮವನ್ನು ಶಿಕ್ಷಿಸುತ್ತಾ ಯಾವ ಯಜ್ಞಗಳಲ್ಲಿ ರುದ್ರನು, ಬ್ರಹ್ಮನು ಇವರೇ ಮೊದಲಾಗಿವುಳ್ಳವರು ಅಥವಾ ರುದ್ರ-ಬ್ರಹ್ಮರೇ ಕ್ರಮದಿಂದ ಪ್ರಧಾನರಾಗಿ ಉಳ್ಳವರು ಸವಿಶೇಷ ಪರಿಚಾರಕರಾಗಿ ಆಗಿರುವರೋ (ಅಂತಹ) ಉತ್ತಮಕಲ್ಪನೆಗಳುಳ್ಳ (ಅಂದರೆ—ಸಂಪೂರ್ಣ ದಕ್ಷಿಣಾದಿಗಳಿಂದ ಯುಕ್ತಗಳಾದ) ಯಾಗಗಳಿಂದ ತನ್ನನ್ನೇ ಪೂಜಿಸಿಕೊಂಡನು.

ವಿಶೇಷಾಂಶ— (1) 'ರುದ್ರಂಸಮಾಶ್ರಿತಾ ದೇವಾಃ ರುದ್ರೋ ಬ್ರಹ್ಮಾಣಮಾಶ್ರಿತಃ ।' ಎನ್ನುವ ವಚನದೆಸೆಯಿಂದ ಇಂದ್ರಾದಿದೇವತೆಗಳಲ್ಲಿ ಮುಖ್ಯನಾದವನು ರುದ್ರನು. ರುದ್ರನಿಗಿಂತಲೂ ಮುಖ್ಯನಾದಪ್ರಯುಕ್ತ ಪರಂಪರೆಯಿಂದ ಮುಖ್ಯನಾದವನು ಬ್ರಹ್ಮನು. ಈ ಅಭಿಪ್ರಾಯದಿಂದ ವ್ಯುತ್ಕ್ರಮದಿಂದ ಹೇಳಿದರು. )2) ಅಥವಾ, ರುದ್ರ ಬ್ರಹ್ಮರಿಗೆ ಮುಖ್ಯರಾದ ಶ್ರೀ ಭೂ-ದುರ್ಗಾದೇವಿಯರೇ ಚೆನ್ನಾಗಿ ಸಾಚಿವ್ಯವನ್ನು ಮಾಡತಕ್ಕವರು ಅಂದರೆ ಪರಿವೇಷಣವನ್ನು ಮಾಡತಕ್ಕವರು ॥ ೧೮ ॥

ಮೂ ॥ ಅಥ ಶೂದ್ರತಪಶ್ಚರ್ಯಾನ್ನಿಹತಂ ವಿಪ್ರಪುತ್ರಕಂ ॥
ಉಜ್ಜೀವಯಾಮಾಸ ವಿಭುರ್ಹತ್ವಾ ತಂ ಶೂದ್ರತಾಪಸಂ ॥ ೧೯ ॥

ಅ ॥ ಯಜ್ಞಮಾಡಿದ ಮೇಲೆ ಸರ್ವಸಮರ್ಥನಾದ ಶ್ರೀ ರಾಮನು, ಶೂದ್ರನ ತಪಶ್ಚರಣದಿಂದ ಸಂಹರಿಸಿಕೊಳ್ಳಲ್ಪಟ್ಟ (ಅಂದರೆ ಶೂದ್ರ ತಪಶ್ಚರಣವು ದೋಷಸಾಧನವಾಗಿರುವುದರಿಂದ ಮರಣವನ್ನು ಹೊಂದಿದ) ಬ್ರಾಹ್ಮಣನ ಪುತ್ರನನ್ನು, ಆ ಶೂದ್ರ ತಪಸ್ವಿಯನ್ನು ಸಂಹಾರ ಮಾಡಿ ಬದುಕಿಸಿದನು ॥ ೧೯ ॥

ಅವನು ಮೊದಲು ಯಾರೆಂದರೆ—

ಮೂ ॥ ಜಂಘನಾಮಾಸುರಃ ಪೂರ್ವಂ ಗಿರಿಜಾವರದಾನತಃ ॥
ಬಭೂವ ಶೂದ್ರಃ ಕಲ್ಪಾಯುಃ ಸ ಲೋಕಕ್ಷಯಕಾಮ್ಯಯಾ ॥ ೨೦ ॥

ಅ ॥ (ಯಾವನು) ಮೊದಲು ಜಂಘ ಎಂದು ಹೆಸರುಳ್ಳ ಅಸುರನೋ, ಅವನು ಪಾರ್ವತಿಯಿಂದ ವರವನ್ನು ತೆಗೆದುಕೊಂಡುದರಿಂದ ಕಲ್ಪಪರ್ಯಂತ ಆಯುಷ್ಯವುಳ್ಳವನಾಗಿ ಜಗತ್ತಿನ ನಾಶದ (ಅಂದರೆ ಜಗತ್ತು ನಾಶವಾಗಬೇಕೆಂಬುವ) ಇಚ್ಛೆಯಿಂದ ಶೂದ್ರನು ಆದನು. (ಅಂದರೆ ಶೂದ್ರ ತಪಶ್ಚರಣರೂಪವಾದ ಅನ್ಯಾಯಪ್ರವೃತ್ತಿಯಿಂದ ಜಗತ್ತು ನಾಶವಾಗಬೇಕೆಂಬುವ ಬುದ್ಧಿಯಿಂದ ಶೂದ್ರನು ಆದನು.) ॥ ೨೦ ॥

ತಪಸ್ಸನ್ನು ಮಾಡಲಿಕ್ಕೆ ಕಾರಣಾಂತರವನ್ನು ಹೇಳುತ್ತಾರೆ—

ಮೂ ॥ ತಪಶ್ಚಚಾರ ದುರ್ಬುದ್ಧಿ ರಿಚ್ಛನ್ಮಾಹೇಶ್ವರಂ ಪದಂ ॥
ಅನನ್ಯವಧ್ಯಂ ತಂ ತಸ್ಮಾಜ್ಜಘಾನ ಪುರುಷೋತ್ತಮಃ ॥ ೨೧ ॥

ಅ ॥ ದುರ್ಬುದ್ಧಿಯುಳ್ಳ ಶೂದ್ರತಾಪಸನು ರುದ್ರಸಂಬಂಧಿಯಾದ ಸ್ಥಾನವನ್ನು (ಅಂದರೆ ಪಾರ್ವತೀ ಭರ್ತೃತ್ವವನ್ನು) ಇಚ್ಛಿಸುತ್ತಾ ತಪಸ್ಸನ್ನು ಮಾಡಿದನು. ಪಾರ್ವತಿಯಿಂದ

ವರವನ್ನು ಪಡೆದುಕೊಂಡವನಾಗಿ, ಇತರರಿಂದ ಸಂಹರಿಸಿಕೊಳ್ಳಲ್ಪಡಲಿಕ್ಕೆ ಅಶಕ್ಯನಾದ ಅಯೋಗ್ಯ ಕರ್ಮವನ್ನು ಮಾಡತಕ್ಕವನಾದುದರಿಂದ ಆ ಶೂದ್ರತಾಪಸನನ್ನು ಕ್ಷರಾಕ್ಷರಪುರುಷರಿಂದ ಉತ್ತಮನಾದ ಶ್ರೀ ರಾಮನು ಸಂಹರಿಸಿದನು ॥ ೨೦ ॥

ಮೂ ॥ ಶ್ವೇತದತ್ತಾಂ ತಥಾ ಮಾಲಾಮಗಸ್ತ್ಯಾದಾಪ ರಾಘವಃ ॥ ೨೨ ॥
ಅನನ್ನ ಯಜ್ಞ ಕೃಚ್ಛ್ವೇತೋ ರಾಜಾ ಕ್ಷುಧ್ವಿನಿವರ್ತನಂ ॥
ಕುರ್ವನ್ಸ್ವ ಮಾಂಸೈರ್ಧಾತ್ರೋಕ್ತೋ ಮಾಲಾಂ ರಾಮಾರ್ಥ-
ಮರ್ಪಯೇತ್ ॥ ೨೩ ॥

ಅಗಸ್ತ್ಯಾಯ ನ ಸಾಕ್ಷಾತ್ತು ರಾಮೇ ದದ್ಯಾದಯಂ ನೃಪಃ ॥
ಕ್ಷುದಭಾವಮಾತ್ರಫಲದಂ ನ ಸಾಕ್ಷಾದ್ರಾಘವೇಽರ್ಪಿತಂ ॥ ೨೪ ॥

ಅ ॥ ಹಾಗೆಯೇ ಶ್ರೀ ರಾಮನು ಶ್ವೇತರಾಜನಿಂದ (ರಾಮನಿಗೆ ಕೊಡುವುದಕ್ಕಾಗಿ ಅಗಸ್ತ್ಯನ ಕೈಯಲ್ಲಿ) ಕೊಡಲ್ಪಟ್ಟ ಮಾಲಿಕೆಯನ್ನು ಅಗಸ್ತ್ಯಋಷಿಯಿಂದ ಹೊಂದಿದನು. (ಶ್ವೇತರಾಜನು ಏಕೆ ಮಾಲಿಕೆಯನ್ನು ಕೊಟ್ಟನು? ಎಂದರೆ) ಅನ್ನದಾನವಿಲ್ಲದಿರುವ ಯಜ್ಞವನ್ನು ಮಾಡತಕ್ಕ ಶ್ವೇತರಾಜನು ತನ್ನ ಮಾಂಸಗಳಿಂದಲೇ ಹಸಿವೆಯ ಪರಿಹಾರವನ್ನು ಮಾಡುವವನಾಗಿ (ಹಸಿವೆಯ ನಿವೃತ್ತಿಗೆ ಉಪಾಯವು ಯಾವುದು ಎಂದು ಶ್ವೇತರಾಜನಿಂದ ಪ್ರಶ್ನಿಸಿಕೊಳ್ಳಲ್ಪಟ್ಟ) ಬ್ರಹ್ಮನಿಂದ ರಾಮನಿಗೋಸ್ಕರ (ಅಗಸ್ತ್ಯನಿಗೋಸ್ಕರ ಅಂದರೆ ಅಗಸ್ತ್ಯಋಷಿಯ ಕೈಯಲ್ಲಿ) ಮಾಲಿಕೆಯನ್ನು (ಕೊಡು ಎಂದು) ಹೇಳಲ್ಪಟ್ಟವನಾಗಿ ರಾಮನಿಗೋಸ್ಕರ ಮಾಲಿಕೆಯನ್ನು ಅಗಸ್ತ್ಯಋಷಿಯ ಕೈಯಲ್ಲಿ ಸಮರ್ಪಿಸಿದನು. (ಅಗಸ್ತ್ಯಋಷಿಯ ವ್ಯವಧಾನದಿಂದ ಮಾಲಿಕೆಯನ್ನು ಕೊಡು ಎಂದು ಹೇಳಿದ ಬ್ರಹ್ಮನ ಅಭಿಪ್ರಾಯವನ್ನು ಹೇಳುತ್ತಾರೆ.) ಈ ಶ್ವೇತರಾಜನು ಸಾಕ್ಷಾತ್ತಾಗಿ ತಾನೇಕೆ ರಾಮನಲ್ಲಿ ಮಾಲಿಕೆಯನ್ನು ಕೊಡಬಾರದು. (ಏಕೆಂದರೆ) ಸಾಕ್ಷಾತ್ ತನ್ನ ಕೈಯಿಂದಲೇ ಶ್ರೀ ರಾಮನಲ್ಲಿ ಸಮರ್ಪಿತವಾದ ಮಾಲಿಕೆ ಮೊದಲಾದುದು ಕೇವಲ ಹಸಿವೆಯ ಪರಿಹಾರರೂಪವೇ ಆದ ಫಲವನ್ನು ಕೊಡತಕ್ಕುದು ಅಲ್ಲ. (ಮತ್ತೆ ಸತ್ಪಾತ್ರದಲ್ಲಿ ದಾನಮಾಡಿದ ಮಹಿಮೆಯಿಂದ ಸರ್ವ ಪುರುಷಾರ್ಥರೂಪವಾದ ಫಲವನ್ನು ಕೊಡತಕ್ಕುದು ಆಗುವುದು.)

ವಿಶೇಷಾಂಶ—(1) ತನ್ನ ಮಾಂಸಗಳನ್ನೇ ತಿಂದು ಹಸಿವೆಯನ್ನು ನಿವೃತ್ತಿಸಿಕೊಂಡಿರುವ ಶ್ವೇತರಾಜನು ನನಗೆ ಹಸಿವೆಯ ನಿವೃತ್ತಿಯು ಯಾವುದರಿಂದ ಆಗುವುದು ಎಂದು ಬ್ರಹ್ಮನನ ಕುರಿತು ಪ್ರಶ್ನಿಸುತ್ತಿರಲು ಮೃತಸಂಜೀವನದ ಸ್ಪರ್ಶದಂತೆ ಈ ಮಾಲಿಕೆಯನ್ನು ಒಂದಾವರ್ತಿ ಸ್ಪರ್ಶಮಾತ್ರಮಾಡಿದರಿಂದ ನಿನಗೆ ಹಸಿವೆಯು ನಿವೃತ್ತವಾಗುವುದು. ಆ ಮೇಲೆ ಈ ಮಾಲಿಕೆಯನ್ನು ರಾಮನಿಗೋಸ್ಕರ ಅಗಸ್ತ್ಯನ ಕೈಯಲ್ಲಿ ಕೊಡು, ಎಂದು ಬ್ರಹ್ಮನಿಂದ ಹೇಳಿಸಿಕೊಳ್ಳಲ್ಪಟ್ಟವನಾಗಿ ರಾಮನಿಗೋಸ್ಕರ ಅಗಸ್ತ್ಯನ ಕೈಯಲ್ಲಿ ಆ ಮಾಲಿಕೆಯನ್ನು ಸಮರ್ಪಿಸಿದನು ॥ ೨೨ ॥ ೨೩ ॥ ೨೪ ॥

ಮೂ ॥ ಕ್ಷುದಭಾವಮಾತ್ರಮಾಕಾಂಕ್ಷನ್ನಾಮಸೌ ಪರಿಪೃಚ್ಛತಿ ॥
ವ್ಯವಧಾನತಸ್ತತೋ ರಾಮೇ ದದ್ಯಾಚ್ಛ್ವೇತ ಇತಿ ಪ್ರಭುಃ
ಮತ್ವಾ ಬ್ರಹ್ಮಾದಿಶನ್ಮಾಲಾಂ ಪ್ರದಾತುಂ ಕುಂಭಯೋನಯೇ ॥ ೨೫ ॥

ಅ ॥ (ಯಾವ ಕಾರಣದಿಂದ) ಈ ಶ್ವೇತರಾಜನು ಕೇವಲ ಹಸಿವೆಯ ಪರಿಹಾರವನ್ನು ಇಚ್ಛಿಸುವವನಾಗಿ ನನ್ನನ್ನು ಕುರಿತು (ಉಪಾಯವನ್ನು) ಪ್ರಶ್ನೆಮಾಡುತ್ತಾನೋ, (ಅದಕ್ಕಿಂತ ಅಧಿಕವಾದ ಫಲವನ್ನು ಇಚ್ಛಿಸುವವನಾಗಿ ಪ್ರಶ್ನೆಮಾಡಲಿಲ್ಲ. ಕಾಮ್ಯಫಲವನ್ನು ಇಚ್ಛಿಸುವವನಿಗೆ ಕಾಮ್ಯಫಲವನ್ನೇ ಕೊಡಬೇಕು. ಕೃಪೆಯಿಂದಲೂ ಕೂಡ ಅಂತಹನಿಗೆ ಭೋಗಾಧಿಕ್ಯವನ್ನು ಕೊಡಕೂಡದು. ಐಹಿಕ ಕಾಮನೆಯು ದೋಷವಾದುದರಿಂದ ಅದು ಕೃಪೆಗೆ ಪ್ರತಿಬಂಧಕ ವಾಗಿದೆ.) ಆ ಕಾರಣದಿಂದ ಪುರುಷಾಂತರವ್ಯವಧಾನದಿಂದಲೇ ಶ್ವೇತರಾಜನು ಥಮನಲ್ಲಿ ಮಾಲಿಕೆ ಯನ್ನು ಕೊಡಬೇಕು. ಸಾಕ್ಷಾತ್ತಾಗಿ ಕೊಡಬಾರದು. ಈ ಪ್ರಕಾರವಾಗಿ ಸರ್ವಸಮರ್ಥನಾದ ಬ್ರಹ್ಮನು ತಿಳಿದು, ಕುಂಭವೇ ಉತ್ಪತ್ತಿ ಕಾರಣವಾಗಿವುಳ್ಳ ಅಗಸ್ತ್ಯನಿಗೋಸ್ಕರ ಮಾಲಿಕೆಯನ್ನು ಕೊಡುವುದಕ್ಕಾಗಿ ಆಜ್ಞಾಪಿಸಿದನು ॥ ೨೫ ॥

ಮೂ ॥ ತಾಮಗಸ್ತ್ಯ ಕರಪಲ್ಲವಾರ್ಪಿತಾಂ
ಭಕ್ತ ಏಷ ಮಮ ಕುಂಭಸಂಭವಃ ॥
ಇತ್ಯವೇತ್ಯ ಜಗೃಹೇ ಜನಾರ್ದನ-
ಸ್ತೇನ ಸಂಸ್ತುತ ಉಪಾಗಮತ್ಪುರಂ ॥ ೨೬ ॥

ಅ ॥ ದುಷ್ಟರನ್ನು ಪೀಡಿಸತಕ್ಕ ಶ್ರೀ ರಾಮನು ಈ ಕುಂಭದಿಂದ ಹುಟ್ಟಿದ ಅಗಸ್ತ್ಯ ಋಷಿಯು ನನ್ನ ಭಕ್ತನು ಎಂದು ತಿಳಿದು ಅಗಸ್ತ್ಯಋಷಿಯ ಚಿಗುರು ಎಲೆಯಂತೆ ಇರತಕ್ಕ ಹಸ್ತದಿಂದ ಸಮರ್ಪಿಸಲ್ಪಟ್ಟ ಆ ಶ್ವೇತರಾಜನಿಂದ ಕೊಡಲ್ಪಟ್ಟ ಮಾಲಿಕೆಯನ್ನು ಅಂಗೀಕರಿಸಿ ದನು. ಆ ಅಗಸ್ತ್ಯಋಷಿಯಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ ಅಯೋಧ್ಯಾಪಟ್ಟಣ ವನ್ನು ಹೊಂದಿದನು. ॥ ೨೬ ॥

ಮೂ ॥ ಅಥ ಕೇಚಿದಾಸುರಸುರಾಃ ಸುರಾಣಕಾ
ಇತ್ಯುರುಪ್ರಥಿತಪೌರುಷಾಃ ಪುರಾ ॥
ತೇ ತಪಃ ಸುಮಹದಾಸ್ಥಿತಾ ವಿಭುಂ
ಪದ್ಮಸಂಭವಮವೇತ್ಯ (ಕ್ಷ್ಯ) ಚೋಚಿರೇ ॥ ೨೭ ॥

ಅ ॥ ಕಥಾಂತರವನ್ನು ಹೇಳುತ್ತಾರೆ ಮೊದಲು ಅತಿ ಪ್ರಸಿದ್ಧವಾದ ಪರಾಕ್ರಮವುಳ್ಳ ಸುರಾಣಕರೆಂದು ಪ್ರಸಿದ್ಧರಾದ ಕೆಲವರು ಅಸುರರು ಇರುತ್ತಿದ್ದರು. ಆ ಸುರಾಣಕರು ಅತಿ ಶ್ರೇಷ್ಠವಾದ ತಪಸ್ಸಿನಲ್ಲಿರತಕ್ಕವರಾಗಿ ಕಮಲದಿಂದ ಹುಟ್ಟಿದ ಬ್ರಹ್ಮನನ್ನು ತಿಳಿದು ಅಥವಾ ನೋಡಿ ಹೇಳಿದರು. ॥ ೨೭ ॥

ಮೂ ॥ ಭೂರಿಪಾಪಕೃತಿನೋಽಪಿ ನಿಶ್ಚಯೊ-
ನ್ಮುಕ್ತಿಮಾಪ್ನುಮ ಉದಾರಸದ್ಗುಣ ॥
ಇತ್ಯುದೀರಿತಮಜೋಽವಧಾರ್ಯ
ತತ್ಪ್ರಾಹ ಚ ಪ್ರಹಸಿತಾನನಃ ಪ್ರಭುಃ ॥ ೨೮ ॥

ಅ ॥ ಎಲೋ ಉತ್ಕೃಷ್ಟಗಳಾದ, ನಿರ್ದುಷ್ಟಗಳಾದ ಗುಣಗಳುಳ್ಳವನೇ! (ನಾವು) ಬಹಳ ಪಾಪಗಳನ್ನು ಮಾಡಿದವರಾದಾಗ್ಯೂ ನಿಶ್ಚಯದಿಂದ ಮುಕ್ತಿಯನ್ನು ಹೊಂದುವೆವು. ಬ್ರಹ್ಮನು

ಹೀಗೆ ಹೇಳಲ್ಪಟ್ಟ ಮಾತನ್ನು ಮನಸ್ಸಿನಲ್ಲಿ ಧರಿಸಿಕೊಂಡು ಮಂದಸ್ಮಿತವಾದ ಮುಖವುಳ್ಳವನಾಗಿ ಹೇಳಿದನು ॥೨೮॥

ಮೂ ॥ ಯಾವದೇವ ರಮಯಾ ರಮೇಶ್ವರಂ
ನೋ ವಿಯೋಜಯಥ ಸದ್ಗುಣಾರ್ಣವಂ ॥
ತಾವದುಚ್ಚಮಪಿ ದುಷ್ಕೃತಂ ಭವ-
ನ್ಮೋಕ್ಷಮಾರ್ಗಪರಿಪಂಥಿ ನೋಭವೇತ್॥ ೨೯ ॥

ಅ ಎಷ್ಟು ಕಾಲ ಪರ್ಯಂತ ನಿರ್ದುಷ್ಟಗಳಾದ ಗುಣಗಳಿಂದ ಸಮುದ್ರದಂತಿರುವ ಲಕ್ಷ್ಮೀಪತಿಯಾದ ಶ್ರೀ ಹರಿಯನ್ನು ಲಕ್ಷ್ಮೀದೇವಿಯಿಂದ ವಿಯೋಗವನ್ನು ಹೊಂದಿಸಿಕೊಡುವುದಿಲ್ಲವೋ ಅಷ್ಟು ಕಾಲ ತನಕ ಅತಿ ದೊಡ್ಡದಾದಾಗ್ಯೂ ಸ್ವಮಾತೃಗಮನ ಬ್ರಹ್ಮಹತ್ಯಾ ಮೊದಲಾದ ಮಹಾಪಾತಕವು ನಿಮ್ಮ ಮೋಕ್ಷಸಾಧನಕ್ಕೆ ವಿರೋಧಿಯಾದುದು ಆಗುವುದಿಲ್ಲ ॥ ೨೯ ॥

ಮೂ ॥ ಇತ್ಯುದೀರಿತಮವೇತ್ಯ ತೇಽಸುರಾಃ
ಕ್ಷಿಪ್ರಮೋಕ್ಷಗಮನೋತ್ಸುಕಾಃ ಕ್ಷಿತೌ ॥
ಸಾಧನೋಪಚಯಕಾಂಕ್ಷಿಣೋ ಹರೌ
ಶಾಸತಿ ಕ್ಷಿತಿಮಶೇಷತೋಽಭವನ್ ॥ ೩೦ ॥

ಅ ॥ ಆದಾವ ಸುರಾಣಕರು (ಬ್ರಹ್ಮದೇವರಿಂದ) ಹೀಗೆ ಹೇಳಲ್ಪಟ್ಟ ಮಾತನ್ನು ತಿಳಿದು ಶೀಘ್ರದಲ್ಲಿ ಮುಕ್ತಿಯನ್ನು ಹೊಂದುವುದರಲ್ಲಿ ಉತ್ಕಂಠಿತರಾಗಿ, ಮೋಕ್ಷಸಾಧನಾಧಿಕ್ಯವನ್ನು ಇಚ್ಛಿಸುವವರಾಗಿ ಶ್ರೀ ರಾಮನು ಭೂಮಿಯನ್ನು ಆಳುತ್ತಿರಲು, ಎಲ್ಲರೂ ಆ ಭೂಮಿಯಲ್ಲಿ ಹುಟ್ಟಿದರು ॥ ೩೦ ॥

ಮೂ ॥ ತಾನನಾದಿಕೃತದೋಷಸಂಚಯೈ-
ರ್ಮೋಕ್ಷಮಾರ್ಗಗತಿಯೋಗ್ಯತೋಜ್ಝಿತಾನ್ ॥
ಮೈಥಿಲಸ್ಯ ತನಯಾ ವ್ಯಚಾಲಯ-
ನ್ಮಾಯಯಾ ಸ್ವತನುನಾ ಸ್ವಮಾರ್ಗತಃ॥ ೩೧ ॥

ಅ ॥ ಜನಕರಾಜನ ಮಗಳಾದ ಸೀತಾದೇವಿಯು ತನ್ನ ಸ್ವರೂಪಭೂತಳಾದ ದುರ್ಗಾದೇವಿಯಿಂದ ಅಥವಾ ತನ್ನಿಂದ ಅಭಿಮನ್ಯಮಾನವಾದ, ತನ್ನ ದೇಹಸ್ಥಾನೀಯವಾದ, ಭ್ರಾಂತಿಯನ್ನು ಹುಟ್ಟಿಸತಕ್ಕ ಅವಿದ್ಯೆಯಿಂದ ಅನಾದಿಕಾಲವನ್ನು ಆರಂಭಿಸಿ ಮಾಡಲ್ಪಟ್ಟ ದೋಷಗಳ ಸಮೂಹಗಳಿಂದ ಮೋಕ್ಷಮಾರ್ಗದ ಪ್ರಾಪ್ತಿಯಲ್ಲಿ ಯೋಗ್ಯತೆಯಿಂದ ರಹಿತವಾದ ಆ ಸುರಾಣಕರನ್ನು ವಿಷ್ಣುಪ್ರಾಪ್ತಿನಿಮಿತ್ತವಾದ ಜ್ಞಾನಮಾರ್ಗದೆಶೆಯಿಂದ ಅಥವಾ ತನ್ನ ಭಕ್ತರ ತತ್ವಜ್ಞಾನಾಖ್ಯ ಮಾರ್ಗದೆಶೆಯಿಂದ ಅಥವಾ ಚೆನ್ನಾಗಿ ದೈತ್ಯರಿಗೆ ಅಮಾರ್ಗಭೂತವಾದ ತತ್ವಜ್ಞಾನದೆಶೆಯಿಂದ, ಅಥವಾ ಆ ಸುರಾಣಕರರಲ್ಲಿಯೇ ಇರತಕ್ಕ ಸನ್ಮಾರ್ಗದೆಶೆಯಿಂದ ಚಲಿಸಿದಳು. (ಅಂದರೆ ವಿರಹಿತರನ್ನಾಗಿಮಾಡಿದಳು)

**ವಿಶೇಷಾಂಶ**— (1) 'ವ್ಯಚಾಲಯತ್' ಎಂದು ಹೇಳಿದರಿಂದ ಮೊದಲು ವೈಷ್ಣವರಿಂದ ಕೂಡಿಕೊಂಡು ಸಹವಾಸದೆಶೆಯಿಂದ ಜಪಾಕುಸುಮಸಂಪರ್ಕದಿಂದ ಸ್ಫಟಿಕಮಣಿಗಳಲ್ಲಿ ರಕ್ತಿಮಾ ತೋರುವಂತೆಯೇ ಆ ಸುರಾಣಕರಲ್ಲಿಯೂ ಸನ್ಮಾರ್ಗವು ಇತ್ತು, ಎಂದು ಸೂಚಿತ ವಾಯಿತು. (2) ವೈಷ್ಣವರ ಸಮಾಗಮದೆಶೆಯಿಂದ ಸೀತಾರಾಮರು ಲಕ್ಷ್ಮೀನಾರಾಯಣರು ಎಂದು ಯಾವುದು ಯಥಾರ್ಥಜ್ಞಾನವು ಮೊದಲು ಇತ್ತೋ, ಆ ಜ್ಞಾನವಿರುವಾಗ ಮೋಕ್ಷಾಖ್ಯಪ್ರಯೋಜನವು ನಾಶವಾಗುತ್ತದೆ ಎನ್ನುವ ಹೆದರಿಕೆಯಿಂದ ಅಪಹಾಸಮಾಡುತ್ತಿರಲಿಲ್ಲ. ಆದಕಾರಣ ಭ್ರಾಂತಿಯನ್ನು ಹುಟ್ಟಿಸತಕ್ಕ ಮಾಯೆಯಿಂದ ಆ ಬುದ್ಧಿಯನ್ನು ವಿನಾಶಪಡಿಸಿ ಈ ಸೀತಾರಾಮರು ಮನುಷ್ಯರು ಎನ್ನುವ ವಿಪರೀತ ಬುದ್ಧಿಯನ್ನು ಸ್ಥಿರೀಕರಿಸಿದಳು ॥ ೩೧ ॥

ಮೂ ॥ ಆಜ್ಞಯೈವ ಹಿ ಹರೇಸ್ತು ಮಾಯಯಾ
ಮೋಹಿತಾಸ್ತು ದಿತಿಜಾ ವ್ಯನಿಂದಯನ್ ॥
ರಾಘವೋಂ (ವಂ) ನಿಶಿಚರಾಹೃತಾಂ ಪುನ-
ರ್ಜಾನಕೀಂ ಜಗೃಹ ಇತ್ಯನೇಕಶಃ ॥ ೩೨ ॥

ಅ ॥ ('ನ ಋತೇ ತತ್ಕ್ರಿಯತೇ' ಎನ್ನುವ ಶ್ರುತಿಯಿಂದ,) ವಿಶೇಷವಾಗಿ ಆ ಶ್ರೀಹರಿಯ ಆಜ್ಞೆಯಿಂದಲೇ ಶ್ರೀಹರಿಯ ಅಧೀನವಾದ ಮಾಯೆಯಿಂದಲೂ, ದುರ್ಗಾದೇವಿಯಿಂದಲೂ, ತು=ವಿಶೇಷವಾಗಿ ಮೋಹಿತರಾದ, (ಅಂದರೆ ಮೋಹವು ದೈತ್ಯರೂಪವಾದುದರಿಂದ ಮೊದಲು ಆಚ್ಛಾದಿತವಾಗಿತ್ತು. ಈಗಲಾದರೂ ಮಾಯಾವಶದಿಂದ ಪ್ರಕಟೀಭೂತವಾದ ಮೋಹದಿಂದ ಯುಕ್ತರಾದ) ದೈತ್ಯರಾದರೂ ಶ್ರೀ ರಾಮನು ರಾವಣನಿಂದ ಅಪಹರಿಸಿಕೊಳ್ಳಲ್ಪಟ್ಟ ಸೀತಾದೇವಿಯನ್ನು ಪುನಃ ಸ್ವೀಕರಿಸಿದನು, ಹೀಗೆ ಬಹುಪ್ರಕಾರವಾಗಿ ನಿಂದಿಸಿದರು. ಹಿ= ಶ್ರೀ ಹರಿಗೆ ಸ್ವಾತಂತ್ರ್ಯವು ಪ್ರಸಿದ್ಧವು ದೈತ್ಯರಿಗೆ ಮೋಹಸ್ವರೂಪತ್ವವೂ ಪ್ರಸಿದ್ಧವು ॥ ೩೨ ॥

ಮೂ ॥ ಬ್ರಹ್ಮವಾಕ್ಯನೃತಮೇವ ಕಾರಯ-
ನ್ಪಾತಯಂಸ್ತಮಸಿ ಚಾಂಧ ಆಸುರಾನ್ ॥
ನಿತ್ಯಮೇವ ಸಹಿತೋऽಪಿ ಸೀತಯಾ
ಸೋಽಗ್ನಿ(ಜ್ಞ)ಸಾಕ್ಷಿಕಮಭೂದ್ವಿಯುಕ್ತವತ್ ॥ ೩೩ ॥

ಅ ॥ ಶ್ರೀ ರಾಮನು ಬ್ರಹ್ಮನ ಮಾತನ್ನು ಸತ್ಯವನ್ನಾಗಿಯೇ ಮಾಡುವವನಾಗಿ ಸುರಾಣಕಾಖ್ಯ ಅಸುರರನ್ನು ಅಂಧಂತಮಸ್ಸಿನಲ್ಲಿ ಬೀಳಿಸುವವನಾಗಿ, ನಿರಂತರದಲ್ಲಿಯೂ ಸೀತಾದೇವಿಯಿಂದ ಕೂಡಿದವನಾದಾಗ್ಯೂ ಕೂಡ, ಅಗ್ನಿಪ್ರತ್ಯಕ್ಷವಾಗಿ ಅಥವಾ ಅಜ್ಞಾನಿಗಳು ಸಾಕ್ಷಿಯಾಗಿ ಉಳ್ಳದ್ದು ಹೇಗೆ ಆದೀತೋ ಹಾಗೆ ವಿಯೋಗವುಳ್ಳವನಂತೆ ಆದನು. (ಅಂದರೆ— ವಶಿಷ್ಠಾಶ್ರಮವನ್ನು ಕುರಿತು ಅಜ್ಞಾನಿಗಳ ದೃಷ್ಟಿಯಿಂದ ಸೀತೆಯನ್ನು ಕಳುಹಿಸಿಕೊಟ್ಟದ್ದರಿಂದ ಸೀತಾದೇವಿಯಿಂದ ವಿಮುಕ್ತನಾದವನಂತೆ ಆದನು) ॥ ೩೩ ॥

ಮೂ ॥ ತೇನ ಚಾಂಧತಮನು ಈಯುರಾಸುರಾ
ಯಚ್ಛ ಮಾಹ್ವಯದಸೌ ಚ ಮೈಥಿಲೀಂ ॥
ತತ್ರ ಭೂಮಿಶಪಥಚ್ಛಲಾನ್ನೃಣಾಂ
ದೃಷ್ಟಿಮಾರ್ಗಮಪಹಾಯ ಸಾ ಸ್ಥಿತಾ ॥ ೩೪ ॥

41

ಅ ॥ ಸೀತಾರಾಮರಿಂದ ತೋರಿಸಲ್ಪಟ್ಟ ವಿಯೋಗದಿಂದ ಸುರಾಣಕಾಸುರರು ಅಂಧ ತಮಸ್ಸನ್ನು ಹೊಂದಿದರು. ('ಅಗ್ನಿಸಾಕ್ಷಿಕಂ' ಎಂದು ಹೇಳಿದ್ದನ್ನು ಬಿಡಿಸಿ ತೋರಿಸುತ್ತಾರೆ.) ಶ್ರೀ ರಾಮನು ವಶಿಷ್ಠಾಶ್ರಮದಲ್ಲಿರತಕ್ಕ, ಮಿಥಿಲದೇಶಾಧಿಪತಿಯಾದ ಜನಕರಾಜನ ಮಗಳಾದ ಸೀತಾದೇವಿಯನ್ನು ಯಾಗವನ್ನು ಕುರಿತು ಕರೆಸಿದನು. ವಂತ್ರ ಯಜ್ಞವನ್ನು ಮಾಡುವ ಸಮಯದಲ್ಲಿ ಪುನಃ ಕರೆದನು. ಆ ಯಜ್ಞಭೂಮಿಯಲ್ಲಿ ಭೂದೇವಿಯನ್ನು ಕುರಿತು ನಾನು ದುಷ್ಟಳಾಗದಿದ್ದರೆ ಎಲೋ ಭೂಮಿಯೇ ನೀನು ನನಗೆ ಅವಕಾಶವನ್ನು ಕೊಡು ಎನ್ನುವ ಶಪಥದ ಸ್ಮರಣದಶೆಯಿಂದ ಮನುಷ್ಯರ ದೃಷ್ಟಿಗೋಚರತ್ವವನ್ನು ಬಿಟ್ಟು (ಶ್ರೀ ರಾಮನ ಸಮೀಪ ದಲ್ಲಿಯೇ) ಆ ಸೀತಾದೇವಿಯು ಇರುತ್ತಿದ್ದಳು. (ಅಂದರೆ, ವಿದಾರಿತ ಭೂಮಿಯ ಒಳಗೆ ಪ್ರವೇಶ ಮಾಡಿದವಳಾಗಿ ಮನುಷ್ಯರ ದೃಷ್ಟಿಮಾರ್ಗವನ್ನು ಬಿಟ್ಟು ಮನುಷ್ಯರಿಗೆ ಅದೃಶ್ಯಳಾದಳು. ಅಂತೂ ಸೀತಾದೇವಿಯು ನಾನು ನಿಶಾಚರಗಾಮಿಯಾಗದಿದ್ದರೆ ಭೂದೇವಿಯು ನನ್ನನ್ನು ನುಂಗಿಬಿಡಲಿ ಎಂದು ಶಪಥವನ್ನು ಮಾಡಿದಳು) ॥ ೩೪ ॥

'ಬ್ರಹ್ಮವಾಕ್ಯಮೃತಮೇವ ಕಾರಯನ್' ಇತ್ಯಾದಿಗಳನ್ನು ಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ—

ಮೂ ॥ ಗುರುಂ ಹಿ ಜಗತೋ ವಿಷ್ಣುರ್ಬ್ರಹ್ಮಾಣಮಸೃಜತ್ಸ್ವಯಂ ॥
ತೇನ ತದ್ವಚನಂ ಸತ್ಸು ನಾನೃತಂ ಕುರುತೇ ಕ್ವಚಿತ್ ॥ ೨೫ ॥

ಅ ॥ ವ್ಯಾಪ್ತನಾದ ವಿಷ್ಣುವು ತಾನೇವೇ ಬ್ರಹ್ಮನನ್ನು ಜಗತ್ತಿಗೆ ಗುರುವನ್ನಾಗಿ ಮಾಡಿ ಯಾವ ಕಾರಣದಿಂದ ಸೃಷ್ಟಿಸಿದನೋ, ಆ ಕಾರಣದಿಂದ ಆ ಬ್ರಹ್ಮನ ವಚನವನ್ನು ಸಜ್ಜನರ ವಿಷಯದಲ್ಲಿ ಎಲ್ಲಿಯೂ, ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅನೃತವನ್ನಾಗಿ ಮಾಡುವುದಿಲ್ಲ ॥ ೩೫ ॥

ಮೂ ॥ ನಾಸತ್ಸ್ವಪ್ಯನೃತಂ ಕುರ್ಯಾದ್ವಚನಂ ಪಾರಲೌಕಿಕಂ ॥
ಐಹಿಕಂ ತ್ವಸುರೇಷ್ವೇವ ಕ್ವಚಿದ್ಧಂತಿ ಜನಾರ್ದನಃ ॥ ೩೬ ॥

ಅ ॥ ಶ್ರೀ ಹರಿಯು ದುಷ್ಟರಾದ ದೈತ್ಯರಲ್ಲಿಯೂ ಕೂಡ (ಮುಕ್ತಿಯಾಗಲಿ ಇದು ಮೊದಲಾದ) ಪರಲೋಕ ಸಂಬಂಧಿಯಾದ ವಚನವನ್ನು ಅನೃತವನ್ನಾಗಿ ಮಾಡುವುದಿಲ್ಲ ಅಸುರ ರಲ್ಲಿಯೇ;(ಸಜ್ಜನರಲ್ಲಿ ಅಲ್ಲ.)ಐಹಿಕವಾದ ಅಂದರೆ (ಅವಧ್ಯತ್ವ ಮೊದಲಾದ ಭೂಲೋಕ ಸಂಬಂಧಿ ಯಾದ) ಮಾತನ್ನು ಕೆಲವು ಕಡೆ ನಾಶಪಡಿಸುತ್ತಾನೆ. (ಕೆಲವು ಕಡೆ ಬಹುಮಾನಿಸುತ್ತಾನೆ.)

ವಿಶೇಷಾಂಶ—(1) ಪಾರಲೌಕಿಕ ವಚನವು ಕೆಲವು ಕಡೆ ಅನೃತವಾದರೆ ಸಜ್ಜನರಲ್ಲಿಯೂ ಕೂಡ ಅನೃತತ್ವ ಸಂಶಯದಿಂದ ಸಜ್ಜನರಿಗೂ ಕೂಡ ಮೋಕ್ಷಮಾರ್ಗದಲ್ಲಿ ಪ್ರವೃತ್ತಿಯು ಕುಂಠಿತವಾಗಬೇಕಾಗುವುದು. ಆದಕಾರಣ ಪರಲೋಕಸಂಬಂಧಿಯಾದ ವಚನ ವನ್ನು ಅಸಜ್ಜನರಲ್ಲಿಯೂ ಕೂಡ ಅನೃತವನ್ನಾಗಿ ಮಾಡಕೂಡದು. ಐಹಿಕವಾದರೂ ಸಜ್ಜನ ರಿಗೆ ಅನಪೇಕ್ಷಿತವೇ ಆಗಿದೆ. ಆದ ಕಾರಣ ಐಹಿಕದಲ್ಲಿ ಅನೃತತ್ವ ಶಂಕೆಯಿದ್ದಾಗ್ಯೂ ಯಾವ ಹಾನಿಯೂ ಇರುವುದಿಲ್ಲ. ॥ ೩೬ ॥

ಕೆಲವು ಕಡೆ ಏಕೆ ನಾಶಪಡಿಸುತ್ತಾನೆ ಎಂದರೆ —

ಮೂ ॥ ನಿಜಾಧಿಕ್ಯಸ್ಯ ವಿಜ್ಞಪ್ತ್ಯೈ ಕ್ವಚಿದ್ವಾಯುಸ್ತದಾಜ್ಞಯಾ ॥
ಹಂತಿ ಬ್ರಹ್ಮತ್ವಮಾತ್ಮೀಯಮುದ್ಧಾ ಜ್ಞಾಪಯಿತುಂ ಪ್ರಭುಃ ॥ ೩೭ ॥

ಅ ॥ ಶ್ರೀ ಹರಿಯು ಸ್ವಕೀಯವಾದ ಆಧಿಕ್ಯವನ್ನು (ಅಂದರೆ ಬ್ರಹ್ಮನ ಸಕಾಶದಿಂ ಯಿಂದ ತನಗೆ ಉತ್ತಮತ್ವವನ್ನು) (ಸಜ್ಜನರಿಗೆ) ತಿಳಿಸಿಕೊಡುವುದಕ್ಕಾಗಿ ಕೆಲವುಕಡೆ ಐಹಿಕ ವನ್ನು ವಿನಾಶಪಡಿಸುತ್ತಾನೆ. ಪ್ರಭುವಾದ ವಾಯುದೇವರು ಶ್ರೀ ಹರಿಯ ಆಜ್ಞೆಯಿಂದ ತನಗೆ (ಶೇಷಾದಿಗಳದೆಶೆಯಿಂದ) ಉತ್ತಮತ್ವವನ್ನು ತಿಳಿಸಿಕೊಡುವುದಕ್ಕಾಗಿಯೂ, ಸ್ವಕೀಯವಾದ ಭಾವಿ ಚತುರ್ಮುಖತ್ವವನ್ನು ನಿಶ್ಚಯವಾಗಿ ತಿಳಿಸಿಕೊಡುವುದಕ್ಕಾಗಿಯೂ (ಅಸುರರಲ್ಲಿ ಐಹಿಕ ವಾದ ಬ್ರಹ್ಮನ ವಚನವನ್ನು) ವಿನಾಶಪಡಿಸುತ್ತಾನೆ ॥ ೩೭ ॥

ಮೂ ॥ ನಾನ್ಯಃ ಕಶ್ಚಿತ್ತದ್ವರಾಣಾಂ ಶಾಪಾನಾಮುಪ್ಯತಿಕ್ರಮೀ ॥
ಅಯೋಗ್ಯೇಷು ತು ರುದ್ರಾದಿವಾಕ್ಯಂ ತೌ ಕುರುತೋ ಮೃಷಾ ॥ ೩೮ ॥

ಅ ॥ ವಿಷ್ಣು ವಾಯುಗಳಿಂದ ವ್ಯತಿರಿಕ್ತನಾದ ಯಾವ ಪುರುಷನೂ ಕೂಡ ಬ್ರಹ್ಮನ ವರಗಳನ್ನೂ ಶಾಪಗಳನ್ನೂ ಸಹ ಅತಿಕ್ರಮಿಸುವ ಸ್ವಭಾವವುಳ್ಳವನು ಎಲ್ಲೆಲ್ಲಿಯೂ ಇಲ್ಲವೇ ಇಲ್ಲ. ಅಯೋಗ್ಯರಲ್ಲಿ ಆದರೂ ಯೋಗ್ಯತೆಯಿಂದ ಅಧಿಕವಾದ ರುದ್ರಾದಿ ವಾಕ್ಯವನ್ನು ಆ ವಿಷ್ಣು ವಾಯುಗಳು ಮಿಥ್ಯೆಯನ್ನಾಗಿ ಮಾಡುತ್ತಾರೆ (ಯೋಗ್ಯರಲ್ಲಿಯೂ ಕೂಡ ಏಕದೇಶ ದಿಂದ ಮಿಥ್ಯೆಯನ್ನಾಗಿ ಮಾಡುತ್ತಾರೆ) (ತು=) ಯೋಗ್ಯತೆಗಿಂತ ಸ್ವಲ್ಪ ಅಧಿಕವಾದ ರುದ್ರಾದಿ ವಾಕ್ಯವನ್ನು (ಕೆಲವು ವೇಳೆ ಸತ್ಯವನ್ನಾಗಿ ಮಾಡುತ್ತಾರೆ.) ॥೩೮ ॥

ಮೂ ॥ ಏಕದೇಶೇನ ಸತ್ಯಂ ತು ಯೋಗ್ಯೇಷ್ವಪಿ ಕದಾಚನ ॥
ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ ಕಸ್ಯಚಿತ್ ॥
ಏತದರ್ಥೋಽವತಾರಸ್ತು (ಶ್ಚ) ವಿಷ್ಣೋರ್ಭವತಿ ಸರ್ವದಾ ॥ ೩೯ ॥

ಅ ॥ ಯೋಗ್ಯರಲ್ಲಿಯೂ ಕೂಡ ಕೆಲವು ವೇಳೆ ಏಕದೇಶದಿಂದಲೇ ವಿಶೇಷವಾಗಿ ಸತ್ಯ ವನ್ನಾಗಿ (ಹರಿ-ವಾಯುಗಳು) ಮಾಡುತ್ತಾರೆ. ಅಥವಾ ಯೋಗ್ಯರಲ್ಲಿಯೂ ಕೂಡ ವಿಶೇಷ ವಾಗಿ ಸತ್ಯವನ್ನಾಗಿ ಮಾಡುತ್ತಾರೆ. ಕೆಲವು ವೇಳೆ ಏಕದೇಶದಲ್ಲಿ ಸತ್ಯವನ್ನು ಮಾಡುವುದಿಲ್ಲ. (ದೂರ್ವಾಸಋಷಿಯ ಮಾತನ್ನು ಅಂಬರೀಷ ರಾಜನಲ್ಲಿ ವ್ಯರ್ಥೀಕರಿಸಿದ್ದಾರೆ) ವಿಷ್ಣುವಿನ ವಚನವು ಯಾವ ಪುರುಷನಿಗೂ ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಮಿಥ್ಯೆಯು ಆಗುವುದಿಲ್ಲ. ವಿಷ್ಣುವಿನ ಅವತಾರವು ಸರ್ವ ಕಾಲಗಳಲ್ಲಿಯೂ ತನ್ನ ವರವನ್ನು ರಕ್ಷಿಸುವುದು, ಇತರರ ವರವನ್ನು ವಿನಾಶಪಡಿಸುವುದು ಇದೇ ಪ್ರಯೋಜನವಾಗಿ ಉಳ್ಳದ್ದು. ಅಥವಾ ಪೂರ್ವೋಕ್ತವಾದ ನಾನಾವಿಧ ಮರ್ಯಾದಾರಕ್ಷಣೆಯೇ ಪ್ರಯೋಜನವಾಗಿ ಉಳ್ಳದ್ದು ಆಗುತ್ತದೆ.

ವಿಶೇಷಾಂಶ— (1) ಅಸುರರನ್ನು ಕುರಿತು ಬುದ್ಧರೂಪಿಯಾದ ಶ್ರೀ ಹರಿಯ ವಚ ನವು ಅನೃತವಾಯಿತನ್ನುವ ಶಂಕೆಯನ್ನು ಆಚಾರ್ಯರೇ 'ದೇವತೆಗಳಿಗೆ ಆ ವಾಕ್ಯವೂ ಸತ್ಯವೇ. ಅಸುರರಾದವರೂ ತಮ್ಮ ಭ್ರಾಂತಿಯಿಂದ ಬೇರೆ ಪ್ರಕಾರ ತಿಳಿದುಕೊಂಡಿರುವರು' ಎಂದು ಹೇಳುತ್ತಾ ಪರಿಹರಿಸುವರು. ಆದಕಾರಣ 'ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ'

ಎನ್ನುವುದಕ್ಕೆ ಭಂಗವಿಲ್ಲ. (2) ವೇದವ್ಯಾಸರೂ ಕೂಡ ದುಷ್ಟ ಶಾಸ್ತ್ರಗಳ ರೀತಿಯಿಂದಲೇ ಆ ಶೈವ ಪುರಾಣಾದಿಗಳನ್ನು ಮಾಡಿದರು. ಆದ ಕಾರಣ ಆ ಶೈವ ಪುರಾಣಾದಿಗಳೂ ಕೂಡ ದುರ್ದರ್ಶನಗಳ ಅನುವಾದ ರೂಪಗಳೇ. ಆ ಶೈವ ಪುರಾಣಾದಿಗಳೂ ಸಾಕ್ಷಾತ್ತಾಗಿ ವೇದ ವ್ಯಾಸರ ವಾಕ್ಯಗಳಲ್ಲ. ಆದುದರಿಂದಲೂ ಕೂಡ ಭಗವಂತನ ವಾಕ್ಯಕ್ಕೆ ಅನೃತತ್ವ ಶಂಕೆಯೇ ಇರುವುದಿಲ್ಲ. ಆದುದರಿಂದಲೇ ಭಾಗವತದಲ್ಲಿ ಶ್ರೀ ಹರಿಯನ್ನು 'ಸತ್ಯವ್ರತಂ ಸತ್ಯಪರಂ' ಎಂದು ಸ್ತೋತ್ರ ಮಾಡುತ್ತಾರೆ (3) ಶ್ರೀ ಹರಿಯೂ ಕೂಡ ಮೂರು ಹೆಜ್ಜೆಗಳನ್ನು ಕೊಡು ಎನ್ನುವ ತನ್ನ ಉಕ್ತಿಗೆ ಸತ್ಯತ್ವವನ್ನು ರಕ್ಷಿಸುವುದಕ್ಕಾಗಿ ತನ್ನ ಹೆಜ್ಜೆಗಳನ್ನೇ ಬೆಳೆಸಿದನು. ಮೂರು ಹೆಜ್ಜೆಗೆ ವ್ಯತ್ಯಾಸವನ್ನು ಮಾಡಲಿಲ್ಲ. (4)ಶಿಶುಪಾಲನ ತಾಯಿಯನ್ನು ಕುರಿತು ನಿನ್ನ ಮಗನ ನೂರು ಅಪರಾಧಗಳನ್ನು ಸಹಿಸುವೆನು ಎನ್ನುವ ತನ್ನ ಉಕ್ತಿಗೆ ಸತ್ಯತ್ವಕ್ಕಾಗಿಯೇ ನೂರು ಅಪರಾಧಗಳನ್ನು ಶಿಶುಪಾಲನು ಮಾಡುವ ಪರ್ಯಂತ ಆತನನ್ನು ಸಂಹರಿಸಲಿಲ್ಲ (5) ರುಗ್ಮಿಣಿಯ ಹತ್ತಿರ ಪ್ರೇಮಕಲಹ ಸಮಯದಲ್ಲಿ **'ನಿಷ್ಕಿಂಚನಾ ವಯಂ ಶಶ್ವತ್ ನಿಷ್ಕಿಂಚನಜನ ಪ್ರಿಯಾಃ । ತಸ್ಮಾತ್ಪ್ರಾಯೇಣ ನೋ ಹ್ಯಾಡ್ಯಾಃ ನ ಭಜಂತಿ ಸುಮಧ್ಯಮೇ ॥'** ಇದು ಮೊದಲಾದ ಆಪಾತತಃ ಸತ್ಯಾರ್ಥಗಳೆಂದು ತೋರತಕ್ಕ ತನ್ನ ಮಾತುಗಳಿಗೆ **'ನಿಷ್ಕಿಂಚನೋ ನನು ಭವಾನ್ನ ಯತೋಽಸ್ತಿ ಕಿಂಚಿತ್ ಯಸ್ಮೈ ಬಲಿಂ ಬಲಿಭುಜೋಽಪಿ ಹರಂತ್ಯಜಾದ್ಯಾಃ ।'** ಇತ್ಯಾದಿಗಳಿಂದ ರುಗ್ಮಿಣಿಯಿಂದ ಹೇಳಲ್ಪಟ್ಟ ಅನುಕೂಲಗಳಾದ ಸತ್ಯಾರ್ಥಗಳನ್ನಾಗಿ, ತನ್ನ ವಚನಕ್ಕೆ ಸತ್ಯತ್ವ ಬರುವುದಕ್ಕಾಗಿಯೇ **'ಮಯೋದಿತಂ ಯದನ್ವರ್ಥಂ ಸರ್ವಂ ತತ್ಸತ್ಯಮೇವ ಹಿ'** ಎಂದು ತಾನೂ ಕೂಡ ಅಂಗೀಕರಿಸಿದನು. ಆದುದರಿಂದ ಪರಿಹಾಸ ಕಥೆಯಲ್ಲಿಯೂ ಕೂಡ ಶ್ರೀ ಹರಿಯ ಮಾತು ಅನೃತವಾಗುವುದಿಲ್ಲ. ಬೇರೆ ಕಡೆಯಲ್ಲಿ ಅನೃತವಾಗುವುದಿಲ್ಲವೆಂದು ಸುತರಾಂ ಸಿದ್ಧವು. ಆದುದರಿಂದಲೇ **' ನೈವಾಲೀಕಂ ಭವತ್ಯೇವ ವಚಸ್ತೇ ಮಧುಸೂದನ।'** ಎಂದು ರುಗ್ಮಿಣೀರೂಪಳಾದ ಲಕ್ಷ್ಮಿಯೂ ಕೂಡ ಹೇಳಿದಳು. ॥ ೩೯ ॥

ಪ್ರಕೃತವನ್ನು ಅನುಸರಿಸುತ್ತಾರೆ.—

ಮೂ ॥ **ಪ್ರವಿಶ್ಯ ಭೂಮೌ ಸಾ ದೇವೀ ಲೋಕದೃಷ್ಟ್ಯನುಸಾರತಃ ।**
**ರೇಮೇ ರಾಮೇಣಾವಿಯುಕ್ತಾ ಭಾಸ್ಕರೇಣ ಪ್ರಭಾ ಯಥಾ ॥ ೪೦ ॥**

**ಅ** ॥ ಆ ಸೀತಾದೇವಿಯು ಲೋಕದೃಷ್ಟಿಯ ಅನುಸಾರದೆಶೆಯಿಂದ ಭೂಮಿಯಲ್ಲಿ ಪ್ರವೇಶ ಮಾಡಿ ನಿತ್ಯದಲ್ಲಿಯೂ ಸೂರ್ಯನಿಂದ ವಿಯೋಗವಿಲ್ಲದಿರುವ ಸೂರ್ಯಕಾಂತಿಯು ಸೂರ್ಯನಿಂದಲೆಂಬಂತೆ ಶ್ರೀ ರಾಮನಿಂದ ವಿಯೋಗವಿಲ್ಲದಿರುವವಳಾಗಿಯೇ (ಅಂದರೆ ಸರ್ವದಾ ಸಂಯುಕ್ತಳಾಗಿಯೇ) ಕ್ರೀಡಿಸಿದಳು. ॥ ೪೦ ॥

ಮೂ ॥ **ಏವಂ ರಮಾಲಾಲಿತಪಾದಪಲ್ಲವಃ**
**ಪುನಶ್ಚ(ಸ್ಸ) ಯಜ್ಞೈರ(ಶ್ಚ)ಯಜತ್ಸ್ವ(ಸ್ವ)ಮೇವ ॥**
**ವರಾಶ್ವಮೇಧಾದಿಭಿರಾಪ್ತಕಾಮೋ**
**ರೇಮೇಽಭಿರಾಮೋ ನೃಪತೀನ್ನಿಶಿಕ್ಷಯನ್ ॥ ೪೧ ॥**

**ಅ** ॥ ಹಿಂದೆ ಹೇಳಿದ ಪ್ರಕಾರದಿಂದ ಅದೃಶ್ಯಳಾದ ಸೀತಾದೇವಿಯಿಂದ ಕೊಂಡಾಡಲ್ಪಟ್ಟ ಕಿಸಲಯಗಳಂತೆ ಇರತಕ್ಕ ಚರಣಗಳುಳ್ಳ ಶ್ರೀ ರಾಮನು ಕ್ರೀಡಿಸಿದನು. ಮತ್ತೂ ಕೂಡ

ಉತ್ಕೃಷ್ಟಗಳಾದ ಅಶ್ವಮೇಧವೇ ಮೊದಲಾಗಿವುಳ್ಳ ಯಾಗಗಳಿಂದ ರಾಜರನ್ನು ಶಿಕ್ಷಿಸುತ್ತಾ (ಅಂದರೆ ರಾಜರೆಲ್ಲರೂ ಯಜ್ಞಗಳನ್ನು ಮಾಡಲೇಬೇಕು ಎನ್ನುವ ಉಪದೇಶವನ್ನು ಮಾಡುತ್ತಾ) ತನ್ನನ್ನೇ ಹೋಮಿಸಿಕೊಂಡನು. (ಅಂದರೆ ಪೂಜಿಸಿಕೊಂಡನು.) ಪ್ರಾಪ್ತವಾದ ಸಕಲಾ ಭೀಷ್ಟಸಿದ್ಧಿಯುಳ್ಳ ಮನೋಹರನಾದ ಶ್ರೀ ರಾಮನು (ಸೀತಾದೇವಿಯಿಂದ ಕೂಡಿಕೊಂಡು) ಕ್ರೀಡಿಸಿದನು ॥ ೪೧ ॥

ಮೂ ॥ ರಾಮಸ್ಯ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ॥
ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥ ೪೨ ॥

ಅ ॥ ಜನಕರಾಜನ ಮಗಳಾದ ಸೀತಾದೇವಿಯು ಶ್ರೀ ರಾಮನಿಗೆ ದೃಗ್ಗೋಚರ ಳಾಗಿಯೂ ಇತರರ ದೃಷ್ಟಿಗೆ ಅಗೋಚರಳಾಗಿಯೂ ಭೂಮಿಪ್ರವೇಶದ್ದೆಶೆಯಿಂದ ಮೇಲೆ ಏಳುನೂರು ವರುಷಗಳಲ್ಲಿ (೭00) ಕ್ರೀಡಿಸುತ್ತಿದ್ದಳು. ॥ ೪೨ ॥

ಮೂ ॥ ಏವಂವಿಧಾನ್ಯಗಣಿತಾನಿ ಜನಾರ್ದನಸ್ಯ
ರಾಮಾವತಾರಚರಿತಾನಿ ತದನ್ಯಪುಂಭಿಃ ।
ಶಕ್ಯಾನಿ ನೈವ ಮನಸಾಪಿ ಹಿ ತಾನಿ ಕರ್ತುಂ
ಬ್ರಹ್ಮೇಶ ಶೇಷ ಪುರುಹೂತಮುಖೈಃ ಸುರೈಶ್ಚ ॥ ೪೩ ॥

ಅ ॥ ಶ್ರೀ ಹರಿಯ ಇಂತಹ ಪೂರ್ವೋಕ್ತಪ್ರಕಾರಗಳಾದ ಅನಾದ್ಯನಂತಕಾಲಗಳಲ್ಲಿಯೂ ಅನಂತಾನಂತ ಬ್ರಹ್ಮರ ಪ್ರತಿದಿವಸಗಳಲ್ಲಿ ಮಾಡಲ್ಪಡುವುದರಿಂದ ಅಸಂಖ್ಯಾಕಗಳಾದ ರಾಮಾ ವತಾರದ ಚರಿತ್ರೆಗಳು ಬ್ರಹ್ಮನು-ರುದ್ರನು-ಶೇಷನು-ದೇವೇಂದ್ರನು ಇವರೇ ಮೊದಲಾಗಿವುಳ್ಳ ದೇವತೆಗಳಿಂದಲೂ ಕೂಡ ಯಾವ ಕಾರಣದೆಶೆಯಿಂದ ಮನಸ್ಸಿನಿಂದಲೂ ಮಾಡಲಿಕ್ಕೆ ಶಕ್ಯ ಗಳಾಗುವುದಿಲ್ಲವೋ, ಆದಕಾರಣ ಬ್ರಹ್ಮಾದಿಗಳದೆಶೆಯಿಂದ ಇತರರಾದ ಋಷ್ಯಾದಿಗಳಿಂದ ಆ ರಾಮಾವತಾರಚರಿತ್ರೆಗಳು ಮನಸ್ಸಿನಿಂದಲೂ ಕೂಡ ಸ್ಮರಿಸಲಿಕ್ಕೆ ಶಕ್ಯಗಳಲ್ಲವೆಂದು (ಏನು ಹೇಳಬೇಕು?) ॥ ೪೩ ॥

ಮೂ ॥ ತಸ್ಯೈವಮುಜ್ಜ್ವಲಭುವನಲೋಕಸಮಾಮಿಮಾಂ ಕ್ಷ್ಮಾಂ
ಕೃತ್ವಾನುಶಾಸತ ಉದೀಕ್ಷ್ಯ ಗುಣಾನ್ ಧರಾಯಾಃ ॥
ವೈಶೇಷ್ಯಮಾತ್ಮಸದನಸ್ಯ ಹಿ ಕಾಂಕ್ಷಮಾಣಾಃ
ಬೃಂದಾರಕಾಃ ಕಮಲಜಂ ಪ್ರತಿ ತಚ್ಛಶಂಸುಃ ॥ ೪೪ ॥

ಅ ॥ ದೇವತೆಗಳು ಶ್ರೀ ರಾಮನು ಹಿಂದೆ ಹೇಳಿದ ಪ್ರಕಾರ ಈ ಭೂಮಿಯನ್ನು ಬ್ರಹ್ಮ ಲೋಕಕ್ಕೆ (ಸತ್ಯಲೋಕಕ್ಕೆ) ಸಮಾನವನ್ನಾಗಿ ಮಾಡಿ ರಕ್ಷಿಸುತ್ತಿರಲು ಭೂದೇವಿಯ ಗುಣಗಳನ್ನು ನೋಡಿ ತಮ್ಮ ಲೋಕಕ್ಕೆ (ಅಂದರೆ ಅಂತರಿಕ್ಷಾದಿ ಆರು ಲೋಕಗಳಿಗೆ (ಭೂಲೋಕದೆಶೆಯಿಂದ) ಉತ್ತಮತ್ವವನ್ನು ಇಚ್ಛಿಸುವವರಾಗಿ ಬ್ರಹ್ಮನನ್ನು ಕುರಿತು ಹೇಳಿದರು. ॥ ೪೪ ॥

ಮೂ ॥ ಆಮಂತ್ರ್ಯ ತೈಃ ಸಹ ವಿಭುರ್ಭವತ್ಪ್ರಯಾಣಂ
ಶ್ವೇತಾಯ ಸದ್ಮನ ಇಯೇಷ ದಿದೇಶ ಚಾಥ ॥
ರುದ್ರಂ ಸ್ವಲೋಕಗಮನಾಯ ರಘೂತ್ತಮಸ್ಯ
ಸಂಪ್ರಾರ್ಥನೇ ಸ ಚ ಸಮೇತ್ಯ ವಿಭುಂ ಯಯಾಚೇ ॥ ೪೫ ॥

ಅ ॥ ಬ್ರಹ್ಮನು ಆ ದೇವತೆಗಳಿಂದ ಕೂಡಿಕೊಂಡು ವಿಚಾರಮಾಡಿ ತನ್ನ ಮಂದಿರವಾದ ಶ್ವೇತದ್ವೀಪಾಖ್ಯವಾದ ತನ್ನ ಲೋಕಕ್ಕೋಸ್ಕರ ಶ್ರೀ ರಾಮಾವತಾರನಾದ ಶ್ರೀ ಹರಿಯ ಪ್ರಯಾಣವನ್ನು ಇಚ್ಛಿಸಿದನು. ತನ್ನ ಲೋಕವನ್ನು ಕುರಿತು ಹೋಗುವುದಕ್ಕೋಸ್ಕರ ಶ್ರೀ ರಾಮನನ್ನು ಪ್ರಾರ್ಥಿಸುವ ವಿಷಯದಲ್ಲಿ ರುದ್ರನಿಗೆ ಅಪ್ಪಣೆಕೊಟ್ಟನು. ಆ ರುದ್ರನಾದರೂ ರಾಮನ ಸಮೀಪಕ್ಕೆ ಬಂದು ಬೇಡಿಕೊಂಡನು.

ವಿಶೇಷಾಂಶ—(1) ಭೂಲೋಕದೆಶೆಯಿಂದ ತಮ್ಮ ಲೋಕಕ್ಕೆ ಉತ್ತಮತ್ವವನ್ನು ಇಚ್ಛಿಸಿದರೆ ಅಸೂಯಾಶಂಕೆಯು ಬರುವುದು; ಮತ್ತು ಮಹತ್ತರವಾದ ಸಾಮ್ರಾಜ್ಯದೆಶೆಯಿಂದ ಶ್ರೀರಾಮನನ್ನು ತಪ್ಪಿಸಿದರೆ ಮಹಾಪರಾಧವು ಬರುವುದು. ಆದಕಾರಣ ತಾನೇ ದೇವತೆಗಳನ್ನು ಕರೆದುಕೊಂಡು ಶ್ರೀ ರಾಮನನ್ನು ಪ್ರಾರ್ಥಿಸಲಿಕ್ಕೆ ಬರಲಿಲ್ಲ. ಮತ್ತೆ ತನ್ನ ಮಗನಾದ, ಶ್ರೀ ಹರಿಯ ಮೊಮ್ಮಗನಾದ ರಾಮನಾಮದಲ್ಲಿ ವಿಶೇಷತಃ ಪ್ರಿಯನಾದ ರುದ್ರನಿಗೆ ಅಪ್ಪಣೆಕೊಟ್ಟನು. ॥ ೪೫ ॥

ಇದನ್ನೇ ಸ್ಪಷ್ಟೀಕರಿಸುತ್ತಾರೆ.—

ಮೂ ॥ ಏಕಾಂತಮೇತ್ಯ ರಘುಪೇಣ ಸಮಸ್ತಕಾಲೋ
ರುದ್ರೋ ಜಗಾದ ವಚನಂ ಜಗತೋ ವಿಧಾತುಃ ॥
ವೈಶೇಷ್ಯಮಾತ್ಮಸದ (ಭವ) ನೆ ಸ್ವ ಹಿ ಕಾಂಕ್ಷಮಾಣಾ-
ಸ್ತ್ವಾಮರ್ಥಯಂತಿ ವಿಬುಧಾಃ ಸಹಿತಾ ವಿಧಾತ್ರಾ ॥ ೪೬ ॥

ಅ ॥ ಸರ್ವರನ್ನು ನಾಶಪಡಿಸತಕ್ಕ ರುದ್ರನು ಶ್ರೀ ರಾಮನಿಂದ ಏಕಾಂತವನ್ನು ಹೊಂದಿ ಜಗತ್ತನ್ನು ಸೃಷ್ಟಿಸತಕ್ಕ ಬ್ರಹ್ಮನ ವಚನವನ್ನು ಹೇಳಿದನು. ಬ್ರಹ್ಮನಿಂದ ಸಹಿತರಾದ ದೇವತೆಗಳು ತಮ್ಮ ಮಂದಿರಕ್ಕೆ (ಭೂಮಿಯದೆಶೆಯಿಂದ) ಉತ್ತಮತ್ವವನ್ನು ಇಚ್ಛಿಸುವವರಾಗಿ ನಿನ್ನನ್ನು ಪ್ರಾರ್ಥಿಸುತ್ತಾರೆ—

ವಿಶೇಷಾಂಶ— (1) ದೇವತೆಗಳ ಕಾರ್ಯಕ್ಕಾಗಿಯೇ ರುದ್ರನು ಬಂದದ್ದು. ತನಗಾದರೂ ಸಂಹಾರದಲ್ಲಿಯೇ ಪ್ರೀತಿಯು ಎಂದು ಸೂಚಿಸುವುದಕ್ಕಾಗಿ ಸಮಸ್ತ ಕಾಲಃ ರುದ್ರಃ' ಎಂದು ಹೇಳಿರುವರು. (2) ಅಥವಾ ಭೂಮಿಯನ್ನು ಭಾಗ್ಯದಿಂದ ತಪ್ಪಿಸುವಿಕೆಯು ಸಂಹಾರಕನಾದ ಈ ರುದ್ರನಿಗೆ ಪ್ರಿಯವೆಂದು ಸೂಚಿಸುವುದಕ್ಕಾಗಿ 'ಸಮಸ್ತ ಕಾಲಃ' ಎಂದು ಹೇಳಿರುವರು. 'ಸಮಸ್ತಂ ಕಾಲಯತಿ-ಕಲಹಿಂಸಾಯಾಂ' ಎನ್ನುವ ಧಾತುವಿನದೆಶೆಯಿಂದ ಸಮಸ್ತವನ್ನು ನಾಶಪಡಿಸುವವನು, ಎಂದು ವ್ಯುತ್ಪತ್ತಿಯು. (3) 'ಜಗತೋ ವಿಧಾತುಃ' ಎಂದು ಹೇಳಿದರಿಂದ ಭೂಮಿಯನ್ನೂ ಕೂಡ ತಾನೇ ಸೃಷ್ಟಿಮಾಡಿದರಿಂದ ತಾನು ಸೃಷ್ಟಿಮಾಡಿದ ಲೋಕಕ್ಕೆ

ಅಧಿಕ್ಯವು ಬಾದರೆ, ತನ್ನ ಪುತ್ರಿಯ ಸೌಭಾಗ್ಯವನ್ನು ಕಂಡರೆ ಹೇಗೆ ಸಂತೋಷವೋ ಹಾಗೆಯೇ ಸಂತೋಷವು. ಅಸೂಯೆಯು ಇಲ್ಲವೆಂದು ಸೂಚಿತವಾಯಿತು. (4) ಬ್ರಹ್ಮನು ದೇವತೆಗಳ ಕಾರ್ಯಕ್ಕಾಗಿಯೇ ನನಗೆ ಆಜ್ಞಾಪಿಸಿದನು. ನನಗೆ ಪ್ರಾಧಾನ್ಯವಿದ್ದುದರಿಂದ ಅಲ್ಲ ಎನ್ನುವ ಅಭಿಪ್ರಾಯದಿಂದ 'ವಿಧಾತ್ರಾ ಸಹಿತಾಃ ವಿಬುಧಾಃ' ಎಂದು ದೇವತೆಗಳಿಗೇನೇ ಪ್ರಾಧಾನ್ಯವನ್ನು ಹೇಳಿರುವರು. (5) (ಹಿ=ಶಬ್ದದಿಂದ) ಭೂಲೋಕದೆಶೆಯಿಂದ ಸ್ವರ್ಗಲೋಕಕ್ಕೆ ಆಧಿಕ್ಯವು ಪ್ರಸಿದ್ಧವು. ಇಲ್ಲದಿದ್ದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿಗಳಿಂದ ಹೇಳಲ್ಪಟ್ಟ ಸ್ವರ್ಗದ ಇಚ್ಛೆಯಿಂದ ಜೋತಿಷ್ಟೋಮಕರಣವೇ ಕೂಡದೇ ಹೋಗಬೇಕಾಗುವುದು. ಆದ ಕಾರಣ ದೇವತೆಗಳದ್ದೂ ಕೂಡ ಅತ್ಯಂತ ಅಪರಾಧವಿಲ್ಲ ॥ ೪೬ ॥

ಮೂ ॥ ಪುತ್ರಸ್ತ್ವವೇಶ ಕಮಲಪ್ರಭವಸ್ತಥಾಹಂ
ಪೌತ್ರಸ್ತು ಪೌತ್ರಕವಚೋ ಯದಪಿ ಹ್ಯಯೋಗ್ಯಂ ॥
ಸಂಭಾವಯಂತಿ ಗುಣಿನಸ್ತದಹಂ ಯಯಾಚೇ
ಗಂತುಂ ಸ್ವಸದ್ಮ ನತಿಪೂರ್ವಮಿತೋ ಭವಂತಂ ॥ ೪೭ ॥

ಅ ॥ ಸರ್ವ ಸಮರ್ಥನಾದ ಶ್ರೀ ರಾಮನೇ! ಕಮಲದಲ್ಲಿ ಹುಟ್ಟಿದ ಬ್ರಹ್ಮನು ನಿನ ಮಗನು. ಹಾಗೆಯೇ ನಾನಾದರೂ ಮೊಮ್ಮಗನು. ಯದ್ಯಪಿ ಪೌತ್ರನ (ಮೊಮ್ಮಗನ) ಮಾತ್ನು ಸ್ವೀಕರಿಸಲು ಯೋಗ್ಯವಲ್ಲ. ಆದಾಗ್ಯೂ ಯಾವ ಕಾರಣದಿಂದ ಸದ್ಗುಣಗಳುಳ್ಳವರು ಬಹು ಮಾನಿಸುತ್ತಾರೋ, ಅದುದರಿಂದ ಈ ಭೂಮಿಯ ಸಕಾಶದೆಶೆಯಿಂದ ನಿನ್ನ ಮಂದಿರವಾದ ವೈಕುಂಠವನ್ನು ಕುರಿತು ಹೋಗಲಿಕ್ಕೆ ಪ್ರಣಾಮ ಪೂರ್ವಕವಾಗಿ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ ॥ ೪೭ ॥

ಮೂ ॥ ಯತ್ಕಾರ್ಯಸಾಧನಕೃತೇ ವಿಬುಧಾರ್ಥಿತಸ್ತ್ವಂ
ಪ್ರಾದುಶ್ಚ ಕರ್ಥ ನಿಜರೂಪಮನುಶೇಷಮೇವ ॥
ತತ್ಸಾಧಿತಂ ಹಿ ಭವತಾ ತದಿತಃ ಸ್ವಧಾಮ
ಕ್ಷಿಪ್ರಂ *ಪ್ರಯಾಹಿ ಹರ್ಷಂ ವಿಬುಧೇಷು ಕುರ್ವನ್ ॥ ೪೮ ॥

ಅ ॥ ನೀನು ಯಾವ ಕಾರ್ಯದ ಸಾಧನವನ್ನು ಸಂಪಾದಿಸುವುದಕ್ಕಾಗಿ ದೇವತೆಗಳಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟವನಾಗಿ ತನ್ನ ರೂಪವನ್ನು ಪ್ರಾದುರ್ಭವಿಸಿರುತ್ತೀಯೋ, ಅದೆಲ್ಲವೂ ಯಾವ ಕಾರಣದಿಂದ ನಿನ್ನಿಂದ ಸಂಪಾದಿಸಿಕೊಳ್ಳಲ್ಪಟ್ಟಿತೋ, ಆ ಕಾರಣದಿಂದ ದೇವತೆಗಳಲ್ಲಿ ಹರ್ಷವನ್ನು ಮಾಡುವವನಾಗಿ ಈ ಲೋಕದೆಶೆಯಿಂದ ಶೀಘ್ರದಲ್ಲಿ ನಿನ್ನ ಮಂದಿರವನ್ನು ಕುರಿತು ಹೋಗು, (ಎಂದು ಬೇಡಿದನು).

**ವಿಶೇಷಾಂಶ**— ಯಾವಾಗಲೂ ರಾಮದೇವರ ದರ್ಶನದಿಂದುಂಟಾಗುವ ಸುಖಕ್ಕೆ ವಿರೋಧಿಯಾಗಿರುವುದರಿಂದಲೂ, ಅನೇಕ ಯಜ್ಞಾದಿಗಳಿಂದುಂಟಾಗತಕ್ಕ ಸುಖಕ್ಕೆ ವಿರೋಧಿಯಾಗಿರುವುದರಿಂದಲೂ ದೃಢವಾದ ಹರ್ಷವಾಗುವುದಿಲ್ಲವೆಂದು ಸೂಚಿಸುವುದಕ್ಕಾಗಿ 'ಹರುಷಂ' ಎಂದು ವಿಶ್ಲಿಷ್ಟವಾಗಿ ಹೇಳಿರುವರು ॥ ೪೮ ॥

---

*'ಪ್ರಯಾಹಿ ಹರುಷಂ ವಿಬುಧೇಷು ಕುರ್ವನ್' ಎಂದು ವಾದಿರಾಜೀಯ ಪಾಠವು.

ಮೂ ॥ ಓಮಿತ್ಯುವಾಚ ಭಗವಾಂಸ್ತದಶೇಷಮೇನ
ಶ್ರುತ್ವಾ ರಹಸ್ಯಥ ತನುಸ್ತ್ವ ಪರಾ ಹರಸ್ಯ ॥
ದೂ (ದು) ರ್ವಾಸನಾಮಯುಗಿಹಾಗಮದಾಶು ರಾಮಂ
ಮಾಂ ಭೋಜಯ ಕ್ಷುಧಿತಮಿತ್ಯಸಕೃದ್ಬ್ರುವಾಣಾ ॥ ೪೯ ॥

ಅ ॥ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀ ರಾಮನು ಏಕಾಂತಸ್ಥಳದಲ್ಲಿ ಅವೆಲ್ಲವನ್ನೂ ಕೇಳಿ ಹಾಗೆಯೇ ಆಗಲಿ ಎಂದು ಹೇಳಿದನು. ಸಂವಾದಾನಂತರದಲ್ಲಿ ಹಸಿವೆಯಿಂದ ಕೂಡಿದ ನನ್ನನ್ನು ಭೋಜನಮಾಡಿಸು ಎಂದು ಅನೇಕಾವರ್ತಿ ಹೇಳುತ್ತಾ, ದುರ್ವಾಸ ಎನ್ನುವ ನಾಮದಿಂದ ಕೂಡಿದ, ರುದ್ರನ ಮತ್ತೊಂದು ರೂಪನಾದ ದುರ್ವಾಸ ಋಷಿಯು ಏಕಾಂತಸ್ಥಳದಲ್ಲಿ ಶೀಘ್ರದಲ್ಲಿ ರಾಮನನ್ನು ಕುರಿತು ಹೋದನು ॥ ೪೯ ॥

ಮೂ ॥ ಸಿದ್ಧಂ ನ ದೇಯಮುತ ಸಾಧ್ಯಮಪೀತಿ ವಾಚಂ
ಶ್ರುತ್ವಾಸ್ಯ ವಾಕ್ಯಸಮಯಜಾತಮುರು ಸ್ವಹಸ್ತಾತ್ ॥
ಅನ್ನಂ ಚತುರ್ಗುಣಮದಾದಮೃತೋಪಮಾನಂ
ರಾಮಸ್ತದಾಪ್ಯ ಬುಭುಜೇಽಥ ಮುನಿಃ ಸುತುಷ್ಟಃ ॥ ೫೦ ॥

ಅ ॥ ಮೊದಲೇ ಮಾಡಿಟ್ಟದ್ದನ್ನು ಕೊಡಕೂಡದು; ಪ್ರಾರ್ಥಿಸಿದ ಮೇಲೆ ಮಾಡಲ್ಪಡುವ ಅನ್ನವನ್ನು ಕೊಡಕೂಡದು; ಈ ಪ್ರಕಾರವಾದ ದುರ್ವಾಸ ಋಷಿಯ ಮಾತನ್ನು ಶ್ರೀ ರಾಮನು ಕೇಳಿ ತನ್ನ ಕೈಯದೆಶೆಯಿಂದ ದುರ್ವಾಸ ಋಷಿಯ ವಾಗುಚ್ಚಾರಣಕಾಲದಲ್ಲಿಯೇ ಉಂಟಾದ, ಉತ್ಕೃಷ್ಟವಾದ, ಭಕ್ಷ್ಯ-ಭೋಜ್ಯ-ಲೇಹ್ಯ-ಪೇಯ ಗುಣಗಳಿಂದ ಕೂಡಿದ ಅಮೃತದಿಂದ ಸದೃಶವಾದ ಷಡ್ರಸಾನ್ನವನ್ನು ಕೊಟ್ಟನು. ಆ ಮೇಲೆ ದುರ್ವಾಸ ಋಷಿಯು ಆ ಅನ್ನವನ್ನು ಹೊಂದಿ ಅತಿಸಂತುಷ್ಟನಾದವನಾಗಿ ಭೋಜಿಸಿದನು.

**ವಿಶೇಷಾಂಶ**—'ಚತುರ್ಗುಣಂ ಅನ್ನಂ' ಎನ್ನುವುದರಿಂದ ದೂರಸ್ಥವಾದ ಅಂಗುಷ್ಠವನ್ನು ಬಿಟ್ಟು, ಕಾಮಧೇನುವಿನ ಸ್ತನಗಳ ನಾಲ್ಕರಂತೆಯೇ ತರ್ಜನೀಮೊದಲಾದ ನಾಲ್ಕು ಅಂಗುಲಿಗಳ ದೆಶೆಯಿಂದ ಭಕ್ಷ್ಯ-ಭೋಜ್ಯ-ಲೇಹ್ಯ ಪೇಯಾಖ್ಯವಾದ ನಾಲ್ಕು ಗುಣಗಳುಳ್ಳ ಅನ್ನವು ತತ್ಕ್ಷಣದಲ್ಲಿಯೇ ಹುಟ್ಟಿತು. ಆದಕಾರಣ ಮೊದಲು ಸಿದ್ಧವಾದುದೂ ಅಲ್ಲ, ಮೇಲೆ ಸಾಧ್ಯವಾದುದೂ ಅಲ್ಲ, ಎಂದು ಸೂಚಿತವಾಯಿತು. ॥ ೫೦ ॥

ಮೂ ॥ ತೃಪ್ತೌ ಯಯೌ ಚ ಸಕಲಾನ್ಪ್ರತಿ ಕೋಪಯಾನಃ
ಕಶ್ಚಿನ್ನ ಮೇಽರ್ಥಿತವರಂ ಪ್ರತಿದಾತುಮೀಶಃ॥
ಏವಂಪ್ರತಿಜ್ಞ ಋಷಿಃ ಸ ಹಿ ತತ್ಪ್ರತಿಜ್ಞಾಂ
ಮೋಘಾಂ ಚಕಾರ ಭಗವಾನ್ನ ತು ಕಶ್ಚಿದನ್ಯಃ ॥ ೫೧ ॥

ಅ ॥ ನನ್ನಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ಅಭೀಷ್ಟವನ್ನು ಕೊಡಲಿಕ್ಕೆ ಯಾವ ಪುರುಷನೂ ಸಮರ್ಥನಲ್ಲ, ಹೀಗೆ ಪ್ರತಿಜ್ಞೆಯುಳ್ಳ ಆ ದೂರ್ವಾಸ ಋಷಿಯು ಎಲ್ಲಾ ಜನರನ್ನು ಕೋಪಗೊಳಿಸುವವನಾಗಿ(ಅಂದರೆ ಯಾರೊಬ್ಬನೂ ನನ್ನ ಅಭೀಷ್ಟವನ್ನು ಮಾಡುವುದಿಲ್ಲ ಎಂದು ಕೋಪವನ್ನು

ಮಾಡುವವನಾಗಿ ತೃಪ್ತನಾಗಿ ಹೋದನು. ಆ ರಾಮನೇ ಆ ದುರ್ವಾಸ ಋಷಿಯ ಪ್ರತಿಜ್ಞೆಯನ್ನು ವ್ಯರ್ಥವನ್ನಾಗಿ ಮಾಡಿದನು. ರಾಮನಿಂದ ಇತರನಾದವನು ಯಾರೊಬ್ಬನೂ ವ್ಯರ್ಥವಾಗಿ ಮಾಡಲಿಲ್ಲ.

**ವಿಶೇಷಾಂಶ**— 'ತತ್ಪ್ರತಿಜ್ಞಾಂ ಮೋಘೀಚಕಾರ ಹಿ' ಎನ್ನುವ ಹಿ ಶಬ್ದದಿಂದ ಬೇರೆಯವರಿಂದಲೂ ಭಗ್ನವಾಗದಿರುವ ದುರ್ವಾಸ ಋಷಿಯ ಪ್ರತಿಜ್ಞೆಯನ್ನು ಶ್ರೀ ರಾಮನು ವ್ಯರ್ಥೀಕರಿಸಿದರಿಂದಲೂ ರಾವಣ ಸಂಹಾರದಿಂದಲೂ ಶ್ರೀ ಹರಿಗೆ ಸರ್ವೋತ್ತಮತ್ವವು ಪ್ರಸಿದ್ಧವಾಯಿತೆಂದು ಸೂಚಿತವಾಯಿತು. ॥ ೫೧ ॥

ಹಿಂದೆ ಹೇಳಿದ ಅರ್ಥಕ್ಕೆ ಅಪವಾದವನ್ನು ಹೇಳುತ್ತಾರೆ—

ಮೂ ॥ ಕುಂತೀ ತು ತಸ್ಯ ಹಿ ಮುನೇರ್ವರತೋಽಜಯತ್ತಂ (ತ್ತು)
ರಾಮಃ ಸ ಕೃಷ್ಣತನುವಾ ಸ್ವಬಲಾಜ್ಜಿಗಾಯ ।
ತಸ್ಮಿನ್ಗತೇ ಪ್ರತಿಗತೇ ಮುನಿರೂಪಕೇ ಚ
ಯಾಹೀತಿ ಲಕ್ಷ್ಮಣಮುವಾಚ ರಮಾಪತಿಃ ಸ ॥ ೫೨ ॥

ಅ ॥ ಕುಂತಿಯಾದರೂ ಆ ದುರ್ವಾಸ ಋಷಿಯ ವರದೆಸೆಯಿಂದಲೇ ಆ ದುರ್ವಾಸ ಋಷಿಯನ್ನು ಗೆದ್ದಿರುವಳು. ಆ ಶ್ರೀ ರಾಮನಾದರೂ ಕೃಷ್ಣಸ್ವರೂಪದಿಂದಲೂ ಸ್ವರೂಪ ಸಾಮರ್ಥ್ಯದಿಂದಲೇ (ದುರ್ವಾಸ ಋಷಿಗೆ ಬೇಕಾದ ಅಭೀಷ್ಟವನ್ನು ಮಾಡಿದರಿಂದ) ಗೆದ್ದನು. ಬ್ರಹ್ಮನಿಂದ ಕಳುಹಿಸಿಕೊಳ್ಳಲ್ಪಟ್ಟ ಸಾಕ್ಷಾತ್ ಆ ಶಿವನೂ, ದುರ್ವಾಸ ಋಷಿಯ ಸ್ವರೂಪವುಳ್ಳ ಆ ರುದ್ರನೂ ಹೋಗುತ್ತಿರಲು ಲಕ್ಷ್ಮೀಪತಿಯಾದ ಶ್ರೀ ರಾಮನು ಲಕ್ಷ್ಮಣನನ್ನು ಕುರಿತು (ನಿನ್ನ ಸ್ಥಾನವನ್ನು ಕುರಿತು ನೀನು) ಹೋಗು ಎಂದು ಹೇಳಿದನು.

**ವಿಶೇಷಾಂಶ**— (1) ಕುಂತಿಭೋಜನ ಮನೆಯಲ್ಲಿ ಚಾತುರ್ಮಾಸ್ಯ ಕುಳಿತಿರತಕ್ಕ ಅಪ್ರಿಯವಾದರೆ ಹೋಗುವೆನು ಎಂದು ಪ್ರತಿಜ್ಞೆಯುಳ್ಳ, ಅತಿ ಕೋಪವುಳ್ಳ ಇಂತಹ ದುರ್ವಾಸ ಋಷಿಯನ್ನು ಕುಂತಿಯು ತನ್ನ ಸೇವಾಕೌಶಲದಿಂದ ಪ್ರಸನ್ನೀಕರಿಸಿಕೊಂಡು ಮಂತ್ರವನ್ನು ಉಪದೇಶತೆಗೆದುಕೊಂಡಳು. ಆಗ ಅಪ್ರಿಯವಾದರೆ ಹೋಗುತ್ತೇನೆಂದು ಋಷಿಯ ಪ್ರತಿಜ್ಞೆಯನ್ನು ಪ್ರಿಯವನ್ನೇ ಮಾಡಿರುವುದರಿಂದ ಗೆದ್ದಳು ಎಂದು ಭಾರತದಲ್ಲಿ ಕಥೆಯಿದೆ. ಅತಿಭಯಗ್ರಸ್ತಳಾದ ಕುಂತಿಯನ್ನು ಕುರಿತು ಎಲೋ ಕುಂತಿಯೇ! ನಿನ್ನಲ್ಲಿ ಕೋಪವನ್ನು ಮಾಡುವುದಿಲ್ಲವೆಂದು ದುರ್ವಾಸಋಷಿಯ ವರದಿಂದಲೇ ಆ ದುರ್ವಾಸ ಋಷಿಯನ್ನು ಕುಂತಿಯು ಜಯಿಸಿರುವಳು. (2) ಶ್ರೀಕೃಷ್ಣನೂ ಕೂಡ ನನ್ನ ಉದರಪೂರ್ತಿಯನ್ನು ಯಾರೊಬ್ಬನಿಗೂ ಮಾಡಲಿಕ್ಕೆ ಶಕ್ತಿಯಿಲ್ಲವೆಂದು ಪ್ರತಿಜ್ಞೆಯಿಂದ ನಂದಗೋಕುಲಕ್ಕೆ ಬಂದಿರತಕ್ಕ ದುರ್ವಾಸಋಷಿಗೆ ಯಥೇಷ್ಟವಾಗಿ ಅನ್ನಪಾನಾದಿಗಳನ್ನು ಕೊಡುತ್ತಿರಲು, ಇನ್ನು ಮುಂದೆ ಊಟಮಾಡಲಿಕ್ಕೆ ನನಗೆ ಶಕ್ತಿಯಿಲ್ಲವೆಂದು ದುರ್ವಾಸ ಋಷಿಯನ್ನು ಹೇಳಿಸಿದುದರಿಂದ ಗೆದ್ದಿರುವನು. ಅದೂ ಕೂಡ ಶ್ರೀರಾಮನಂತೆಯೇ ತನ್ನ ಮಹಿಮೆಯಿಂದಲೇ ಶ್ರೀಕೃಷ್ಣನು ಗೆದ್ದಿರುವನು ॥ ೫೨ ॥

ಯಾಹಿ = ಹೋಗು ಎಂದು ಹೇಳಲಿಕ್ಕೆ ಕಾರಣವನ್ನು ಹೇಳುತ್ತಾರೆ—

ಮೂ ॥ ಏಕಾಂತೇ ತು ಯದಾ ರಾಮಶ್ಚಕ್ರೇ ರುದ್ರೇಣ ಸಂವಿದಂ ॥
ದ್ವಾರಪಾಲಂ ಸ ಕೃತವಾಂಸ್ತದಾ ಲಕ್ಷ್ಮಣಮೇವ ಸಃ ॥ ೫೩ ॥

ಯಸ್ತ್ವತ್ರ ಪ್ರವಿಶೇತ್ಕಶ್ಚಿದ್ಧನ್ಮಿ ತ್ವೇತಿ ವಚೋ ಬ್ರುವನ್ ॥
ತದಂತರಾಗತನ್ಮೃಷಿಂ ದೃಷ್ಟ್ವಾ ಮನ್ಯತ ಲಕ್ಷ್ಮಣಃ ॥ ೫೪ ॥
ದೂ(ದು)ರ್ವಾಸಸಃ ಪ್ರತಿಜ್ಞಾ ತು ರಾಮಂ ಪ್ರಾಪ್ಯೈವ ಭಜ್ಯತಾಂ ॥
ಅನ್ಯಥಾ ತ್ವಯಶೋ ರಾಮೇ ಕರೋತ್ಯೇಷ ಮುನಿರ್ಧ್ರುವಂ ॥ ೫೫ ॥

ಅ ॥ ಯಾವಾಗ ಏಕಾಂತ ಸ್ಥಳದಲ್ಲಿ ಶ್ರೀರಾಮನು ರುದ್ರನಿಂದ (ಕೂಡಿಕೊಂಡು) ವಿಚಾರವನ್ನು ಮಾಡಿರುವಾಗ ಆ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಯಾವ ಪಕ್ಷದಲ್ಲಿ ನಾವು ಈ ವಿಚಾರಮಾಡತಕ್ಕ ಸ್ಥಳಕ್ಕೆ ಯಾವನಾದರೂ ಪುರುಷನು ಪ್ರವೇಶಿಸುವನೋ, ಆಗ ನಿನ್ನನ್ನು ಕೊಲ್ಲುತ್ತೇನೆ ಎನ್ನುವ ಮಾತನ್ನು ಹೇಳುವವನಾಗಿ ಲಕ್ಷ್ಮಣನನ್ನೇ ದ್ವಾರಪಾಲಕನನ್ನಾಗಿ ಮಾಡಿದನು. ಶ್ರೀ ರಾಮನೂ, ರುದ್ರನೂ ಇವರು ವಿಚಾರ ಮಾಡುವ ಕಾಲದಲ್ಲಿ ಬಂದಿರತಕ್ಕ ದುರ್ವಾಸಋಷಿಯನ್ನು ನೋಡಿ ಲಕ್ಷ್ಮಣನು ತಿಳಿದನು. (ಏನು ತಿಳಿದನೆಂದರೆ) ದುರ್ವಾಸ ಋಷಿಯ ಪ್ರತಿಜ್ಞೆಯಾದರೂ ಶ್ರೀ ರಾಮನನ್ನು ಹೊಂದಿಯೇ ನಾಶಹೊಂದಲಿ. ಪ್ರತಿಜ್ಞಾಭಂಗ ವಾಗದೆ ಇದ್ದರೆ ಈ ದುರ್ವಾಸಋಷಿಯು ನಿಶ್ಚಯವಾಗಿಯೂ ಶ್ರೀರಾಮನಲ್ಲಿ ಅಪಯಶಸ್ಸನ್ನು ಮಾಡುತ್ತಾನೆ ॥ ೫೩ ॥ ೫೪ ॥ ೫೫ ॥

ಮೂ ॥ ರಾಘವೋ ಘ್ನನ್ನಪಿ ತು ಮಾಂ ಕರೋತ್ಯೇವ ದಯಾಂ ಮಯಿ ॥
ಇತಿ ಮತ್ವಾ ದದೌ ಮಾರ್ಗಂ ಸ ತು ದೂ(ದು)ರ್ವಾಸಸೇ ತದಾ ॥ ೫೬ ॥

ಅ ॥ ಶ್ರೀರಾಮನು ನನ್ನನ್ನು ಸಂಹರಿಸುವವನಾದಾಗ್ಯೂ (ಅಂದರೆ ಸಂಹರಿಸುತ್ತೇನೆಂದು ಹೇಳಿದಾಗ್ಯೂ) ನನ್ನಲ್ಲಿ ದಯೆಯನ್ನು ನಿಶ್ಚಯವಾಗಿಯೂ ಮಾಡುವನು. ಈ ಪ್ರಕಾರ ಆ ಲಕ್ಷ್ಮಣನು ಆಗ ತಿಳಿದುಕೊಂಡವನಾಗಿ, ದುರ್ವಾಸಋಷಿಗೋಸ್ಕರ (ತು=)ಶ್ರೀರಾಮನಿಗೆ ಅಪ ಯಶಸ್ಸು ಬರಬಾರದೆನ್ನುವ ಕಾರ್ಯವಿಶೇಷದಿಂದ ಮಾರ್ಗವನ್ನಾದರೂ ಕೊಟ್ಟನು ॥ ೫೬ ॥

ಸಂಹರಿಸುತ್ತೇನೆಂದು ಪ್ರತಿಜ್ಞಾಮಾಡಲಿಕ್ಕೆ ಕಾರಣವನ್ನು ಹೇಳುತ್ತಾರೆ—

ಮೂ ॥ ಸ್ವಲೋಕಗಮನಾಕಾಂಕ್ಷಿ ಸ್ವಯಮೇವ ತು ರಾಘವಃ ॥
ಇಯಂ ಪ್ರತಿಜ್ಞಾ ಹೇತುಃ ಸ್ಯಾದಿತಿ ಹನ್ಮೀತಿ ಸೋಽಕರೋತ್ ॥ ೫೭ ॥

ಅ ॥ (ಲಕ್ಷ್ಮಣನನ್ನು) ತನ್ನ ಲೋಕವಾದ ಶೇಷಲೋಕವನ್ನು ಕುರಿತು ಕಳುಹಿಸಿ ಕೊಡುವುದಕ್ಕಾಗಿ ಇಚ್ಛೆಯುಳ್ಳ, ಮತ್ತು ತಾನೂ ಕೂಡ ತನ್ನ ಲೋಕವಾದ ವೈಕುಂಠಲೋಕ ವನ್ನು ಕುರಿತು ಹೋಗಲಿಕ್ಕೆ ಇಚ್ಛೆಯುಳ್ಳ ಶ್ರೀರಾಮನು ಸಂಹರಿಸುತ್ತೇನೆ ಎನ್ನುವ ಪ್ರತಿಜ್ಞೆಯು (ತನ್ನ ಲೋಕಕ್ಕೆ ಹೋಗಲಿಕ್ಕೆ) ಹೇತುವಾಗುವುದು ಎಂದು (ನಿಶ್ಚಯಿಸಿ) ತಾನೇ ಸಂಹರಿ ಸುತ್ತೇನೆ ಎನ್ನುವ (ಪ್ರತಿಜ್ಞೆಯನ್ನು) ತನ್ನ ಇಚ್ಛೆಯಿಂದಲೇ ಮಾಡಿದನು. (ಲಕ್ಷ್ಮಣನ ಮೇಲೆ ಕೋಪವನ್ನು ಹುಟ್ಟಿಸುವುದಕ್ಕಾಗಿ ಅಲ್ಲ.)

ವಿಶೇಷಾಂಶ— (1) ಯದ್ಯಪಿ ಶ್ವೇತದ್ವೀಪದಲ್ಲಿ ಶೇಷನು ಇದ್ದಾನೆ. ಆದಾಗ್ಯೂ ಶ್ವೇತದ್ವೀಪವು ಶೇಷನ ಲೋಕವಲ್ಲ. ಮತ್ತೆ ಶಯ್ಯಾರೂಪನಾಗಿ ಪದ್ಮನಾಭನ ಸೇವೆಗೋಸ್ಕರ ಶ್ವೇತದ್ವೀಪಕ್ಕೆ ಒಂದೊಂದಂಶದಿಂದ ಹೋಗಿರುವನು. ಆ ಅಂಶದಿಂದ ಅವತಾರವಲ್ಲ. ಮತ್ತೆ

ಇಂದ್ರಾದಿ ಎಲ್ಲಾ ದೇವತೆಗಳಿಗೆ ತಮ್ಮ ತಮ್ಮ ಲೋಕಗಳಲ್ಲಿರತಕ್ಕ ಮೂಲರೂಪದಿಂದಲೇ ಅವತಾರವು. ಅವತಾರದ ಕಾರ್ಯವು ಮುಗಿದಮೇಲೆ ಮೂಲರೂಪದಲ್ಲಿ ಪ್ರವೇಶವೂ ಕೂಡ ಧರ್ಮವು. ಆದಕಾರಣ ನಾಗಲೋಕಕ್ಕೇನೇ ಲಕ್ಷ್ಮಣನನ್ನು ಕಳುಹಿಸಿಕೊಡಬೇಕು ಎನ್ನುವ ಅಭಿಪ್ರಾಯದಿಂದ 'ಸ್ವಲೋಕಗಮನಾಕಾಂಕ್ಷೀ' ಎಂದು ಹೇಳಿರುವನು. (ತು=) ಲಕ್ಷ್ಮಣನಿಗೂ ಕೂಡ ತನ್ನ ಮೂಲರೂಪದಲ್ಲಿ ಪ್ರವೇಶವೇ ಧರ್ಮವು. ಇಂತಹ ಕಾರ್ಯವಿಶೇಷದಿಂದಲೇ ಪ್ರತಿಜ್ಞೆಯು || ೫೭ ||

ಹಾಗಾದರೆ ಶ್ರೀ ರಾಮನು ಬಂಧುಸ್ನೇಹಕ್ಕೆ ಒಳಗೊಂಡವನಾಗಿ ಪ್ರತಿಜ್ಞಾ ಭಂಗವನ್ನು ಮಾಡಿದನು ಎಂದರೆ—

ಮೂ || ಅತ್ಯಂತಬಂಧುನಿಧನಂ ತ್ಯಾಗ ಏವೇತಿ ಚಿಂತಯನ್ ||
ಯಾಹಿ ಸ್ವಲೋಕಮಚಿರಾದಿತ್ಯುವಾಚ ಸ ಲಕ್ಷ್ಮಣಂ || ೫೮ ||

ಅ || ಅತ್ಯಂತ ಸ್ನೇಹವುಳ್ಳ ಬಂಧುವಿನ ಸಂಹಾರವೆಂದರೆ ಬಿಡುವಿಕೆಯೇ ಎಂದು ಆಲೋಚಿಸುತ್ತಾ ಆ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಶೀಘ್ರದಲ್ಲಿ ತನ್ನ ಲೋಕವನ್ನು (ಅಂದರೆ ಶೇಷಲೋಕವನ್ನು) ಕುರಿತು ಹೋಗು ಎಂದು ಹೇಳಿದನು. || ೫೮ ||

ಮೂ || ಇತ್ಯುಕ್ತಃ ಸ ಯಯೌ ಜಗದ್ಭವಭಯಧ್ವಾಂತಚ್ಛಿದಂ ರಾಘವಂ
ಧ್ಯಾಯನ್ನಾಪ ಚ ತತ್ಪದಂ ದಶಶತೈರ್ಯುಕ್ತೋ ಮುಖಾಂಭೋರುಹೈಃ ||
ಆಸೀಚ್ಛೇಷಮಹಾಫಣೀ ಮುಸಲಭೃದ್ದಿವ್ಯಾಕೃತಿರ್ಲಾಂಗಲೀ
ಪರ್ಯಂಕತ್ವಮವಾಪ ಯೋ ಜಲನಿಧೌ ವಿಷ್ಣೋಃ ಶಯಾನಸ್ಯ ಚ ||
|| ೫೯ ||

ಅ || ಈ ಪ್ರಕಾರ (ಶ್ರೀ ರಾಮನಿಂದ) ಹೇಳಿಸಿಕೊಳ್ಳಲ್ಪಟ್ಟ ಆ ಲಕ್ಷ್ಮಣನು ಜಗತ್ತಿಗೆ ಸಂಸಾರದಿಂದುಂಟಾಗತಕ್ಕ ಭೀತಿಯೆಂಬುವ ಅಂಧಕಾರವನ್ನು ನಾಶಪಡಿಸತಕ್ಕ ಶ್ರೀ ರಾಮನನ್ನು ಧ್ಯಾನ ಮಾಡುತ್ತಾ (ಭೂಲೋಕ ದೆಶೆಯಿಂದ ಶ್ರೀ ರಾಮನ ಸಮೀಪ ದೆಶೆಯಿಂದ) ಹೋದನು. ಮತ್ತು ಶೇಷಸ್ಥಾನವನ್ನು ಹೊಂದಿದನು. ಹತ್ತು ನೂರು (ಅಂದರೆ—ಸಹಸ್ರ ಸಂಖ್ಯಾಕಗಳಾದ (೧೦೦೦) ಮುಖಕಮಲಗಳಿಂದ ಕೂಡಿದ, ಪರಿಘಾಖ್ಯವಾದ ಆಯುಧವನ್ನು ಧರಿಸತಕ್ಕ ಲಾಂಗಲ (ನೇಗಿಲು)ವುಳ್ಳ ದೇವಸ್ವರೂಪವುಳ್ಳ, ಶೇಷಾಖ್ಯನಾದ ಮಹಾಸರ್ಪನು ಆದನು. ಕ್ಷೀರ ಸಮುದ್ರದಲ್ಲಿ ಮಲಗಿಕೊಂಡು ಇರುವ ವಿಷ್ಣುವಿನ ಪರ್ಯಂಕತ್ವವನ್ನು ಯಾವ ಶೇಷನು ಹೊಂದಿರುವನೋ, ಆ ಶೇಷನ ಸ್ವರೂಪವನ್ನು ಹೊಂದಿದನು. (ಅಂದರೆ— ಲಕ್ಷ್ಮಣನು ಶೇಷನಾಗಿ ತನ್ನ ಮೂಲರೂಪನಾದ ಶೇಷನಿಂದ ಐಕ್ಯವನ್ನು ಹೊಂದಿದನು) || ೫೯ ||

ಮೂ || ಅಥ ರಾಘವಃ ಸ್ವಭವನೋಪಗತೌ
ವಿದಧೇ ಮತಿಂ ಸಹ ಜನೈರಖಿಲೈಃ ||
ಸಮಘೋಷಯಚ್ಚ ಯ ಇಹೇಚ್ಛತಿ
ತತ್ಪದಮಕ್ಷಯಂ ಸಪದಿ ನೈತ್ವಿತಿ ಸಃ || ೬೦ ||

ಅ ॥ ಲಕ್ಷ್ಮಣನು ಹೋದ ಮೇಲೆ ಶ್ರೀ ರಾಮನು ಎಲ್ಲಾ ಜನರಿಂದಲೂ ಕೂಡಿಕೊಂಡು, ತನ್ನ ಮಂದಿರವಾದ ವೈಕುಂಠವನ್ನು ಹೊಂದುವ ವಿಷಯದಲ್ಲಿ ಇಚ್ಛಿಸಿದನು. ಈ ಕರ್ಮ ಭೂಮಿಯಲ್ಲಿ ಅವಿನಾಶಿಯಾದ, ಆ ಪ್ರಸಿದ್ಧವಾದ ವೈಕುಂಠಸ್ಥಾನವನ್ನು ಯಾವ ಅಧಿಕಾರಿಯು ಇಚ್ಛಿಸುತ್ತಾನೋ ಆತನು ಶೀಘ್ರದಲ್ಲಿ ತತ್ಕ್ಷಣದಲ್ಲಿಯೇ ನನ್ನನ್ನು ಹೊಂದಲಿ, ಹೀಗೆ ಡಂಗುರ ಸಾರಿಸಿದನು. ॥ ೬೦ ॥

ಮೂ ॥ ಶ್ರುತ್ವಾ ತು ತದ್ಯ ಇಹ ಮೋಕ್ಷಪದೇಚ್ಛವಸ್ತೇ
ಸರ್ವೇ ಸಮಾಯಯುರಥಾತೃಣಮಾಪಿಪೀಲಂ ॥
ರಾಮಾಜ್ಞ ಯಾ ಗಮನಶಕ್ತಿರಭೂತೃಣಾದೇ-
ರ್ಯೇ ತತ್ರ ದೀರ್ಘಭವಿನೋ ನ ಹಿ ತೇ ತದೈಚ್ಛನ್ ॥ ೬೧ ॥

ಅ ॥ ಆ ವಿಘೋಷಣವನ್ನು ಕೇಳಿ ಈ ಕಾಲದಲ್ಲಿ ಈ ಅಯೋಧ್ಯಾಪಟ್ಟಣದಲ್ಲಿ (ಪುತ್ರ ಸಂಪತ್ತು, ದ್ರವ್ಯಸಂಪತ್ತು ಇತ್ಯಾದಿಗಳ ಪೂರ್ತಿವಿಶೇಷಬಲದಿಂದ) ಯಾರು ಮೋಕ್ಷಸ್ಥಾನವನ್ನು ಇಚ್ಛಿಸುತ್ತಾರೋ ಅವರೆಲ್ಲರೂ ತೃಣಾದಿಜಡಜೀವಪರ್ಯಂತವಾಗಿಯೂ, ಪಿಪೀಲಿಕಾದಿ ಚೇತನ ಪರ್ಯಂತವಾಗಿಯೂ (ಅಯೋಧ್ಯಾಪಟ್ಟಣಕ್ಕೆ) ಬಂದರು. (ಹಾಗಾದರೆ ತೃಣಾದಿ ಸ್ಥಾವರಗಳಿಗೆ ಗಮನಶಕ್ತಿಯು ಹೇಗೆಂದರೆ—) ತೃಣಮೊದಲಾದುದಕ್ಕೆ ಶ್ರೀ ರಾಮನ ಆಜ್ಞೆಯಿಂದಲೇ ಗಮನ ಶಕ್ತಿಯು ಉಂಟಾಯಿತು. ಮೋಕ್ಷಾಧಿಕಾರಿಗಳ ಮಧ್ಯದಲ್ಲಿ ಯಾರು ಬಹುಕಾಲವಲ್ಲಿ ಉತ್ಪತ್ತಿ ಯುಳ್ಳವರೋ ಅವರು ಶ್ರೀ ರಾಮನು ಹೋಗುವ ಕಾಲದಲ್ಲಿ ಯಾವಕಾರಣದಿಂದ ಇಚ್ಛಿಸಲಿಲ್ಲವೋ (ಆದ ಕಾರಣದಿಂದ ಸ್ವಯೋಗ್ಯತ್ವಾ ಪೂರ್ತಿಕಾಲದಲ್ಲಿ ಮೋಕ್ಷವನ್ನು ಹೊಂದುವರು.) ಮತ್ತು ಆಗ ನಿತ್ಯಸಂಸಾರಿಗಳು ಮೋಕ್ಷಸ್ಥಾನವನ್ನು ಇಚ್ಛಿಸಲಿಲ್ಲ ॥ ೬೧ ॥

ಮೂ ॥ ಸಂಸ್ಥಾಪಯಾಮಾಸ ಕುಶಂ ಸ್ವರಾಜ್ಯೇ
ತ್ವೈಃ ಸಾಕಮೇವ ಚ ಲವಂ ಯುವರಾಜಮೀಶಃ ॥
ಸಂಸ್ಥಾಪ್ಯ ವಾಲಿತನಯಂ ಕಪಿರಾಜ್ಯ ಆಶು
ಸೂರ್ಯಾತ್ಮಜೋಽಪಿ ರಘುವೀರಸಮೀಪಮಾಯಾತ್ ॥ ೬೨ ॥

ಅ ॥ ಸರ್ವಸಮರ್ಥನಾದ ಶ್ರೀ ರಾಮನು (ತನ್ನ ಸಂಗಡ ಯಾರು ಬರಲಿಲ್ಲವೋ) ಅಂತಹ ನಿತ್ಯಸಂಸಾರಿ ಮೊದಲಾದವರಿಂದ (ದೀರ್ಘಕಾಲದಲ್ಲಿರತಕ್ಕವರಿಂದ) ಕೂಡಿಕೊಂಡೇ ಕುಶಾಖ್ಯ ಪುತ್ರನನ್ನು ರಾಜನನ್ನಾಗಿಯೂ, ಲವಾಖ್ಯ ಪುತ್ರನನ್ನು ಯುವರಾಜನನ್ನಾಗಿಯೂ ತನ್ನ ರಾಜ್ಯದಲ್ಲಿ ಸ್ಥಾಪಿಸಿದನು. ಸೂರ್ಯ ಪುತ್ರನಾದ ಸುಗ್ರೀವನಾದರೂ ಕಪಿಗಳ ರಾಜ್ಯದಲ್ಲಿ ವಾಲಿಯ ಪುತ್ರನಾದ ಅಂಗದನನ್ನೂ ಸ್ಥಾಪಿಸಿ ಶೀಘ್ರದಲ್ಲಿ ಶ್ರೀ ರಾಮನ ಸಮೀಪವನ್ನು ಕುರಿತು ಬಂದನು. ॥ ೬೨ ॥

ಮೂ ॥ ಅಥಾಹ ವಾಯುನಂದನಂ ಸ ರಾಘವಃ ಸಮಾಶ್ಲಿಷನ್ ॥
ತವಾಹಮಕ್ಷಿ(ಕ್ಷ)ಗೋಚರಃ ಸದಾ ಭವಾಮಿ ನಾನ್ಯಥಾ ॥ ೬೩ ॥

ಅ ॥ ಆ ಮೇಲೆ ಆ ಶ್ರೀ ರಾಮನು ವಾಯುಪುತ್ರನಾದ ಹನುಮಂತನನ್ನು ಹೇಳಿದನು, ಮತ್ತು ಅಪ್ಪಿಕೊಂಡನು. ನಾನು ಯಾವಾಗಲೂ ನಿನ್ನ ಕಣ್ಣುಗಳಿಗೆ ಪ್ರತ್ಯಕ್ಷನಾಗುತ್ತೇನೆ. ಗೋಚರನಾಗದೆ ಇರುವುದಿಲ್ಲ. ॥ ೬೩ ॥

ಮೂ ॥ ತ್ವಯಾ ಸದಾ ಮಹತ್ತಪಃ ಸುಕಾರ್ಯಮುತ್ತಮೋತ್ತಮಂ ॥
ತದೇವ ಮೇ ಮಹತ್ಪ್ರಿಯಂ ಚಿರಂ ತಪಸ್ತ್ವಯಾ ಕೃತಂ ॥ ೬೪ ||

ಅ ॥ ನಿನ್ನಿಂದ ಯಾವಾಗಲೂ, ಅತ್ಯುತ್ತಮವಾದ ಶ್ರೇಷ್ಠವಾದ ತಪಸ್ಸು ಮಾಡ ತಕ್ಕುದು. ಬಹುಕಾಲದಲ್ಲಿ (ಚೆನ್ನಾಗಿ ನನ್ನ ಅವಯವಗಳ ಧ್ಯಾನಾದಿಗಳನ್ನು ಮಾಡಿ ಯಾವುದು) ತಪಸ್ಸು ನಿನ್ನಿಂದ ಮಾಡಲ್ಪಟ್ಟದೋ, ಅದೇ ನನಗೆ ಅತ್ಯಂತ ತುಷ್ಟಿಯನ್ನು ಕೊಡತಕ್ಕುದು. ॥ ೬೪ ॥

ಮೂ ॥ ದಶಾಸ್ಯಕುಂಭಕರ್ಣಕೌ ಯಥಾ ಸುಶಕ್ತಿಮಾನಪಿ ॥
ಜಘಂಥ ನ ಪ್ರಿಯಾಯ ಮೇ ತಥೈವ ಜೀವಕಲ್ಪಕಂ ॥ ೬೫ ॥

ಅ ॥ ಯಾವ ಕಾರಣದೆಶೆಯಿಂದ (ನೀನು) ರಾವಣಕುಂಭಕರ್ಣರನ್ನು (ಸಂಹರಿಸಲಿಕ್ಕೆ) ಯಥೇಷ್ಟ ಶಕ್ತಿಯುಳ್ಳವನಾದಾಗ್ಯೂ, ನನ್ನ ಪ್ರೀತಿಗೋಸ್ಕರವೇ ಸಂಹರಿಸಲಿಲ್ಲವೋ, ಆದುದ ರಿಂದಲೇ ನನ್ನ ಪ್ರೀತಿಗೋಸ್ಕರವೇ ಕಲ್ಪಪರ್ಯಂತವಾಗಿ ಜೀವಿಸು ॥ ೬೫ ॥

ಮೂ ॥ ಪಯೋಬ್ಧಿಮಧ್ಯಗಂ ಚ ಮೇ ಸುಸದ್ಮ ಚಾನ್ಯದೇವ ವಾ ॥
ಯಥೇಷ್ಟತೋ ಗಮಿಷ್ಯಸಿ ಸ್ವದೆ ಹಸಂಯುತೋಽಪಿ ಸನ್ ॥ ೬೬ ॥

ಅ ॥ ವಾನರ ಸ್ವರೂಪದಿಂದ ಕೂಡಿದವನಾದಾಗ್ಯೂ ಕೂಡ ಕ್ಷೀರಸಮುದ್ರದಲ್ಲಿರತಕ್ಕ ನನ್ನ ಶ್ವೇತದ್ವೀಪವನ್ನಾಗಲಿ, ಇತರವಾದ ಅನಂತಾಸನವನ್ನಾಗಲೀ, ವೈಕುಂಠಲೋಕವನ್ನಾಗಲೀ ಸ್ವೇಚ್ಛಾನುಸಾರವಾಗಿಯೇ ಹೋಗುವಿ ॥ ೬೬ ॥

ಮೂ ॥ ಯಥೇಷ್ಟಭೋಗಸಂಯುತಃ ಸುರೇಶಗಾಯಕಾದಿಭಿಃ ॥
ಸಮೀಡ್ಯಮಾನಸದ್ಯಶಾ ರಮಸ್ವ ಮತ್ಪುರಃ ಸದಾ ॥ ೬೭ ॥

ಅ ॥ ಇಚ್ಛಾನುಸಾರವಾಗಿ ಭೋಗಗಳಿಂದ ಕೂಡಿದವನಾಗಿಯೂ ದೇವಶ್ರೇಷ್ಠರ ಗಾಯಕರಾದ ಗಂಧರ್ವಾದಿಗಳಿಂದ ಚೆನ್ನಾಗಿ ಸ್ತುತಿಸಲ್ಪಡತಕ್ಕ ನಿರ್ದುಷ್ಟವಾದ ಯಶಸ್ಸುಳ್ಳವ ನಾಗಿ ನನ್ನ ಮುಂಭಾಗದಲ್ಲಿ ಯಾವಾಗಲೂ ಕ್ರೀಡಿಸುತ್ತಾ ಇರು. ॥ ೬೭ ॥

ಮೂ ॥ ತವೇಪ್ಸಿತಂ ನ ಕಿಂಚನ ಕ್ವಚಿತ್ಕದಾಚಿ(ತ್ಕುತಶ್ಚಿ)ದೇವ ವಾ ||
ಮೃಷಾ ಭವೇತ್ಪ್ರಿಯಶ್ಚ ಮೇ ಪುನಃ ಪುನರ್ಭವಿಷ್ಯಸಿ ॥ ೬೮ ॥

ಅ ॥ ನಿನ್ನ ಯಾವುದೊಂದು ಇಷ್ಟವೂ ಯಾವ ಪ್ರದೇಶದಲ್ಲಿಯೂ ಯಾವಾಗಲೂ ಕೂಡ ಮಿಥ್ಯೆಯಾದುದು ಆಗಲಾರದು. ಮತ್ತೂ ಮತ್ತು ನನಗೆ ಪ್ರಿಯನೇ ಆಗುವಿ ॥ ೬೮ ॥

ಮೂ ॥ ಇತೀರಿತೋ ಮರುತ್ಸುತೋ ಜಗಾದ ವಿಶ್ವನಾಯಕಂ ॥
ವಿಧೇಹಿ ಪಾದಪಂಕಜೇ ತವೇಶ ಭಕ್ತಿಮುತ್ತಮಾಂ ॥ ೬೯ ॥

ಅ ॥ ಈ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟ ವಾಯುಪುತ್ರನಾದ ಹನುಮಂತನು ಸರ್ವ ಜಗತ್ತಿಗೂ ಸ್ವಾಮಿಯಾದ ಶ್ರೀ ರಾಮನನ್ನು ಕುರಿತು ಹೇಳಿದನು. ಎಲೋ ಶ್ರೀ ಹರಿಯೇ! ನಿನ್ನ

ಪಾದಕಮಲದಲ್ಲಿ (ನನಗೆ) ಭಕ್ತಿಯನ್ನು ರುದ್ರ ಭಾರತ್ಯಾದಿಗಳ ಭಕ್ತಿಗಿಂತ ಅಧಿಕವಾದುದನ್ನಾಗಿ ಮಾಡಿ ಪೋಷಿಸು. ಅಭಿವೃದ್ಧವಾದುದನ್ನಾಗಿ ಮಾಡು ॥ ೬೯ ॥

ಮೂ ॥ ಸದಾ ಪ್ರವರ್ಧಮಾನಯಾ ತಯಾ ರಮೇಽಹಮಂಬುಜಾಕ್ಷ ॥
ಸಮಸ್ತಜೀವಸಂಚಯಾತ್ಸದಾಧಿಕಾ ಹಿ ಮೇಽಸ್ತು ಸಾ ॥ ೭೦ ॥

ಅ ॥ ಪ್ರತಿ ಕ್ಷಣದಲ್ಲಿಯೂ ಅಭಿವೃದ್ಧವಾಗುವ ಆ ಭಕ್ತಿಯಿಂದ ಚೆನ್ನಾಗಿ ನಾನು ಕ್ರೀಡಿಸುತ್ತೇನೆ. ಬ್ರಹ್ಮಪದವಿಗೆ ಯೋಗ್ಯರಾದ ಜೀವರಿಂದ ಇತರರಾದ ಎಲ್ಲಾ ಜೀವರ ಸಮೂಹ ದೆಶೆಯಿಂದ ಯಾವಾಗಲೂ ಅತ್ಯಧಿಕವಾದ ಭಕ್ತಿಯು ನನಗೆ ಆಗಲಿ. (ಹಿ=) ತನಗೆ ಅಧಿಕಾರಿ ಗಳಲ್ಲಿ ಸರ್ವೋತ್ತಮತ್ವವು ಪ್ರಸಿದ್ಧವು ॥ ೭೦ ॥

ಮೂ ॥ ನಮೋ ನಮೋ ನಮೋ ನಮೋ ನತೋಽಸ್ಮಿ ತೇ ಸದಾ ಪದಂ ॥
ಸಮಸ್ತಸದ್ಗುಣೋಚ್ಛ್ರಿತಂ ನಮಾಮಿ ತೇ ಪದಂ ಪುನಃ ॥ ೭೧ ॥

ಅ ॥ ಶ್ರೀ ರಾಮನೇ ನಿನಗೋಸ್ಕರ ನಮಸ್ಕಾರ, ನಮಸ್ಕಾರವು. ನಿನ್ನ ಪಾದವನ್ನು ಯಾವಾಗಲೂ ನಮಸ್ಕರಿಸುತ್ತಾ ಇರುತ್ತೇನೆ. ಎಲ್ಲಾ ಸದ್ಗುಣಗಳಿಂದ ಉತ್ತಮವಾದ ನಿನ್ನ ಪಾದ ಕಮಲವನ್ನು ಮತ್ತೂ ಮತ್ತು ನಮಸ್ಕರಿಸುತ್ತೇನೆ ॥ ೭೧ ॥

ಮೂ ॥ ಇತೀರಿತೇ ತಥೇತಿ ತಂ ಜಗಾದ ಪುಷ್ಕರೇಕ್ಷಣಃ ॥
ಜಗಾಮ ಧಾಮ ಚಾತ್ಮನಸ್ತೃಣಾದಿನಾ ಸಹೈವ ಸಃ ॥ ೭೨ ॥

ಅ ॥ (ಹನುಮಂತನು) ಈ ಪ್ರಕಾರ ಹೇಳುತ್ತಿರಲು ಕಮಲದಳದಂತೆ ಕಣ್ಣುಗಳುಳ್ಳ ಶ್ರೀ ರಾಮನು ಹಾಗೆಯೇ ಆಗಲಿ ಎಂದು ಆ ಹನುಮಂತನನ್ನು ಕುರಿತು ಹೇಳಿದನು. ಆ ಶ್ರೀರಾ ಮನು ತೃಣಮೊದಲಾವುಗಳಿಂದ ಕೂಡಿಕೊಂಡೇ ತನ್ನ ಮಂದಿರವಾದ ವೈಕುಂಠವನ್ನು ಕುರಿತು ಹೋದನು ॥ ೭೨ ॥

ಮೂ ॥ ಖಗಾ ಮೃಗಾಸ್ತೃಣಾದಯಃ ಪಿಪೀಲಿಕಾಶ್ಚ ಗರ್ದಭಾಃ ॥
ತದಾಸುರುತ್ತಮಾ ಯತೋ ನೃವಾನರಾಸ್ತು ಕಿಂ ಪುನಃ ॥ ೭೩ ॥

ಅ ॥ ಯಾವಕಾರಣದೆಶೆಯಿಂದ ಶ್ರೀ ರಾಮನು ರಾಜ್ಯವನ್ನು ಪರಿಪಾಲಿಸುವ ಸಮಯ ದಲ್ಲಿ ಹಕ್ಕಿಗಳು, ಮೃಗಗಳು, ತೃಣ-ಲತಾ-ವೃಕ್ಷಗಳು, ಇರುವೆಗಳು, ಕತ್ತೆಗಳೂ ಹೀನ ಯೋನಿ ಗಳಾದಾಗ್ಯೂ ದಿವ್ಯ ದೇಹವುಳ್ಳವುಗಳಾಗಿ ಆಗಿರುವವೋ, ಆಕಾರಣದಿಂದ ಮನುಷ್ಯರು, ವಾನ ರರು ಉತ್ತಮರು ಆದರು ಎಂದು ಏನು ಹೇಳಬೇಕು? ॥ ೭೩ ॥

ಈ ಖಗಾದಿಗಳಿಗೆ ಬ್ರಹ್ಮನ ಜ್ಞಾನವಿಲ್ಲದಿರುವುದರಿಂದ ಮೋಕ್ಷವು ಹೇಗೆ ಆಯಿತೆಂದರೆ—

ಮೂ ॥ ಸದೈವ ರಾಮಭಾವನಾತ್ಸ(ಸ್ಸ)ದಾ ಸುತತ್ವವೇದಿನಃ ॥
ಯತೋಽಭವಂಸ್ತತಸ್ತು ತೇ ಯಯುಃ ಪದಂ ಹರೇಸ್ತದಾ ॥ ೭೪ ॥

ಅ ॥ ಯಾವ ಕಾರಣದೆಶೆಯಿಂದ ಯಾವಾಗಲೂ ಗುರುಮುಖದೆಶೆಯಿಂದ ಕ್ರಿಳಿ ಚೆನ್ನಾಗಿ ತತ್ವಜ್ಞಾನವುಳ್ಳವುಗಳೋ, ಯಾವಕಾರಣದೆಶೆಯಿಂದ ಯಾವಾಗಲೂ ಶ್ರೀ ರಾಮನ ಮನನ ಧ್ಯಾನವುಳ್ಳವುಗಳೋ, ಯಾವ ಕಾರಣದೆಶೆಯಿಂದ (ತು =) ಅಪರೋಕ್ಷಜ್ಞಾನಾಖ್ಯವಿಶೇಷ ವುಳ್ಳವುಗಳು ಆಗಿರುವವೋ ಆ ಕಾರಣದೆಶೆಯಿಂದ ಶ್ರೀ ರಾಮನು ಹೋಗುವ ಸಮಯದಲ್ಲಿ ಆ ಖಗಾದಿಗಳು ಶ್ರೀ ಹರಿಯಚರಣವನ್ನು ಹೊಂದಿದವು ॥ ೭೪ ॥

ಮೂ ॥ ಸ ತೈಃ ಸಮಾನ್ವಿತೋ ವಿಭುರ್ಯಯೌ ದಿಶಂ ತದೋತ್ತರಾಂ ॥
ಅನಂತಸೂರ್ಯದೀಧಿತಿರ್ದುರಂತಸದ್ಗುಣಾರ್ಣವಃ ॥ ೭೫ ॥

ಅ ॥ ಆಗ ಅಪರಿಮಿತವಾದ ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳ, ಅಂತರಹಿತ ಗಳಾದ ಸದ್ಗುಣಗಳಿಂದ ಸಮುದ್ರದಂತೆ ಇರುವ, ಸರ್ವಸಮರ್ಥನಾದ ಆ ಶ್ರೀ ರಾಮನು (ಹರಿಯು) ಆ ಖಗಾದಿಗಳಿಂದ ಕೂಡಿದವನಾಗಿ ಉತ್ತರದಿಕ್ಕನ್ನು ಕುರಿತು ಹೋದನು ॥ ೭೫ ॥

ಮೂ ॥ ಸಹಸ್ರಸೂರ್ಯಮಂಡಲಜ್ವಲತ್ಕಿರೀಟಮೂರ್ಧಜಃ ॥
ಸುನೀಲಕುಂತಲಾನ್ವಿತಾಮಿತೇಂದುಕಾಂತಿ(ತ)ಸನ್ಮುಖಃ ॥ ೭೬ ॥
ಸುರಕ್ತಪದ್ಮಲೋಚನಃ ಸುವಿದ್ಯುದಾಭಕುಂಡಲಃ ॥
ಸುಹಾಸವಿದ್ರುಮಾಧರಃ ಸಮಸ್ತವೇದವಾಗ್ರಸಃ ॥ ೭೭ ॥
ದಿವಾಕರೌಘಕೌಸ್ತುಭಪ್ರಭಾಸಕೋರುಕಂಧರಃ ॥
ಸುಪೀವರೋನ್ನತೋರುಸಜ್ಜಗದ್ಧರಾಂಸಯುಗ್ಮಕಃ ॥ ೭೮ ॥
ಸುವೃತ್ತದೀರ್ಘಪೀವರೋಲ್ಲಸದ್ಭುಜದ್ವಯಾಂಕಿತಃ ॥
ಜಗದ್ವಿಮಥ್ಯ ಸಂಭೃತಃ ಶರೋಽಸ್ಯ ದಕ್ಷಿಣೇ ಕರೇ ॥ ೭೯ ॥
ಸ್ವಯಂ ಸ ತೇನ ನಿರ್ಮಿತೋ ಹತೋ (ತೌ) ಮಧುಶ್ಚ ಕೈಟಭಃ ॥
ಶರೇಣ ಯೋ(ತೇ)ನ ವಿಷ್ಣುನಾ ದದೌ ಚ ಲಕ್ಷ್ಮಣಾನುಜೇ ॥ ೮೦ ॥

ಅ ॥ ಸಹಸ್ರ ಸೂರ್ಯರಸಮೂಹದಂತೆ ಪ್ರಕಾಶಮಾನವಾದ ಕಿರೀಟವು ಶಿರಸ್ಸಿನಲ್ಲಿ ಉಳ್ಳವನು, ಅತಿ ನೀಲವರ್ಣಗಳಾದ ಕೇಶಗಳಿಂದ ಯುಕ್ತವಾದ ಅಪರಿಮಿತರಾದ ಚಂದ್ರರ ಕಾಂತಿಯಂತೆ ಕಾಂತಿಯುಳ್ಳವನು, ಅಥವಾ ಚಂದ್ರರಿಗೆ ಪ್ರಿಯವಾದ ನಿರ್ದುಷ್ಟವಾದ ಮುಖವುಳ್ಳ ವನು. ಶೋಭನವಾದ ರಕ್ತೋತ್ಪಲದಂತೆ ಕಣ್ಣುಗಳುಳ್ಳವನು, ಶೋಭನಗಳಾದ ಮಿಂಚಿನಂತೆ ಕಾಂತಿ ಗಳುಳ್ಳ ಕುಂಡಲಗಳುಳ್ಳವನು, ಶೋಭನವಾದ ಹಾಸಯುಕ್ತವಾದ ಪ್ರವಾಲದಂತೆ ರಕ್ತವರ್ಣ ವಾದ ಅಧರೋಷ್ಠವುಳ್ಳವನು, ಸಮಸ್ತವೇದವಚನಗಳು ('ರಸ ಆಸ್ವಾದನೆ' ಎನ್ನುವ ಧಾತುವಿನ ದೆಶೆಯಿಂದ 'ರಸಯತೀತಿ ರಸಾ' ನಾಲಗೆಯು ಎನ್ನುವ ವ್ಯುತ್ಪತ್ತಿಯಿಂದ) ನಾಲಗೆಯಲ್ಲಿ ಉಳ್ಳವನು, ಸೂರ್ಯರ ಸಮೂಹದಂತೆ ಇರತಕ್ಕ ಕೌಸ್ತುಭಾಖ್ಯಮಣಿಯನ್ನು ಪ್ರಕಾಶಪಡಿಸತಕ್ಕ ಉತ್ತಮವಾದ ಕಂಠವುಳ್ಳವನು, ಅತ್ಯಂತಪುಷ್ಟವಾದ, ಅತ್ಯುಚ್ಚವಾದ, ಉತ್ತಮವಾದ, ನಿರ್ದು ಷ್ಟವಾದ ಜಗತ್ತನ್ನು ಪೋಷಿಸತಕ್ಕ ಎರಡು ಭುಜ ಶಿರಸ್ಸುಗಳುಳ್ಳವನು, ಚೆನ್ನಾಗಿ ವರ್ತುಲವಾದ ದೀರ್ಘವಾದ (ಅಂದರೆ ಜಾನುಪರ್ಯಂತ ಜೋತಾಡತಕ್ಕ) ಪುಷ್ಟವಾದ, ಪ್ರಕಾಶಮಾನವಾದ ಎರಡು ಭುಜಗಳಿಂದ ಚಿಹ್ನಿತನಾದವನು, ಜಗತ್ತನ್ನು (ಅಂದರೆ ದೃಢೀಭೂತವಾಗಿರುವ ಮೇರು, ಮಂದಿರ, ಹಿಮವತ್ಪರ್ವತ ಇತ್ಯಾದಿರೂಪವಾದದು, ಆಯುಸ್ಸು ಶಿಲಾ ಇತ್ಯಾದಿರೂಪವಾದುದು,

ಇಂತಹ ಎಲ್ಲಾ ಜಗತ್ತನ್ನು ಚೆನ್ನಾಗಿ ಮಥನಮಾಡಿ (ಅಂದರೆ ಅವುಗಳ ದೃಢತನಗಳೆಲ್ಲವನ್ನು ಏಕೀಕರಿಸಿ ಮಸುರುವಿನಿಂದ ಬೆಣ್ಣೆಯನ್ನು ತೆಗೆದಂತೆಯೇ ಆ ಎಲ್ಲಾ ಪದಾರ್ಥಗಳ ದೃಢತನ ಗಳ ಸಾರಾಂಶವನ್ನು ತೆಗೆದು) ಸಾಕ್ಷಾದ್ವಿಷ್ಣುವಿನಿಂದಲೇ ಸಾರಾಂಶದಿಂದ ನಿರ್ಮಿಸಿಕೊಳ್ಳಲ್ಪಟ್ಟ ಯಾವುದು ಶರ (ಬಾಣ) ವೋ ಆ ಶರವು ಇದೇ ವಿಷ್ಣುವಿನ ದಕ್ಷಿಣಕೈಯಲ್ಲಿ ಅನಾದಿಕಾಲವನ್ನಾ ರಂಭಿಸಿ ಚೆನ್ನಾಗಿ ಧರಿಸಲ್ಪಟ್ಟದ್ದಾಯಿತು. ವಿಷ್ಣುವಿನಿಂದ ತನ್ನ ಕೈಯಲ್ಲಿ ಧರಿಸಲ್ಪಟ್ಟ ಯಾವ ಬಾಣದಿಂದಲೇ ಮಧುನಾಮಕ ದೈತ್ಯನೂ ಕೈಟಭಾಖ್ಯ ದೈತ್ಯನೂ ಕೂಡ ಸಂಹರಿಸಿಕೊಳ್ಳಲ್ಪಟ್ಟರೋ (ಶ್ರೀ ರಾಮನೂ ಕೂಡ ತನ್ನ ಅವತಾರಸಮಯದಲ್ಲಿ ಮೂಲರೂಪದ್ದೆಶೆಯಿಂದ ದೈತ್ಯರನ್ನು ಸಂಹರಿಸುವುದಕ್ಕಾಗಿ ಬಂದಿರತಕ್ಕ ಆ ಬಾಣವನ್ನು) ಲಕ್ಷ್ಮಣನ ತಮ್ಮನಾದ ಶತ್ರುಘ್ನನಲ್ಲಿ ಕೊಟ್ಟನು ॥ ೭೭ ॥ ೭೭ ॥ ೭೮ ॥ ೭೯ ॥ ೮೦ ॥

ಮೂ ॥ ಸ ಶತ್ರುಸೂದನೋಽನಧೀನ್ಮಧೋಃ ಸುತಂ ರಸಾಹ್ವಯಂ ॥
ಶರೇಣ ಯೇನ ಚಾಕರೋತ್ಪುರೀಂ ಚ ಮಾಧುರಾಭಿಧಾಂ ॥ ೮೧ ॥
ಸಮಸ್ತಸಾರಸಂಭವಂ ಶರಂ ದಧಾರ ತಂ ಕರೇ ॥ ೮೨ ॥

ಅ ॥ ಆ ಶತ್ರುಘ್ನನ ಮಧುನಾಮಕ ಅಸುರನ ಮಗನಾದ ಲವಣ ರಸದಂತೆ ನಾಮವುಳ್ಳ ಲವಣಾಸುರನನ್ನು ಯಾವಶರದಿಂದ ಸಂಹರಿಸಿದನೋ, ಮತ್ತು ಮಧುರಾ ಎಂದು ಹೆಸರುಳ್ಳ ಪಟ್ಟಣವನ್ನೂಕೂಡ ರಚಿಸಿದನೋ, ಸರ್ವರಲ್ಲಿ ಶ್ರೇಷ್ಠನಾದ ವಾಯುವಿನಿಂದ ನಿರ್ಮಾಣವುಳ್ಳ ಅಥವಾ ದೃಢಗಳಾದ, ಕಠಿಣಗಳಾದ ಕಬ್ಬಿಣಮೊದಲಾದವುಗಳ ಸಾರದಿಂದ ಹುಟ್ಟಿರುವ ಆ ಶರ ವನ್ನು (ತನ್ನ ಲೋಕಕ್ಕೆ ಹೋಗುವ ಸಮಯದಲ್ಲಿ) ದಕ್ಷಿಣ ಕೈಯಲ್ಲಿ ಧರಿಸಿದನು.

ವಿಶೇಷಾಂಶ— (1) ಸಾಕ್ಷಾತ್ ರಾಮನಿಂದಲೇ ನಿರ್ಮಿತವಾದುದು, ಈ ಶ್ರೀ ರಾಮನ ಕೈಯಲ್ಲಿ ಧರಿಸಲ್ಪಟ್ಟಿತು. ಎಂದು ಅರ್ಥವನ್ನು ಹೇಳಿದರೆ ಈ ಶರವು ಆದಿಕಾಲೀನರಾದ ಮಧು ಕೈಟಭರ ಸಂಹಾರೋಪಯುಕ್ತವು ಆಗದೆಹೋಗುವುದು. ಮತ್ತು 'ಶರಂ ದಧಾರ ತಂ ಕರೇ' ಎನ್ನುವುದರಿಂದ ಪುನರುಕ್ತವೂ ಆಗಬೇಕಾದೀತು. ಆದ ಕಾರಣ ಹಿಂದೆ ಹೇಳಿದ್ದೇ ಅರ್ಥವಾಗ ಬೇಕು. ॥ ೮೧ ॥ ೮೨ ॥

ಮೂ ॥ ಸ ವಾಮಬಾಹುನಾ ಧನುರ್ದಧಾರ ಶಾರ್ಙ್ಗಸಂಜ್ಞಿತಂ ॥
ಉದಾರಬಾಹುಭೂಷಣಃ ಶುಭಾಂಗದಃ ಸಕಂಕಣಃ ॥
ಮಹಾಂಗುಲೀಯಭೂಷಿತಃ ಸುರಕ್ತಸತ್ಕರಾಂಬುಜಃ ॥ ೮೩ ॥

ಅ ॥ ಉತ್ಕೃಷ್ಟಗಳಾದ ಭುಜಗಳ ಆಭರಣಗಳುಳ್ಳವನು ಅಥವಾ ಉತ್ಕೃಷ್ಟ ಭುಜ ಕೀರ್ತ್ಯಾಖ್ಯ ಆಭರಣವುಳ್ಳ, ಶುಭವಾದ ಕಟಕ (ತೋಳುಸರಿಗೆ) ವುಳ್ಳವನು, ಕರಭೂಷಣವಿಶೇಷ ಗಳಿಂದ ಸಹಿತನಾದವನು, ಉತ್ತಮಗಳಾದ ಮುದ್ರಿಕೆಗಳಿಂದ ಅಲಂಕರಿಸಿಕೊಳ್ಳಲ್ಪಟ್ಟವನು, ಅತ್ಯಂತ ತಾಮ್ರವರ್ಣಗಳಾದ ನಿರ್ದುಷ್ಟಗಳಾದ ಕರಕಮಲವುಳ್ಳವನು, ಇಂತಹ ಶ್ರೀ ರಾಮನು ಎಡ ಕೈಯಿಂದ ಶಾರ್ಙವೆಂದು ಹೆಸರುಳ್ಳ ಧನುಸ್ಸನ್ನು ಧರಿಸಿದನು. ॥ ೮೩ ॥

ಮೂ ॥ ಅನರ್ಘ್ಯರತ್ನಮಾಲಯಾ ವನಾಖ್ಯಯಾ ಚ ಮಾಲಯಾ ॥
ವಿಲಾಸಿನಿಸ್ತೃತೋರಸಾ ಬಭಾರ ಚ ಶ್ರಿಯಂ ಪ್ರಭುಃ ॥ ೮೪ ॥

ಅ ॥ ಸರ್ವಸಮರ್ಥನಾದ ಶ್ರೀ ಹರಿಯು ಅಮೌಲ್ಯಗಳಾದ (ಅತ್ಯುತ್ತಮಗಳಾದ) ರತ್ನಗಳಮಾಲಿಕೆಯಿಂದಲೂ, ವನಮೆಂದು ಹೆಸರುಳ್ಳ ವೈಜಯಂತೀ ಮಾಲಿಕೆಯಿಂದಲೂ, ವಿಶೇಷವಾಗಿ ಪ್ರಕಾಶಮಾನವಾದ ವಿಸ್ತೃತವಾದ ವಕ್ಷಸ್ಥಲದಿಂದ ಲಕ್ಷ್ಮೀದೇವಿಯನ್ನು ಧರಿಸಿದನು. ॥ ೮೪ ॥

ಮೂ ॥ ಸ ಭೂತಿವತ್ಸಭೂಷಣಸ್ತನೂದರೇ ವಲಿತ್ರಯೀ ॥
ಉದಾರಮಧ್ಯಭೂಷಣೋಲ್ಲಸತ್ತಡಿತ್ಪ್ರಭಾಂಬರಃ ॥ ೮೫ ॥

ಅ ॥ ಆ ಶ್ರೀ ಹರಿಯು(ಭೂತಿಃ=ಲಕ್ಷ್ಮೀದೇವಿಯು, ವಸತಿ ಅಸ್ಮಿನ್ ಎನ್ನುವ ವ್ಯುತ್ಪತ್ತಿಯಿಂದ 'ಭೂತಿವತ್ಸಃ') ಶ್ರೀವತ್ಸವೇ ಭೂಷಣವಾಗಿ ಉಳ್ಳವನು, ಅಲ್ಪವಾದ ಉದರದಲ್ಲಿ ರೇಖಾತ್ರಯವುಳ್ಳವನು, ಉತ್ಕೃಷ್ಟವಾದ ಕಟಿಭೂಷಣವಾದ ವಡ್ಯಾಣವುಳ್ಳವನು, ಪ್ರಕಾಶಮಾನವಾದ ಮಿಂಚಿನಂತೆ ಕಾಂತಿಯುಳ್ಳ ವಸ್ತ್ರವುಳ್ಳವನು. ॥ ೮೫ ॥

ಮೂ ॥ ಕರೀಂದ್ರಸತ್ಕರೋರುಯುಕ್ಸುವೃತ್ತಜಾನುಮಂಡಲಃ ॥
ಕ್ರಮಾಲ್ಪವೃತ್ತಜಂಘಕಃ ಸುರಕ್ತಪಾದಪಲ್ಲವಃ ॥ ೮೬ ॥
ಲಸದ್ಧರಿನ್ಮಣಿದ್ಯುತಿಃ ರರಾಜ ರಾಘವೋಽಧಿಕಂ ॥
ಅಸಂಖ್ಯಸತ್ಸುಖಾರ್ಣವಃ ಸಮಸ್ತಶಕ್ತಿಸತ್ತನುಃ ॥ ೮೭ ॥

ಅ ॥ ಗಜಶ್ರೇಷ್ಠದ ಕರ್ಕಶತ್ವಾದಿ ದೋಷರಹಿತವಾದ ಶುಂಡಾದಂಡದಂತೆ ಇರತಕ್ಕ ತೊಡೆಗಳಿಂದ ಯುಕ್ತವಾದ ಅತ್ಯಂತ ವರ್ತುಳವಾದ ಜಾನುಪ್ರದೇಶವುಳ್ಳವನು, ಕ್ರಮದಿಂದ ಸ್ವಲ್ಪ ವರ್ತುಲಗಳಾದ (ಅಂದರೆ ಜಾನುಪ್ರದೇಶದಿಂದ ಗುಲ್ಫ (ಮಣಿಗಂಟು) ಪರ್ಯಂತ ಕ್ರಮದಿಂದ ವರ್ತುಲಗಳಾದ) ಮೊಣಕಾಲುಗಳುಳ್ಳವನು. ಅತ್ಯಂತ ತಾಮ್ರವರ್ಣಗಳಾದ ಪಾದರೂಪಗಳಾದ ಕೋಮಲ ದಲಗಳುಳ್ಳವನು, ಪ್ರಕಾಶಮಾನವಾದ ಇಂದ್ರನೀಲಮಣಿಯ ಕಾಂತಿಯಂತೆ ಕಾಂತಿಯುಳ್ಳವನು, ನಿರವಧಿಕಗಳಾದ ನಿರ್ದುಷ್ಟಗಳಾದ ಸುಖಗಳಿಂದ ಸಮುದ್ರದಂತೆ ಇರುವವನು, ಸರ್ವವಿಷಯಕ ಶಕ್ತಿಯುಳ್ಳ ದೋಷಲೇಶರಹಿತವಾದ ಶರೀರವುಳ್ಳವನು ಇಂತಹ ಶ್ರೀರಾಮನು ಕ್ಷರಾಕ್ಷರ ಪುರುಷರಿಂದ ಅಧಿಕವು ಹೇಗೆ ಆದೀತೋ ಹಾಗೆ ಶೋಭಿಸಿದನು ॥ ೮೭ ॥

ಶ್ರೀ ರಾಮನ ಸ್ವರೂಪವನ್ನು ಹೇಳಿ ಗಮನವೈಭವವನ್ನು ಹೇಳುತ್ತಾರೆ—

ಮೂ ॥

ಜ್ಞಾನಂ ನೇತ್ರಾಬ್ಜಯುಗ್ಮಾನ್ನಮ್ರಖಿಲಕಮಲಾತ್ಸರ್ವದೇ ದಾರ್ಢ್ಯಸಾರಾನ್
ತನ್ವಾ ಬ್ರಹ್ಮಾಂಡಬಾಹ್ಯಾಂತರಮಧಿಕರುಚಾ ಭಾಸಯನ್ಭಾಸುರಾಸ್ಯಃ ॥
ಸರ್ವಾಭೀಷ್ಟಾಭಯೇ ಚ ಸ್ವಕರನರಯುಗೇನಾರ್ಥಿನಾಮಾದಧಾನಃ
ಪ್ರಾಯಾದ್ದೇವಾಧಿದೇವಃ ಸ್ವಪದಮಭಿಮುಖಃ ಶ್ರೋತ್ರರಾಶಾಂ ವಿಶೋಕಾಂ ॥
॥ ೮೮ ॥

ಅ ॥ ತನ್ನ ಸ್ಥಾನವಾದ ವೈಕುಂಠಕ್ಕೆ ಅಭಿಮುಖನಾದ ಪ್ರಕಾಶಮಾನವಾದ ಮುಖವುಳ್ಳ, ದೇವತೆಗಳಿಗೂ ಸ್ವಾಮಿಯಾದ ಶ್ರೀ ರಾಮನು ಜ್ಞಾನಾದ್ಯಭೀಷ್ಟವನ್ನು ಇಚ್ಛಿಸುವ ಪ್ರಾಣಿಗಳಿಗೆ ಕಮಲದಲದಂತೆ ಇರುವ ಕಣ್ಣುಗಳ ಎರಡರದೆಸೆಯಿಂದ ಜ್ಞಾನವನ್ನು ಧರಿಸತಕ್ಕವನಾಗಿಯೂ,

ಶ್ರೇಷ್ಠವಾದ ವದನವೆನ್ನುವ ಪದ್ಮದೆಶೆಯಿಂದ ಎಲ್ಲಾ ವೇದಗಳ ಅರ್ಥವಿಶೇಷಗಳನ್ನು ಪುಷ್ಪೀಕರಿಸು ವವನಾಗಿಯೂ, ಅಧಿಕವಾದ ಕಾಂತಿಯುಳ್ಳ ಶರೀರಕಾಂತಿಯಿಂದ ಬ್ರಹ್ಮಾಂಡದ ಅಬಾದಿ ಒಂಭತ್ತು ಆವರಣಗಳ ಬಾಹ್ಯಪ್ರವೇಶವನ್ನೂ, ಅಂತರ್ವಿದ್ಯಮಾನವಾದ ಪ್ರದೇಶವನ್ನೂ ಪ್ರಕಾಶಪಡಿಸುವವ ನಾಗಿಯೂ, ತನ್ನ ಶ್ರೇಷ್ಠಗಳಾದ ಕೈಗಳ ಎರಡರಿಂದ ಎಲ್ಲಾಜನರ ಅಭೀಷ್ಟವನ್ನೂ ಅಭಯವನ್ನೂ ಕೂಡ ಧರಿಸುವವನಾಗಿಯೂ (ಅಂದರೆ ಯಾವ ಯಾವ ಅರ್ಥಿಗಳಿಗೆ ಯಾವ್ಯಾವುದು ಇಷ್ಟವೋ ಅವುಗಳನ್ನೆಲ್ಲಾ ಮಾಡುವವನಾಗಿ ಶೋಕವುಳ್ಳ (ಹರ್ಷಚಿತ್ತವುಳ್ಳನಾಗಿ) ಹೋಗಲ್ಪಟ್ಟ ಉತ್ತರದಿಕ್ಕನ್ನು ಕುರಿತು, ಹೋದನು ॥ ೮೮ ॥

ಮೂ ॥

ದಧ್ರೇಛತ್ರಂ ಹನೂಮಾನ್ಸ್ರವದಮೃತಸಮಯಂ ಪೂರ್ಣಚಂದ್ರಾಯುತಾಭಂ
ಸೀತಾ ಸ್ವೈವಾಖಿಲಾಕ್ಷ್ಣಾಂ ವಿಷಯಮುಪಗತಾ ಶ್ರೀರಿತಿ ಹ್ರೀರಥೈಕಾ ॥
ದ್ವೇಧಾಭೂತಾ ದುಧಾವ (ದಧಾರ) ವ್ಯಜನಮುಭಯತಃ ಪೂರ್ಣ-
ಚಂದ್ರಾಂಶುಗೌ ೦
ಪ್ರೋದ್ಯದ್ಭಾಸ್ವತ್ಪ್ರಭಾಭಾ ಸಕಲಗುಣತನುರ್ಭೂಷಿತಾ ಭೂಷಣೈಃ ಸ್ವೈಃ ॥
॥ ೮೯ ॥

ಅ ॥ ಹನುಮಂತನು ಸುರಿಯುತಕ್ಕ ಅಮೃತಜಲದಿಂದ ಪ್ರಚುರವಾದ ಪೂರ್ಣಚಂದ್ರರ ಅಯುತದ (೧೦೦೦೦) ಕಾಂತಿಯಂತೆ ಕಾಂತಿಯುಳ್ಳ (ಅಂದರೆ ಅಯುತ ಪೂರ್ಣಚಂದ್ರರ ಕಾಂತಿಯಿಂದ ಸದೃಶವಾದ) ಛತ್ರವನ್ನು ಧರಿಸಿದನು. ಉದಯಿಸಿಕೊಂಡುಬರತಕ್ಕ ಸೂರ್ಯನ ಪ್ರಕಾಶವಂತೆ ಪ್ರಕಾಶವುಳ್ಳ, ಭಕ್ತಿಜ್ಞಾನಮೊದಲಾದ ಎಲ್ಲಾ ಗುಣಗಳೇ ಸ್ವರೂಪವಾಗಿವುಳ್ಳ, ಸ್ವಕೀಯಗಳಾದ ಆಭರಣಗಳಿಂದ ಅಲಂಕರಿಸಿಕೊಳ್ಳಲ್ಪಟ್ಟ, ಎಲ್ಲರ ಕಣ್ಣುಗಳಿಗೆ ಪ್ರತ್ಯಕ್ಷವನ್ನು ಹೊಂದಿರತಕ್ಕ, ಮೊದಲು ಯಾರು ಅದೃಶ್ಯಳಾಗಿದ್ದಳೋ ಆ ಸೀತಾದೇವಿಯು ಒಬ್ಬಳೇ ಆಗಿದ್ದಾಗ್ಯೂ ಆಮೇಲೆ ಏಕಕಾಲದಲ್ಲಿ ಶ್ರೀ ನಾಮಕಳು, ಹ್ರೀ ನಾಮಕಳು ಹೀಗೆ ಎರಡು ಪ್ರಕಾರಳಾಗಿ (ಅಂದರೆ—ಶ್ರೀ ಹ್ರೀ ಎನ್ನುವ ಎರಡು ಸ್ವರೂಪವನ್ನು ಹೊಂದಿ) ಪೂರ್ಣಚಂದ್ರರ ಕಿರಣದಂತೆ ಶ್ವೇತವರ್ಣವಾದ ಬಾಲವ್ಯಜನವನ್ನೂ ಚಾಮರವನ್ನೂ ಕೂಡ ವೀಜಿಸಿದಳು.

ವಿಶೇಷಾಂಶ— (1) ವಿಶೇಷೇಣ 'ಅಜ್ಯತೇ = ವಾಯುನಾ ಸಂಬಧ್ಯತೇ ಅನೇನ' ಎನ್ನುವ ವ್ಯುತ್ಪತ್ತಿಯಿಂದ ಬಾಲವ್ಯಜನವೂ, ('ವಿಶೇಷೇಣ ವ್ಯಜ್ಯತೇ ವಾಯುರನೇನ' ಎನ್ನುವ ವ್ಯುತ್ಪತ್ತಿ ಯಿಂದ ವಾಯುವನ್ನು ವ್ಯಕ್ತೀಕರಿಸುವುದರಿಂದ ಚಾಮರವೂ ಕೂಡ ವ್ಯಜನವೆನ್ನಿಸುತ್ತದೆ. (2) 'ಬಾಲವ್ಯಜನಮಾದಾಯ ರತ್ನದಂಡಂ ಸಖೀಕರಾತ್ । ತೇನ ವೀಜಯತೀ ದೇವೀ ಉಪಾಸಾಂಚಕ್ರ ಈಶ್ವರಂ' ಎಂದು ಭಾಗವತದಲ್ಲಿ ಪ್ರಯೋಗವಿದ್ದ ಪ್ರಯುಕ್ತವೂ ಚಾಮರವೂ ವ್ಯಜನವೆನ್ನಿಸುತ್ತದೆ. ॥ ೮೯ ॥

ಮೂ ॥ ಸಾಕ್ಷಾಚ್ಚಕ್ರತನಸ್ತಥೈವ ಭರತಶ್ಚಕ್ರಂ ದಧದ್ದಕ್ಷಿಣೇ-
ನಾಯಾತ್ಸ್ವಕೃತ ಏವ ಶಂಖವರಭೃಚ್ಛ್ರೀಖಾತ್ಮಕಃ ಶತ್ರುಹಾ ॥
ಅಗ್ರೇ ಬ್ರಹ್ಮಪುರೋಗಮಾಃ ಸುರಗಣಾ ವೇದಾಶ್ಚ ಸೋಂಕಾರಕಾಃ
ಪಶ್ಚಾತ್ಸರ್ವಜಗಜ್ಜಗಾಮ ರಘುಪಂ ಯಾಂತಂ ನಿಜಂ ಧಾಮ ತಂ ॥
॥ ೯೦ ॥

ಅ || ಸ್ವಕೀಯವಾದ ಮಂದಿರವನ್ನು ಹೋಗತಕ್ಕ ಆ ಶ್ರೀ ರಾಮನನ್ನು ಅನುಸರಿಸಿ ಹೇಗೆ ದುರ್ಗಾದೇವಿಯು ಚಕ್ರಾಭಿಮಾನಿಯೋ ಹಾಗೆಯೇ (ದುರ್ಗಾದೇವಿಗೆ ಪ್ರಲಯಕಾಲ ದಲ್ಲಿಯೂ ಚಕ್ರಾಭಿಮಾನಿತ್ವವಿದೆ. ಕಾಮನಿಗೆ ಹಾಗಲ್ಲ. ಮತ್ತೆ ಸ್ಥಿತಿಕಾಲದಲ್ಲಿಯೇ) ಸಾಕ್ಷಾತ್ತಾಗಿ ಚಕ್ರಾಭಿಮಾನಿಯಾದ ಭರತನು ಸುದರ್ಶನವನ್ನು ಧರಿಸಿದವನಾಗಿ ಶ್ರೀ ರಾಮನ ದಕ್ಷಿಣ ಪಾರ್ಶ್ವದಿಂದ ಹೋದನು. ಶಂಖಾಭಿಮಾನಿಯಾದ ಶ್ರೀ ದೇವಿಯೂ, ಕಾಮಪುತ್ರನಾದ ಅನಿ ರುದ್ಧನೂ ಕೂಡ (ಶಂಖಾಭಿಮಾನಿತ್ವವನ್ನು ಹೊಂದಿದನು. ಶತ್ರು ಸಂಹಾರಕನಾದ ಶತ್ರು ಘ್ನನು ಶಂಖಗಳಲ್ಲಿ ಶ್ರೇಷ್ಠವಾದ ಪಾಂಚಜನ್ಯವನ್ನು ಧರಿಸಿದವನಾಗಿ ಎಡಪಾರ್ಶ್ವದಿಂದ ಹೋದನು ಶ್ರೀ ರಾಮನ ಮುಂಭಾಗದಲ್ಲಿ ಬ್ರಹ್ಮನೇ ಮೊದಲಾಗಿವುಳ್ಳ ದೇವತೆಗಳ ಸಮೂಹ ಗಳೂ, ಪ್ರಣವದಿಂದ ಸಹಿತವಾದ ವೇದಾಭಿಮಾನಿಗಳಾದ ದೇವತೆಗಳೂ ಹೋದರು. ರಾಮನ ಹಿಂದುಗಡೆಯಲ್ಲಿ ತೃಣ ಮೊದಲಾದ ಎಲ್ಲಾ ಜಗತ್ತು ಹೋಯಿತು. || ೯೦ ||

ಮೂ || ತಸ್ಯ ಸೂರ್ಯಸುತಪೂರ್ವವಾನರಾ
ದಕ್ಷಿಣೇನ ಮನುಜಾಸ್ತು ಸವ್ಯತಃ ||
ರಾಮಜನ್ಮ ಚರಿತಾನಿ ತಸ್ಯ ತೇ
ಕೀರ್ತಯಂತ ಉಚ್ಚೈರ್ದ್ರುತಂ ಯಯುಃ || ೯೧ ||

ಅ || ಸೂರ್ಯನ ಪುತ್ರನಾದ ಸುಗ್ರೀವನೇ ಮೊದಲಾಗಿವುಳ್ಳ ಕಪಿಗಳು ಶ್ರೀ ರಾಮನ ಬಲಭಾಗದಿಂದಲೂ, ಮನುಷ್ಯರಾದರೂ ಆ ಶ್ರೀರಾಮನ ಎಡಭಾಗದಿಂದಲೂ, ಆ ಶ್ರೀ ರಾಮನ ('ರಮಯಂತೀತಿ ರಾಮಾಣಿ') ಮನೋಹರಗಳಾದ ಜನ್ಮಚರಿತ್ರೆಗಳನ್ನು ವೈದಿಕಸೂಕ್ತಗಳಿಂದ ಘಟ್ಟಿಯಾಗಿ ಅವರೆಲ್ಲರೂ ಹೇಳುವವರಾಗಿ ಶೀಘ್ರದಲ್ಲಿ ಹೋದರು || ೯೧ ||

ಮೂ ||
ಗಂಧರ್ವೈರ್ಗೀಯಮಾನೋ ವಿಬುಧಮುನಿಗಣೈರಬ್ಜಸಂಭೂತಿಪೂರ್ವೈಃ-
ವೇದೋದಾರಾರ್ಥವಾಗ್ಭಿಃ ಪ್ರಣಿಹಿತಸುಮನಾಃ (ಸಃ) ಸರ್ವದಾ
ಸ್ತೂಯಮಾನಃ ||
ಸರ್ವೈರ್ಭೂತೈಶ್ಚ ಭಕ್ತ್ಯಾ ಸ್ವನಿಮಿಷನಯನೈಃ ಕೌತುಕಾದ್ವೀಕ್ಷ್ಯಮಾಣಃ
ಪ್ರಾಯಾಚ್ಛೇಷಗರುತ್ಮದಾದಿಕನಿಜೈಃ ಸಂಸೇವಿತಂ (ತಃ) ಸ್ವಂ ಪದಂ || ೯೨ ||

ಅ || ಗಂಧರ್ವರಿಂದ ಗಾನ ಮಾಡಲ್ಪಡತಕ್ಕವನು, ಕಮಲದಿಂದ ಹುಟ್ಟಿದ ಬ್ರಹ್ಮನೇ ಮೊದಲಾಗಿವುಳ್ಳ, ದೇವತೆಗಳೂ ಮುನಿಗಳೂ ಇವರ ಸಮೂಹಗಳಿಂದ ವೇದಗಳ ಉತ್ಕೃಷ್ಟ ವಾದ ಅರ್ಥವುಳ್ಳ ವಚನಗಳಿಂದ ಯಾವಾಗಲೂ ಸ್ತೋತ್ರ ಮಾಡಲ್ಪಡತಕ್ಕವನು, ಶಿರಸ್ಸಿನಲ್ಲಿ ಸಮರ್ಪಿಸಲ್ಪಟ್ಟ ಪುಷ್ಪಗಳುಳ್ಳವನು, ಭಕ್ತಿಯಿಂದ ಅತ್ಯಂತವಾಗಿ ನಿಮೇಷರಹಿತಗಳಾದ ನಯನಗಳುಳ್ಳ ಎಲ್ಲಾ ಪ್ರಾಣಿಗಳಿಂದಲೂ ಅತಿ ಹರ್ಷದಿಂದ ಕಾಣಲ್ಪಡತಕ್ಕವನು, ಇಂತಹ ಶ್ರೀ ರಾಮನು-ಶೇಷನೂ ಗರುಡನು-ಇವರೇ ಮೊದಲಾಗಿವುಳ್ಳ ಪಾರ್ಷದರಿಂದ ಚೆನ್ನಾಗಿ ಸೇವಿಸಿ ಕೊಳ್ಳಲ್ಪಟ್ಟವನಾಗಿ ಅಥವಾ ಸೇವಿಲ್ಪಡುವ ಸ್ವಕೀಯವಾದ ಪದವನ್ನು ಹೊಂದಿದನು || ೯೨ ||

ಮೂ || ಬ್ರಹ್ಮರುದ್ರಗರುಡೈಃ ಸಶೇಷಕೈಃ
ಪ್ರೋಚ್ಯಮಾನಸುಗುಣೋರುವಿಸ್ತರಃ ||

ಆರುರೋಹ ವಿಭುರಂಬರಂ ಶನೈ-
ಸ್ತೇ ಚ ದಿವ್ಯವಪುಷೋಽಭವಂಸ್ತದಾ ॥ ೯೩ ॥

ಅ ॥ ಶಿವನೂ, ದಕ್ಷಪ್ರಜಾಪತಿಯೂ ಇವರಿಂದ ಸಹಿತರಾದ ಬ್ರಹ್ಮನೂ, ರುದ್ರನೂ, ಗರುಡನೂ ಇವರಿಂದ ಚೆನ್ನಾಗಿ ಸ್ತುತಿಸಲ್ಪಡತಕ್ಕ ಶೋಭನಗಳಾದ ಗುಣಗಳ ಅತಿ ವಿಸ್ತಾರವುಳ್ಳ ಶ್ರೀ ರಾಮನು ಆಕಾಶವನ್ನು ಏರಿದನು. ಪೂರ್ವೋಕ್ತಗಳಾದ ಪಕ್ಷಿಗಳೂ ಇವುಗಳೇ ಮೊದಲಾದವುಗಳು ಆ ಆಕಾಶಾರೋಹಣ ಕಾಲದಲ್ಲಿ ಉತ್ತಮಶರೀರವುಳ್ಳವುಗಳು ಆದವು ॥ ೯೩ ॥

ಮೂ ॥ ಅಥ ಬ್ರಹ್ಮಾ ಹರಿಂ ಸ್ತುತ್ವಾ ಜಗಾದೇದಂ ವಚೋ ವಿಭುಂ ॥
ತ್ವದಾಜ್ಞಯಾ ಮಯಾ ದತ್ತಂ ಸ್ಥಾನಂ ದಶರಥಸ್ಯ ಹಿ ॥ ೯೪ ॥

ಅ ॥ ಆ ಮೇಲೆ ಬ್ರಹ್ಮನು ಸರ್ವಸಮರ್ಥನಾದ ಶ್ರೀ ಹರಿಯನ್ನು ಸ್ತೋತ್ರಮಾಡಿ, ಈ ಮಾತನ್ನು ಹೇಳಿದನು. (ಎಲೋ ಶ್ರೀ ಹರಿಯೇ!) ನನ್ನಿಂದ ದಶರಥನಿಗೆ ನಿನ್ನ ಅಪ್ಪಣೆಯಿಂದ (ಅಂದರೆ ಲಂಕಾಪಟ್ಟಣಕ್ಕೆ ಯಮನ ಪಟ್ಟಣದೆಶೆಯಿಂದ ನಿನ್ನಿಂದ ಕರೆಸಲ್ಪಟ್ಟ ನಿನ್ನ ತಂದೆಯಾದ ದಶರಥರಾಜನಿಗೆ ಇನ್ನುಮುಂದಕ್ಕೆ ಇಷ್ಟರವರೆಗೆ ಇದ್ದ ಲೋಕಕ್ಕಿಂತಲೂ ಉತ್ಕೃಷ್ಟವಾದ ಲೋಕವನ್ನು ಕೊಡು ಎನ್ನುವ ನಿನ್ನ ಆಜ್ಞೆಯಿಂದಲೇ) ಉತ್ಕೃಷ್ಟವಾದ ಸ್ಥಾನವು ಕೊಡಲ್ಪಟ್ಟಿದೆ ॥ ೯೪ ॥

ಮೂ ॥ ಮಾತ್ರಾಣಾಂ ಚಾಪಿ ತಲ್ಲೋಕಸ್ತ್ವಯುತಾಬ್ದಾದಿತೋಽಗ್ರತಃ ॥
ಅನರ್ಹಾಯಾಸ್ತ್ವಯಾಜ್ಞಪ್ತಾ ಕೈಕೇಯ್ಯಾ ಅಪಿ ಸದ್ಗತಿಃ ॥
ಸೂತ್ವಾ ತು ಭರತಂ ನೈಷಾ ಗಚ್ಛೇತ ನಿರಯಾನಿತಿ ॥ ೯೫ ॥
ತಥಾಪಿ ಸಾ ಯದಾವೇಶಾಚ್ಚಕಾರ ತ್ವಯ್ಯಶೋಭನಂ ॥
ನಿಕೃತಿರ್ನಾಮ ಸಾ ಕ್ಷಿಪ್ತಾ ಮಯಾ ತಮಸಿ ಶಾಶ್ವತೇ ॥ ೯೬ ॥

ಅ ॥ (ನಿನ್ನ) ಈ ಸ್ವರ್ಗಾರೋಹಣಕಾಲದೆಶೆಯಿಂದ, ಅಯುತ ಸಂವತ್ಸರ (೧೦೦೦೦) ಕ್ಕಿಂತ ಮೊದಲು ವಿಶೇಷವಾಗಿ ಕೌಸಲ್ಯಾದಿ ತಾಯಂದಿಯರಿಗೂ ಕೂಡ ಆ ದಶರಥನ ಲೋಕವು ಕೊಡಲ್ಪಟ್ಟಿದೆ. ಈ ಕೈಕೇಯಿಯು ಭರತನನ್ನು ಹಡದು ನರಕಗಳನ್ನು ಹೊಂದಬಾರದು, ಎನ್ನುವ ಅಭಿಪ್ರಾಯದಿಂದ (ಸದ್ಗತಿಯನ್ನು ಹೊಂದಲಿಕ್ಕೆ) ಅಯೋಗ್ಯಳಾದ ಕೈಕೇಯಿಗೂ ಕೂಡ ಸದ್ಗತಿಯು ನಿನ್ನಿಂದ (ಯದ್ಯಪಿ) ಅಜ್ಞಾಪಿಸಲ್ಪಟ್ಟಿತು. ಆದಾಗ್ಯೂ (ಅಂದರೆ, ಸದ್ಗತಿಗೆ ಯೋಗ್ಯತ್ವವಿದ್ದರೂ) ಆ ಕೈಕೇಯಿಯು ಯಾವ ನಿಕೃತ್ಯಾಖ್ಯ ರಾಕ್ಷಸಿಯ ಆವೇಶದೆಶೆಯಿಂದ (ಅಂದರೆ— ಆ ನಿಕೃತ್ಯಾಖ್ಯ ರಾಕ್ಷಸಿಯು ಹೃದಯಮೊಳಗೆ ಪ್ರವೇಶಮಾಡಿದನರಿಂದ) ನಿನ್ನಲ್ಲಿ ಸಾಮ್ರಾಜ್ಯಾಭಿಷೇಕಕ್ಕೆ ವಿಘ್ನರೂಪವಾದ ಅಮಂಗಲವನ್ನು ಮಾಡಿರುವಳೋ, ಅಂತಹ ನಿಕೃತಿ ನಾಮಕಳಾದ ಅಸುರಿಯು ನಿತ್ಯವಾದ ಅಂಧಂತಮಸ್ಸಿನಲ್ಲಿ ಬಿಸಾಡಲ್ಪಟ್ಟಳು. (ಕಳುಹಿಸಲ್ಪಟ್ಟಳು.)

ವಿಶೇಷಾಂಶ—(1) ನೀನು ಅರಣ್ಯಕ್ಕೆ ಹೋಗುತ್ತಿರಲು ದಶರಥರಾಜನಿಗೆ ನಿನ್ನ ವಿಯೋಗದಿಂದ ಆವಾಗಲೇ ಮರಣಬಂದಿರುವುದರಿಂದ ಈ ನಿನ್ನ ಸ್ವರ್ಗಾರೋಹಣಕಾಲಕ್ಕಿಂತ ಮೊದಲೇ ಸ್ವಲ್ಪ ಕಡಿಮೆಯಾದ ಹದಿಮೂರುಸಹಸ್ರ (೧೩೦೦೦)ವರ್ಷಕ್ಕಿಂತ ಮೊದಲೇ ದಶರಥನಿಗೋಸ್ಕರ ದಿವ್ಯವಾದ ಸ್ಥಾನವು ಕೊಡಲ್ಪಟ್ಟಿದೆ. ಆ ಮೇಲೆ ಕೂಡ ಮೂರು ಸಹಸ್ರ(೩೦೦೦)ವರ್ಷಪರ್ಯಂತವಾಗಿ ನಿನ್ನ ಐಶ್ವರ್ಯವನ್ನು ನೋಡಿಕೊಂಡು ಸಂತೋಷದಿಂದ ಒಟ್ಟಿಗೆ ಇರುತ್ತಿದ್ದ ಕೌಸಲ್ಯಾದಿ

ತಾಯಿಯರಿಗೆ ಆ ಮೇಲೆಯೇ ಮರಣವಾದಪ್ರಯುಕ್ತ ಹತ್ತು ಸಹಸ್ರ (10000) ವರ್ಷಕ್ಕಿಂತ ಮೊದಲೇ ಗಂಡನಾದ ದಶರಥರಾಜನ ಸ್ಥಾನವು ಕೊಡಲ್ಪಟ್ಟಿದೆ. (2) ಅವರಲ್ಲಿಯೂ ವಿಶೇಷವಿದೆ. ನಿನಗೆ ರಾಜ್ಯಕ್ಕೆ ಪ್ರತಿಬಂಧವನ್ನು ಮಾಡಿರುವ ನಿಮಿತ್ತದಿಂದ ಸ್ವಲ್ಪ ದೋಷದಿಂದ ಕೂಡಿರುವಪ್ರಯುಕ್ತ ಔಪಾಧಿಕವಾದ, ಸೂತಕರೂಪವಾದ ದೋಷನಿಮಿತ್ತವಾಗಿ ಆವಾಗಲೇ ದೇವಪೂಜೆಗೆ ಅನರ್ಹನಾದ ಬ್ರಾಹ್ಮಣನಂತೆಯೇ ಕೌಸಲ್ಯಾ-ಸುಮಿತ್ರಾ ಇವರಿಬ್ಬರಿಂದ ಕೂಡಿಕೊಂಡೇ ಸದ್ಗತಿಗೆ ಅನರ್ಹಳಾದಾಗ್ಯೂ ಕೈಕೇಯಿಗೆ ಸದ್ಗತಿಯು ದೋಷಪರಿಹಾರಾನಂತರದಲ್ಲಿಯೇ ಆಜ್ಞಾಪಿಸಲ್ಪಟ್ಟಿತು. ಸ್ವಾಭಾವಿಕವಾಗಿಯೇ ಅಯೋಗ್ಯತೆಯಿದ್ದರೆ ಸದ್ಗತಿಗೆ ಆಜ್ಞೆಯನ್ನು ಕೊಡತಕ್ಕ ಶ್ರೀ ರಾಮನಿಗೇನೇ ಅಕೌಶಲ್ಯವು ಬರಬೇಕಾಗುವುದು. (3) ಹೊರಗಿನಿಂದ ದಾಸಿಯಾಗಿ ಮಂಥರೆಯು ಇದ್ದಾಗ್ಯೂ ಹೃದಯದೊಳಗೆ ಮನಸ್ಸಿನ ಮಾಲಿನ್ಯವನ್ನು ಹೊಂದಿಸಿಕೊಡುವುದಕ್ಕಾಗಿ ಮತ್ತೊಬ್ಬಳೂ (ನಿಕೃತಿಯೆನ್ನುವ ರಾಕ್ಷಸಿಯೂ) ಅಪೇಕ್ಷಿತಳೇ ಆಗಿರುತ್ತಾಳೆ. ಹೊರಗೂ ಶ್ರೀ ರಾಮನಿಗೆ ರಾಜ್ಯವನ್ನು ನಾಶಪಡಿಸಬೇಕೆನ್ನುವ ದುರ್ವಾಕ್ಯವನ್ನು ಹೇಳುವುದಕ್ಕಾಗಿ ಮಂಥರೆಯೂ ಅಪೇಕ್ಷಿತಳಾಗಿರುತ್ತಾಳೆ. (4) ಮಾಯಾವಾದಿಗಳು ನೂರಾರು ಐಕ್ಯವಾಕ್ಯಗಳನ್ನು ಹೇಳಿದರೂ ತತ್ವವಾದಿಗಳ ಮನಸ್ಸು ಹೇಗೆ ವ್ಯತ್ಯಾಸವಾಗಲಾರದೋ ಹಾಗೆಯೇ ಹೊರಗೆ ದುರ್ವಾಕ್ಯವನ್ನು ಕೇಳಿದಾಗ್ಯೂ ಕೈಕೇಯಿಯ ಮನಸ್ಸು ಅಧರ್ಮವನ್ನು ಸರ್ವಥಾ ಅಂಗೀಕರಿಸದೆ ಹೋಗಬೇಕಾಗುವುದು. ಆದಕಾರಣ ಮನಸ್ಸಿಗೆ ಮಾಲಿನ್ಯವನ್ನು ಹುಟ್ಟಿಸುವುದಕ್ಕಾಗಿಯೂ ನಿಕೃತಿಯೆನ್ನುವ ರಾಕ್ಷಸಿಯು ಅಪೇಕ್ಷಿತಳೇ ಆದಳು. ಕೈಕೇಯಿಯು ಮಲಿನವಾದ ಚಿತ್ತವುಳ್ಳವಳಾದಾಗ್ಯೂ ದಶರಥನನ್ನು ಅಧರ್ಮದಲ್ಲಿ ಪ್ರವೃತ್ತಿಮಾಡಿಸಲಿಕ್ಕೆ ಅಶಕ್ತಳು. ಆದಕಾರಣ ಮೊದಲು ಗಂಡನು ಕೊಟ್ಟ ವರಕ್ಕೆ ಈ ಫಲವನ್ನೇ ಬೇಡಿಕೊಳ್ಳು ಎನ್ನುವ ದುಷ್ಟವಾದ ಉಪಾಯವನ್ನು ಶಿಕ್ಷಿಸುವುದಕ್ಕಾಗಿ ಹೊರಗೂ ಕೂಡ ಮತ್ತೊಬ್ಬಳು ಆವಶ್ಯಕಳೇ. ಮಂಥರೆಯು ದಾಸಿಯಾಗಿ ಶ್ರೀ ರಾಮನಿಗೆ ರಾಜ್ಯವನ್ನು ಸಿಗದಂತೆ ಮಾಡು ಎನ್ನುವ ಬ್ರಹ್ಮನ ಉಪದೇಶವಿದ್ದ ಪ್ರಯುಕ್ತ ಈ ಕುಮಾರ್ಗವನ್ನು ತಿಳಿದಿರುತ್ತಾಳೆ. ನಿಕೃತಿಯಾದರೂ ಈ ಕುಮಾರ್ಗವನ್ನು ತಿಳಿಯದೆ ಇರುವುದರಿಂದ ಧೌತವಸ್ತ್ರವನ್ನು ಕೆಸರು ಹೇಗೆ ಮಲಿನವನ್ನಾಗಿ ಮಾಡುತ್ತದೋ, ಹಾಗೆಯೇ ಮನಸ್ಸಿಗೆ ಮಾಲಿನ್ಯವನ್ನು ಮಾಡುವುದಕ್ಕಾಗಿಯೇ ಸಮರ್ಥಳಾಗಿರುತ್ತಾಳೆ. ಮಂಥರೆಯಂತೆ ಕುಮಾರ್ಗವನ್ನು ಉಪದೇಶ ಮಾಡಲಿಕ್ಕೂ ಶಕ್ತಳಲ್ಲ. ಆದಕಾರಣ ರಾಕ್ಷಸಿಯರಿಬ್ಬರೂ ಅಪೇಕ್ಷಿತರಾದರು ॥ ೬೫ ॥ ೬೬ ॥

ಮೂ ॥ ಕೈಕೇಯೀ ತು ಚಲಾಂಲ್ಲೋಕಾನ್ಪ್ರಾಪ್ತಾ ನೈವಾಚಲಾನ್ಕ್ವಚಿತ್ ।
ಪಶ್ಚಾದ್ಭಕ್ತಿಮತೀ ಯಸ್ಮಾತ್ತ್ವಯಿ ಸಾ ಯುಕ್ತಮೇವ ತತ್ ॥ ೯೭ ॥

ಅ ॥ ಕೈಕೇಯಿಯಾದರೂ (ಹಿಂದೆ ಹೇಳಲ್ಪಟ್ಟ ದೋಷವಿಶೇಷವಿದ್ದಪ್ರಯುಕ್ತ ಇದಕ್ಕಿಂತ ಮೊದಲು) ಚಂಚಲಗಳಾದ (ಅಂದರೆ ನಶ್ವರಗಳಾದ) ಸ್ವರ್ಗಾದಿ ಲೋಕಗಳನ್ನೇ ಹಿಂದೆ ಹೊಂದಿರುತ್ತಾಳೆ. ಸಾಂತಾನಾದಿ ಲೋಕಗಳನ್ನು ಯಾವ ಪ್ರದೇಶಗಳಲ್ಲಿಯೂ ಕೂಡ ಇದಕ್ಕಿಂತ ಮೊದಲು ಹೊಂದಲೇ ಇಲ್ಲ. (ಅಂದರೆ— ಸೋಪಾಧಿಕವಾದುದರಿಂದ ದುರ್ಬಲವಾಗಿರುವುದರಿಂದಲೂ, ಸತ್ಪುತ್ರನನ್ನು ಹಡೆದಿರುವುದರಿಂದುಂಟಾದ ಪುಣ್ಯಪ್ರಾಬಲ್ಯದಿಂದಲೂ ನರಕವನ್ನು ಕೊಡಲಿಕ್ಕೆ ಅಸಮರ್ಥವಾದ ದೋಷದಿಂದ ಅಚಲಲೋಕ ಪ್ರಾಪ್ತಿಗೆ ಪ್ರತಿಬಂಧಮಾತ್ರವು ಮಾಡಲ್ಪಟ್ಟಿತು. ಸತ್ಪುತ್ರನನ್ನು ಹಡೆದಿರುವುದರಿಂದುಂಟಾದ ಪುಣ್ಯಮಾಹಾತ್ಮ್ಯೆಯಿಂದ ಸ್ವರ್ಗಲೋಕ ಮೊದಲಾದ ಚಲ (ನಶ್ವರ) ಲೋಕಪ್ರಾಪ್ತಿಯೂ ಆಯಿತು.) ಆ ಮೇಲೆ ಆ ಕೈಕೇಯಿಯು

ನಿನ್ನಲ್ಲಿ ವಿಶೇಷವಾಗಿ ಯಾವ ಕಾರಣದಿಂದ ಭಕ್ತಿಯುಳ್ಳವಳೋ, ಅದುದರಿಂದ ಸದ್ಗತಿಯನು ಕೊಡಲಿಕ್ಕೆ ಆಜ್ಞಾಪಿಸಿದ್ದು ಯುಕ್ತವೇ. (ಅಂದರೆ—ಔಪಾಧಿಕದೋಷಪರಿಹಾರಾನಂತರದಲ್ಲಿ ಆ ಕೈಕೇಯಿಗೂ ಕೂಡ ನಿನ್ನಿಂದ ಆಜ್ಞಾಪಿಸಿಕೊಳ್ಳಲ್ಪಟ್ಟ ಸದ್ಗತಿಯನ್ನು ಕೊಡುವೆನು) ॥ ೯೭ ॥

ಮೂ ॥ ಮಂಥರಾ ತು ತಮಸ್ಯಂಧೇ ಪಾತಿತಾ ದುಷ್ಟಚಾರಿಣೀ ॥
ಸೀತಾರ್ಥಂ ಯೇ ತ್ವನಿಂದಂಸ್ತ್ವಾಂ ತೇ ಚ ಯಾತಾ ಮಹತ್ತಮಃ ॥ ೯೮ ||
ಪ್ರಾಯಶೋ ರಾಕ್ಷಸಾಶ್ಚೈವ ತ್ವಯಿ ಕೃಷ್ಣತ್ವಮಾಗತೇ ॥
ಶೇಷಾ ಯಾಸ್ಯಂತಿ ತಚ್ಛೇಷಾ ಅಷ್ಟಾವಿಂಶೇ ಕಲೌ ಯುಗೇ ॥ ೯೯ ॥
ಗತೇ ಚತುಃಸಹಸ್ರಾಬ್ದೇ ತಮೋಗಾಸ್ತ್ರಿಶತೋತ್ತರೇ ॥ ೧೦೦ ॥

ಅ ॥ ಅತಿದುಷ್ಟವಾದ ಆಚಾರವುಳ್ಳ ಮಂಥರಾನಾಮಕಳಾದ ಕೈಕೇಯಿಯ ದಾಸಿಯಾದರೂ ಅಂಧಂತಮಸ್ಸಿನಲ್ಲಿ ಬೀಳಿಸಲ್ಪಟ್ಟಳು. ಮತ್ತು ಸೀತಾದೇವಿಗೋಸ್ಕರ ಯಾರು ತಾನೇ ನಿನ್ನನ್ನು ನಿಂದಿಸಿರುವರೋ ಅವರೂ ಕೂಡ ಮಹತ್ತಾದ ಅಂಧಂತಮಸ್ಸನ್ನು ಹೊಂದಿರುವರು. ನಿನ್ನಿಂದ ಸಂಹರಿಸಿಕೊಳ್ಳಲ್ಪಟ್ಟ ರಾಕ್ಷಸರು ಪ್ರಾಯಶಃ ತಮಸ್ಸನ್ನು ಹೊಂದಿರುತ್ತಾರೆ. ಉಳಿದವರು ನೀನು ಕೃಷ್ಣಾವತಾರವನ್ನು ಹೊಂದುತ್ತಿರಲು ತಮಸ್ಸನ್ನು ಹೊಂದುವರು. ಕೃಷ್ಣಾವತಾರದಲ್ಲಿಯೂ ಸಂಹಾರವಾದ ಮೇಲೆ ತಮಸ್ಸನ್ನು ಹೊಂದದೆ ಉಳಿದಿರತಕ್ಕ ಮಣಿಮದಾದಿ ದೈತ್ಯರು ಇಪ್ಪತ್ತೆಂಟನೇ (೨೮) ಕಲಿಯುಗದಲ್ಲಿ ಮುನ್ನೂರರಿಂದ ಜಾಸ್ತಿಯಾದ ನಾಲ್ಕು ಸಹಸ್ರ (ಅಂದರೆ— ನಾಲ್ಕು ಸಹಸ್ರದ ಮುನ್ನೂರು) (೪೩೦೦) ವರ್ಷವು ದಾಟುತ್ತಿರಲು ತಮಸ್ಸನ್ನು ಹೊಂದುವರು ॥ ೯೮ ॥ ೯೯ ॥ ೧೦೦ ॥

ಮೂ ॥ ಅಥ ಯೆ ತ್ವತ್ಪದಾಂಭೋಜಮಕರಂದೈಕಲಿಪ್ಸವಃ ॥
ತ್ವಯಾ ಸಹಾಗತಾಸ್ತೇಷಾಂ ವಿಧೇಹಿ ಸ್ಥಾನಮುತ್ತಮಂ ॥ ೧೦೧॥

ಅ ॥ ಅನಂತರದಲ್ಲಿ ಯಾರು ನಿನ್ನಪಾದಕಮಲದ ಮಕರಂದ ರಸವನ್ನು ಮುಖ್ಯವಾಗಿ ಇಚ್ಛಿಸುತ್ತಾ ಯಾರು ನಿನ್ನಿಂದ ಕೂಡಿಕೊಂಡು ಬಂದಿರುತ್ತಾರೋ ಅವರಿಗೆ ಉತ್ತಮವಾದ ಸ್ಥಾನವನ್ನು ಆಜ್ಞಾಪಿಸು ॥ ೧೦೧ ॥

ಮೂ ॥ ಅಹಂ ಭವಃ ಸುರೇಶಾದ್ಯಾಃ ಕಿಂಕರಾಃ ಸ್ಮ ತವೇಶ್ವರ ॥
ಯಚ್ಚ ಕಾರ್ಯಮಿಹಾಸ್ಮಾಭಿಸ್ತದಪ್ಯಾಜ್ಞಾಪಯಾಶು ನಃ ॥ ೧೦೨ ॥

ಅ ॥ ಸರ್ವೇಶ್ವರನಾದ ಶ್ರೀ ಹರಿಯೇ! ನಾನೂ, ರುದ್ರನೂ, ದೇವೇಂದ್ರನೇ ಮೊದಲಾದವರೂ ನಿನ್ನ ಭೃತ್ಯರು ಆಗಿರುತ್ತೇವೆ. ಈ ಸಮಯದಲ್ಲಿ ನಮ್ಮಿಂದ ಯಾವುದು ಕಾರ್ಯವಿದೆಯೋ, ಅದನ್ನೂ ಕೂಡ ನಮಗೆ ಆಜ್ಞಾಪಿಸು ॥ ೧೦೨ ॥

ಮೂ ॥ ಇತ್ಯುದೀರಿತಮಾಕರ್ಣ್ಯ ಶತಾನಂದೇನ ರಾಘವಃ ॥
ಜಗಾದ ಭಾವಗಂಭೀರಂ (ರ) ಸುಸ್ಮಿತಾಧರಪಲ್ಲವಃ ॥ ೧೦೩ ॥

ಅ ॥ ಸಮೀಚೀನವಾದ ಮಂದಹಾಸದಿಂದ ಯುಕ್ತವಾದ ಚಿಗುರು ಎಲೆಯಂತೆ ಇರುವ ಅಧರೋಷ್ಠವುಳ್ಳ ಶ್ರೀ ರಾಮನು ಬ್ರಹ್ಮನಿಂದ ಪೂರ್ವೋಕ್ತಪ್ರಕಾರವಾಗಿ ಹೇಳಲ್ಪಟ್ಟ ಮಾತನ್ನು ಕೇಳಿ ಅಭಿಪ್ರಾಯಗಳಿಂದ ಗಹನವಾದ ವಾಕ್ಯವನ್ನು ಹೇಳಿದನು ॥ ೧೦೩ ॥

ಮೂ ॥ ಜಗದ್ಗುರುತ್ವಮಾದಿಷ್ಟಂ ಮಯಾ ತೇ ಕಮಲೋದ್ಭವ ॥
ಗುರ್ವಾದೇಶಾನುಸಾರೇಣ ಮಯಾದಿಷ್ಟಾ ಚ ಸದ್ಗತಿಃ ॥ ೧೦೪ ॥
ಅತಸ್ತ್ವಯಾ ಪ್ರದೇಯಾ ಹಿ ಲೋಕಾ ಏಷಾಂ ಮದಾಜ್ಞಯಾ ॥
ಹೃದಿ ಸ್ಥಿತಂ ಚ ಜಾನಾಸಿ ತ್ವಮೇವೈಕಃ ಸದಾ ಮಮ ॥ ೧೦೫ ॥

ಅ ॥ ಎಲೋ ಬ್ರಹ್ಮನೇ! ನಿನಗೆ ನನ್ನಿಂದ ಜಗದ್ಗುರುತ್ವವು ಆಜ್ಞಾಪಿಸಿ ಕೊಳ್ಳಲ್ಪಟ್ಟಿದೆ. ಆದಕಾರಣ ಗುರುಪ್ರಸಾದಾನುಸಾರವಾಗಿ ಲೋಕದಲ್ಲಿ ನನ್ನಿಂದ ಸದ್ಗತಿಯು ಆಜ್ಞಾಪಿಸಿಕೊಳ್ಳಲ್ಪಟ್ಟಿದೆ. ಆದಕಾರಣ ನನ್ನ ಆಜ್ಞೆಯಿಂದಲೇ ನನ್ನ ಒಟ್ಟಿಗೆ ಬಂದವರಿಗೆ ನಿನ್ನಿಂದ ಸದ್ಗತಿಯು ಕೊಡಲರ್ಹವಾದುದು. ಯಾವಾಗಲೂ ನನ್ನ ಹೃದಯದಲ್ಲಿರತಕ್ಕದನ್ನು ನೀನು ಒಬ್ಬನೇ ತಿಳಿದಿರುತ್ತಿ ॥ ೧೦೪ ॥ ೧೦೫ ॥

ಮೂ ॥ ಇತೀರಿತೋ ಹರೇರ್ಭಾವವಿಜ್ಞಾನೀ ಕಂಜಸ ಭವಃ ॥
ಪಿಪೀಲಿಕಾತೃಣಾಂತಾನಾಂ ದದೌ ಲೋಕಾನನುತ್ತಮಾನ್ ॥ ೧೦೬ ॥
ವೈಷ್ಣವಾನ್ಸಂತತಶ್ಚಾಚ್ಚ ನಾಮ್ನಾ ಸಾಂತಾನಿಕಾನ್ವಿಭುಃ ॥
ತೇ ಜರಾಮೃತಿಹೀನಾಶ್ಚ ಸರ್ವದುಃಖವಿವರ್ಜಿತಾಃ ॥
ಸಂಸಾರಮುಕ್ತಾ ನ್ಯವಸಂಸ್ತತ್ರ ನಿತ್ಯಸುಖಾಧಿಕಾಃ ॥ ೧೦೭ ॥

ಅ ॥ ಈ ಪ್ರಕಾರ (ಶ್ರೀ ಹರಿಯಿಂದ) ಹೇಳಿಸಿಕೊಳ್ಳಲ್ಪಟ್ಟ, ಶ್ರೀ ಹರಿಯ ಅಭಿಪ್ರಾಯವನ್ನು ತಿಳಿದಿರತಕ್ಕ ಸರ್ವಸಮರ್ಥನಾದ ಬ್ರಹ್ಮನು (ಚಲಪ್ರಾಣಿಗಳಲ್ಲಿ) ಪಿಪೀಲಿಕಾಪರ್ಯಂತಗಳಾದ ಪ್ರಾಣಿಗಳಿಗೂ, (ಸ್ಥಿರಪ್ರಾಣಿಗಳಲ್ಲಿ) ತೃಣಪರ್ಯಂತಗಳಾದ ಪ್ರಾಣಿಗಳಿಗೂ ನಿತ್ಯತ್ವವಿದ್ದಪ್ರಯುಕ್ತ ಹೆಸರಿನಿಂದ ಸಾಂತಾನಿಕ ನಾಮಕಗಳಾದ, ವಿಷ್ಣುಸಂಬಂಧಿಗಳಾದ, ಅತ್ಯುತ್ತಮಗಳಾದ ಲೋಕಗಳನ್ನು ಕೊಟ್ಟನು. ಕೂಡಿಕೊಂಡು ಒಟ್ಟಿಗೆ ಬಂದ ಜೀವರು ಸಂಸಾರದಿಂದ ಮುಕ್ತರಾಗಿ (ಅಂದರೆ ಉತ್ಪತ್ತಿ ರಹಿತರಾಗಿ) ಜರಾಮರಣ ರಹಿತರೂ, ಸರ್ವದುಃಖದಿಂದ ವಿರಹಿತರೂ, ನಿತ್ಯಸುಖದಿಂದ ಆವಿರ್ಭೂತ ಸ್ವರೂಪಾನಂದದಿಂದ ಶ್ರೇಷ್ಠರಾಗಿ ಆ ಲೋಕಗಳಲ್ಲಿ ಆವಾಸಮಾಡಿದರು. ॥ ೧೦೬ ॥ ೧೦೭ ॥

ಮೂ ॥ ಯೇ ತು ದೇವಾ ಇಹೋದ್ಭೂತಾ ನೃವಾನರಶರೀರಿಣಃ ॥
ತೇ ಸರ್ವೇ ಸ್ವಾಂಶಿತಾಮಾಪುಸ್ತನ್ವೈಂದವಿವಿದಾವೃತೇ ॥ ೧೦೮ ॥

ಅ ॥ ಯಾವದೇವತೆಗಳು ಈ ಭೂಮಿಯಲ್ಲಿ ಭರತ, ಲಕ್ಷ್ಮಣ, ಶತ್ರುಘ್ನರೂಪರಾದ ಮನುಷ್ಯರೂ, ಕಪಿಗಳೂ ಇವರ ಶರೀರವುಳ್ಳವರಾಗಿ ಹುಟ್ಟಿರುತ್ತಾರೋ, ಅವರೆಲ್ಲರೂಕೂಡ ಆ ಪ್ರಸಿದ್ಧರಾದ (ಅಂದರೆ ಅಶ್ವಿನೀ ದೇವತೆಗಳ ಅಂಶಭೂತರಾದ) ಮೈಂದವಿವಿಧರನ್ನು ಹೊರತು ಇತರರೆಲ್ಲರೂ ತಮ್ಮತಮ್ಮ ಮೂಲರೂಪವನ್ನು ಹೊಂದಿದರು ॥ ೧೦೮ ॥

ಅವರಿಬ್ಬರೂ ಏಕೆ ಹೋಗಲಿಲ್ಲವೆಂದರೆ—

ಮೂ ॥ ಅಸುರಾವೇಶತಸ್ತೌ ತು ನ ರಾಮಮನುಜಗ್ಮತುಃ ॥
ಪೀತಾಮೃತೌ ಪುರಾ ಯಸ್ಮಾನ್ನಮೃತುರ್ನ ಚ ತೌ ತದಾ ॥ ೧೦೯ ॥

ಅ ॥ ಅವರಾದರೂ ಅಸುರರ ಆವೇಶದಿಂದಾಗಿಯಿಂದ ರಾಮನನ್ನು ಅನುಸರಿಸಿ ಹೋಗಲಿಲ್ಲ. (ಅವರಿಬ್ಬರಿಗೆ ಮರಣವಿಲ್ಲದಿರಲಿಕ್ಕೂ ಕಾರಣವನ್ನು ಹೇಳುತ್ತಾರೆ.) ಸಮುದ್ರಮಥನ ಕಾಲದಲ್ಲಿ ಯಾವಕಾರಣದಿಂದಾಗಿಯಿಂದ ಆ ಮೈಂದ-ವಿವಿಧರು ಕುಡಿಯಲ್ಪಟ್ಟ ಅಮೃತವುಳ್ಳವರೋ, ಆ ಕಾರಣದಿಂದಾಗಿಯಿಂದ ಆ ಕಾಲದಲ್ಲಿ ಅವರಿಬ್ಬರೂ ಮರಣವನ್ನು ಹೊಂದಲಿಲ್ಲ ॥ ೧೦೯ ॥

ಆ ಮೈಂದ ವಿವಿಧರು ಮರಣವನ್ನು ಹೊಂದದೆ ಇರಲಿಕ್ಕೆ ಕಾರಣಾಂತರವನ್ನೂ ಹೇಳುತ್ತಾರೆ

ಮೂ ॥ ತಯೋಶ್ಚ ತಪಸಾ ತುಷ್ಟಶ್ಚಕ್ರೇ ತಾವಜರಾಮರೌ ॥
ಪುರಾ ಸ್ವಯಂಭೂಸ್ತೇನೇಭೌ ದರ್ಪಾದಮೃತಮಂಥನೇ ॥ ೧೧೦ ॥
ಪ್ರಸಹ್ಯಾಪಿಬತಾಂ ದೇವೈರ್ದೇವಾಂಶತ್ವಾದ ಪೇಕ್ಷಿತೌ ॥
ಪೀತಾಮೃತೇಷು ದೇವೇಷು ಯುದ್ಧ್ಯಮಾನೇಷು ದಾನವೈಃ ॥
ತೈರ್ದತ್ತಮಾತ್ಮಹಸ್ತೇ ತು ರಕ್ಷಾಯೈ ಪೀತಮಾಶು ತತ್ ॥ ೧೧೧ ॥
ತಸ್ಮಾದ್ದೋಷಾದಾಪತುಸ್ತಾವಾಸುರಂ ಭಾವಮೂರ್ಜಿತಂ ॥ ೧೧೨ ॥

ಅ ॥ ಅಮೃತಮಥನದಿಂದಾಗಿಯಿಂದ ಮೊದಲೇ ಬ್ರಹ್ಮನು ಆ ಮೈಂದ-ವಿವಿಧರ ತಪಸ್ಸಿನಿಂದ ಸಂತುಷ್ಟನಾದವನಾಗಿ ಆ ಮೈಂದ-ವಿವಿದರನ್ನು ಜರಾಮರಣರಹಿತರನ್ನಾಗಿ ಮಾಡಿದನು. ಆ ವರ ಪ್ರಾಪ್ತಿನಿಮಿತ್ತದಿಂದ ಮೈಂದ ವಿವಿದರಿಬ್ಬರೂ ಮದದಿಂದಾಗಿಯಿಂದ ಅಮೃತಕ್ಕಾಗಿ ಸಮುದ್ರಮಥನ ಕಾಲದಲ್ಲಿ ಬಲಾತ್ಕಾರದಿಂದ (ಅಮೃತವನ್ನು) ಕುಡಿದರು. ಇಂದ್ರಾದಿದೇವತೆಗಳಿಂದ ಅಶ್ವಿನೀದೇವತೆಗಳ ಅವತಾರವಾದುದರಿಂದ ಉಪೇಕ್ಷಿತರಾದರು. (ಅಂದರೆ ವಿರೋಧಿಸಿಕೊಳ್ಳಲ್ಪಡಲಿಲ್ಲ) (ಅವರಿಬ್ಬರಿಗೆ ಅಮೃತಕಲಶದ ಪ್ರಾಪ್ತಿಯು ಹೇಗಾಯಿತೆಂದರೆ—) ಕುಡಿಯಲ್ಪಟ್ಟ ಅಮೃತವುಳ್ಳ ದೇವತೆಗಳು ದಾನವರಿಂದ ಕೂಡಿಕೊಂಡು ಯುದ್ಧ ಮಾಡಲ್ಪಡುತ್ತಿರಲು ಆ ದೇವತೆಗಳಿಂದ (ಅಮೃತವನ್ನು) ರಕ್ಷಿಸುವುದಕ್ಕಾಗಿ ತಮ್ಮ (ಮೈಂದ-ವಿವಿಧರ) ಕೈಯಲ್ಲಿ ಕೊಡಲ್ಪಟ್ಟ ಆ ಅಮೃತವು ಶೀಘ್ರದಲ್ಲಿ (ದೋಷವನ್ನು ವಿಚಾರ ಮಾಡದೇನೇ ಅವರಿಬ್ಬರಿಂದ) ಕುಡಿಯಲ್ಪಟ್ಟಿತು. ಬಲಾತ್ಕಾರದಿಂದ ಅಮೃತಪಾನದಿಂದುಂಟಾದ ದೋಷದಿಂದಾಗಿಯಿಂದ ಆ ಮೈಂದ-ವಿವಿದರು ಕ್ರೂರವಾದ ಅಸುರರ ಸಂಬಂಧಿಯಾದ ಭಾವವನ್ನು ಹೊಂದಿದರು.

ವಿಶೇಷಾಂಶ— (1) ಅಮೃತಮಥನದಿಂದಾಗಿಯಿಂದ ಮೊದಲೇ ಆ ಮೈಂದ-ವಿವಿದರಿಗೆ ಉತ್ಪತ್ತಿಯು. ಈಗ ಅಲ್ಲ. ಮತ್ತೆ ಆದಿಸೃಷ್ಟಿಯಲ್ಲಿಯೇ, ಆಗಲೇ ಬ್ರಹ್ಮನ ವರದಿಂದಾಗಿಯಿಂದ, ಅಮೃತಮಥನಕಾಲದಲ್ಲಿಯೂ ಕೂಡ ಆ ಮೈಂದ-ವಿವಿದರು ಕಪಿರೂಪದಿಂದಲೇ ಜೀವಿಸುತ್ತಾ ಇರುತ್ತಿದ್ದರು ॥ ೧೧೦ ॥ ೧೧೧ ॥ ೧೧೨ ॥

ಮೂ ॥ ಅಂಗದಃ ಕಾಲತಸ್ತ್ಯಕ್ತ್ವಾ ದೇಹಮಾಪ ನಿಜಂ ತನುಂ ॥
ರಾಮಾಜ್ಞಯೈವ ಕುರ್ವಾಣೋ ರಾಜ್ಯಂ ಕುಶಸಮನ್ವಿತಃ ॥ ೧೧೩ ॥

ಅ || ಶ್ರೀ ರಾಮನ ಅಪ್ಪಣೆಯಿಂದಲೇ ಕುಶನಿಂದ ಕೂಡಿಕೊಂಡಿರತಕ್ಕ ಕಪಿಗಳ ರಾಜ್ಯವನ್ನು ರಕ್ಷಿಸುತ್ತಿದ್ದ ಅಂಗದನು ಕಾಲಾಂತರದಲ್ಲಿ ಶರೀರವನ್ನು ಬಿಟ್ಟು ತನ್ನದಾದ ಚಂದ್ರ ಸ್ವರೂಪವನ್ನು ಹೊಂದಿದನು || ೧೧೩ ||

ಮೂ || ವಿಭೀಷಣಶ್ಚ ಧರ್ಮಾತ್ಮಾ ರಾಘವಾಜ್ಞಾಪುರಸ್ಕೃತಃ ||
ಸೇನಾಪತಿರ್ಧನೇಶಸ್ಯ ಕಲ್ಪಮಾವೀತ್ಸ ರಾಕ್ಷಸಾನ್ || ೧೧೪ ||

ಅ || ಆ ಧರ್ಮಿಷ್ಠನಾದ ವಿಭೀಷಣನಾದರೂ ಶ್ರೀ ರಾಮನ ಆಜ್ಞೆಯಿಂದ ಪುರಸ್ಕೃತ ನಾಗಿ ರಾಮನ ಆಜ್ಞೆಯಿಂದ ಪುರಸ್ಕೃತನಾದ ಕುಬೇರನಿಗೆ ಸೇನಾಪತಿಯಾಗಿ ಕಲ್ಪಪರ್ಯಂತ ವಾಗಿ ರಾಕ್ಷಸರನ್ನು ರಕ್ಷಿಸುತ್ತಿದ್ದನು || ೧೧೪ ||

ಮೂ || ರಾಮಾಜ್ಞಯಾ ಜಾಂಬವಾಂಶ್ಚ ನ್ಯವಸತ್ಪೃಥಿವೀತಲೇ ||
ಉತ್ಪತ್ತ್ಯರ್ಥಂ ಜಾಂಬವತ್ಯಾಸ್ತದರ್ಥಂ ಸುತಪಶ್ಚರನ್ || ೧೧೫ ||

ಅ || ಜಾಂಬವತಿಯ ಉತ್ಪತ್ತಿಗಾಗಿ ಕಠಿಣವಾದ ತಪಸ್ಸನ್ನು ಮಾಡುತ್ತಾ ಜಾಂಬ ವಂತನ ಶ್ರೀ ರಾಮನ ಅಪ್ಪಣೆಯಿಂದಲೇ ಭೂಪ್ರದೇಶದಲ್ಲಿ ಆವಾಸಮಾಡಿಕೊಂಡನು || ೧೧೫ ||

ಮೂ || ಅಥೋ ರಘೂಣಾಂ ಪ್ರವರಃ ಸುರಾರ್ಚಿತಃ
ಸ್ವಯೈಕತನ್ವಾ ನ್ಯವಸತ್ಸುರಾಲಯೇ ||
ದ್ವಿತೀಯಯಾ ಬ್ರಹ್ಮಸದಸ್ಯಧೀಶ್ವರ-
ಸ್ತೇನಾರ್ಚಿತೋಽಥಾಪರಯಾ ನಿಜಾಲಯೇ ||೧೧೬ ||
ತೃತೀಯರೂಪೇಣ ನಿಜಂ ಪದಂ ಪ್ರಭುಂ
ವಜ್ರಂತಮುಚ್ಚೈರನುಗನ್ಯ ದೇವತಾಃ ||
ಅಗಮ್ಯಮರ್ಯಾದಮುಪೇತ್ಯ ಚ ಕ್ರಮಾ-
ದ್ವಿಲೋಕಯಂತೋಽತಿವಿದೂರತೋಽಸ್ತುವನ್ || ೧೧೭ ||

ಅ || ಆಕಾಶಾರೋಹಣವಾದ ಮೇಲೆ ರಘುಗಳಲ್ಲಿ ಶ್ರೇಷ್ಠನಾದ ಶ್ರೀ ರಾಮನು ಸ್ವಕೀಯವಾದ ಒಂದು ಶರೀರದಿಂದ ದೇವತೆಗಳ ಮಂದಿರವಾದ ಸ್ವರ್ಗಲೋಕದಲ್ಲಿ ದೇವತೆ ಗಳಿಂದ ಪೂಜಿಸಿಕೊಳ್ಳಲ್ಪಟ್ಟವನಾಗಿ ಆವಾಸ ಮಾಡಿದನು. ಎರಡನೇ ರೂಪದಿಂದ ಸರ್ವೇಶ್ವರ ನಾದ ಶ್ರೀ ಹರಿಯು ಬ್ರಹ್ಮದೇವರ ಸಭೆಯಲ್ಲಿ ಆ ಬ್ರಹ್ಮನಿಂದ ಪೂಜಿಸಿಕೊಳ್ಳಲ್ಪಟ್ಟವನಾಗಿ ಆವಾಸ ಮಾಡಿದನು. ಆ ಮೇಲೆ ಮೂರನೇ ರೂಪದಿಂದ ತನ್ನ ಮಂದಿರದಲ್ಲಿ ಆವಾಸ ಮಾಡಿದನು. ತನ್ನದಾದ ಸ್ಥಾನವನ್ನು ಹೊಂದತಕ್ಕ, ಸರ್ವಸಮರ್ಥನಾದ ಶ್ರೀ ಹರಿಯನ್ನು ದೇವತೆಗಳು ಅನುಸರಿಸಿ ಬಂದು ಯೋಗ್ಯತಾಕ್ರಮದಿಂದ, ಶಾಸ್ತ್ರೋಕ್ತಕ್ರಮದಿಂದ ಅಮುಕ್ತರಿಂದ ಹೊಂದಲಶಕ್ಯವಾದ ಅಂತಃಪಟ್ಟಣದ ಮರ್ಯಾದೆಯುಳ್ಳ ಶ್ರೀ ರಾಮನನ್ನು ಹೊಂದಿ (ಅಂದರೆ. ಶಾಸ್ತ್ರದಲ್ಲಿ ಎಷ್ಟು ದೇಶದಲ್ಲಿ ಗಮನವು ವಿಹಿತವಾಗಿದೆಯೋ ಅಷ್ಟು ದೇಶವನ್ನು ಹೊಂದಿ ಅಂದರೆ ಏಳು ದ್ವಾರಪರ್ಯಂತವಾಗಿ ಹೋಗಿ) ಅತಿದೂರದೆಶೆಯಿಂದಲೇ ನೋಡುವವರಾಗಿ ಘಟ್ಟಿಯಾಗಿ ಭಕ್ತಿಯ ಉತ್ಕರ್ಷದಿಂದ ಸ್ತೋತ್ರಮಾಡಿದರು || ೧೧೬ || ೧೧೭ ||

ಮೂ ॥ ಬಹ್ಮಾ ಮರುನ್ಮಾರುತಸೂನುರೀಶಃ
ಶೇಷೋ ಗರುತ್ಮಾನ್ಹರಿಜಃ ಶಕ್ರಕಾದ್ಯಾಃ ॥
ಕ್ರಮಾದನುವ್ರಜ್ಯ ತು ರಾಘವಸ್ಯ
ಶಿರಸ್ಯಥಾಜ್ಞಾಂ ಪ್ರಣಿಧಾಯ ನಿರ್ಯಯುಃ ॥ ೧೧೮ ॥

ಅ ॥ ಬ್ರಹ್ಮದೇವರು, ವಾಯುದೇವರು, ಹನುಮಂತನು, ರುದ್ರನು, ಶೇಷನು, ಗರುಡನು, ವಿಷ್ಣುಪುತ್ರನಾದ ಕಾಮನು, ದೇವೇಂದ್ರನೇ ಮೊದಲಾದವರು ತಮ್ಮ ತಮ್ಮ ಯೋಗ್ಯತಾಕ್ರಮ ದಿಂದ ಶ್ರೀ ರಾಮನನ್ನು ಅನುಸರಿಸಿ ಶ್ರೀ ರಾಮನ ಆಜ್ಞೆಯನ್ನು ಶಿರಸ್ಸಿನಲ್ಲಿಟ್ಟುಕೊಂಡು ಹೊರಟುಹೋದರು ॥ ೧೧೮ ॥

ಮೂ ॥ ಸ್ವಂ ಸ್ವಂ ಚ ಸರ್ವೇ ಸದನಂ ಸುರಾ ಯಯುಃ
ಪುರಂದರಾದ್ಯಾಶ್ಚ ವಿರಿಂಚಪೂರ್ವಕಾಃ ॥
ಮರುತ್ಸುತೋಽಥೋ ಬದರೀಮವಾಪ್ಯ
ನಾರಾಯಣಸ್ಯೈವ ಪದಂ ಸಿಷೇವೇ ॥ ೧೧೯ ॥

ಅ ॥ ಬ್ರಹ್ಮನೇ ಮೊದಲಾಗಿವುಳ್ಳ ದೇವತೆಗಳೂ; ಇಂದ್ರನೇ ಮೊದಲಾಗಿವುಳ್ಳ ಎಲಾ ದೇವತೆಗಳೂ ತಮ್ಮತಮ್ಮ ಆವಾಸಸ್ಥಾನವನ್ನು ಕುರಿತು ಹೋದರು ಹೋದಮೇಲೆ ವಾಯು ಪುತ್ರನಾದ ಹನುಮಂತನು ಬದರಿಕಾಶ್ರಮವನ್ನು ಹೊಂದಿ (ಅಂದರೆ ೧ ಶತಶೃಂಗಪರ್ವತದ ಮೇಲೆ ಒಂದು ಬದರಿಕಾಶ್ರಮವು ೨ ಹಿಮವತ್ಪರ್ವತದ ತಲೆಯಲ್ಲಿ ಮತ್ತೊಂದು ಬದರಿಕಾ ಶ್ರಮವು. ೩ ಮೇರುಪರ್ವತದ ಸಮೀಪದಲ್ಲಿ ಮತ್ತೊಂದು ಬದರಿಕಾಶ್ರಮವು ಹೀಗೆ ಮೂರು ಬದರಿಕಾಶ್ರಮಗಳು ಈ ಮೂರರಲ್ಲಿಯೂ ಶ್ರೀ ನಾರಾಯಣನು ಇದ್ದಾನೆ. ಅದರ ಮಧ್ಯದಲ್ಲಿ ಮೇರುಪರ್ವತದ ಸಮೀಪದಲ್ಲಿರತಕ್ಕ ಬದರಿಕಾಶ್ರಮವನ್ನೇ ಹೊಂದಿ) ಶ್ರೀ ನಾರಾಯಣರೂಪಿ ಯಾದ ಶ್ರೀ ವೇದವ್ಯಾಸದೇವರ ಪಾದಕಮಲವನ್ನೇ ಸೇವಿಸುತ್ತಿದ್ದನು ॥ ೧೧೯ ॥

ಮೂ ॥ ಸಮಸ್ತಶಾಸ್ತ್ರೋದ್ಧೃತಂ ಹರೇರ್ವಚೋ
ಮುದಾ ತದಾ ಶ್ರೋತ್ರಪುಟೇನ ಸಂಭರನ್ ॥
ವದಂಶ್ಚ ತತ್ತ್ವಂ ವಿಬುಧರ್ಷಭಾಣಾಂ
ಸದಾ ಮುನೀನಾಂ ಚ ಸುಖಂ ಹ್ಯುವಾಸ ॥ ೧೨೦ ॥

ಅ ॥ ನಿರ್ಣಯರೂಪಗಳಾದ ಸರ್ವಶಾಸ್ತ್ರಾರ್ಥಗಳಿಂದ ಪೂರ್ಣವಾದ ಶ್ರೀ ಹರಿಯ ವಚನವನ್ನು ಆಗ ಸಂತೋಷದಿಂದ ಕಿವಿಯ ರಂಧ್ರದಿಂದ ಕೇಳುತ್ತಾ ದೇವಶ್ರೇಷ್ಠರಿಗೂ ಋಷಿ ಗಳಿಗೂ ಕೂಡ ಯಾವಾಗಲೂ ಹರಿಯ ಸ್ವರೂಪವನ್ನು ಹೇಳುತ್ತಾ ಶ್ರೀ ಹನುಮಂತನು ಹೇಗೆ ಸುಖವಾದಿತೋ ಹಾಗೇ ಆವಾಸಮಾಡಿದನು ॥ ೧೨೦ ॥

ಮೂ ॥ ರಾಮಾಜ್ಞಯಾ ಕಿಂಪುರುಷೇಷು ರಾಜ್ಯಂ
ಚಕಾರ ರೂಪೇಣ ತಥಾಪರೇಣ ॥
ರೂಪೈಸ್ತಥಾನ್ಯೈಶ್ಚ ಸಮಸ್ತಸದ್ಮ-
ಸ್ವುವಾಸ ವಿಷ್ಣೋಃ ಸತತಂ ಯಥೇಷ್ಟಂ ॥ ೧೨೧ ॥

ಅ || ಹನುಮಂತನು ಹಾಗೆಯೇ ಎರಡನೇ ರೂಪದಿಂದ ಕಿಂಪುರುಷಖಂಡದಲ್ಲಿರತಕ್ಕ ರಾಷ್ಟ್ರಗಳಲ್ಲಿ ಶ್ರೀ ರಾಮನ ಆಜ್ಞೆಯಿಂದಲೇ ರಾಜ್ಯವನ್ನು ಮಾಡಿದನು. ಹಾಗೆಯೇ ಇತರ ಹನುಮದ್ರೂಪಗಳಿಂದ ವಿಷ್ಣುವಿನ ಎಲ್ಲಾ ಮಂದಿರಗಳಲ್ಲಿಯೂ (ಶ್ವೇತದ್ವೀಪ-ಅನಂತಾಸನ-ವೈಕುಂಠಗಳಲ್ಲಿ) ಯಾವಾಗಲೂ ಸ್ವೇಚ್ಛಾನುಸಾರವಾಗಿ ಆವಾಸಮಾಡಿದನು.

ವಿಶೇಷಾಂಶ— (1) ರಾಮಾಯಣಯುದ್ಧದಲ್ಲಿ ಒಂದೇ ಮೂರ್ತಿಯಿಂದ ಪೂರ್ಣವಾಗಿರುವ ಪ್ರಯುಕ್ತ ಎಲ್ಲಾ ವೈಷ್ಣವಕ್ಷೇತ್ರಗಳಲ್ಲಿಯೂ, ದೇವಾದಿಗಳಿಗೆ ದೃಶ್ಯನಾಗಿಯೂ ಇತರರಿಗೆ ಅದೃಶ್ಯನಾಗಿಯೂ, ಶ್ರೀ ಹರಿಯ ಸೇವೆಗೋಸ್ಕರವೂ, ಸಜ್ಜನರ ರಕ್ಷಣೆಗೋಸ್ಕರವೂ ಹನುಮಂತನು ಮೂರುಕೋಟಿ (३,0000000) ರೂಪಗಳನ್ನು ಧರಿಸಿರುತ್ತಾನೆ || ೧೨೧ ||

ಮೂ || ಇತ್ಥಂ ಸ ಗಾಯಞ್ಛತಕೋಟಿವಿಸ್ತರಂ
ರಾಮಾಯಣಂ ಭಾರತಪಂಚರಾತ್ರಂ ||
ವೇದಾಂಶ್ಚ ಸರ್ವಾನ್ಸಹಿತಬ್ರಹ್ಮಸೂತ್ರಾನ್
ವ್ಯಾಚಕ್ಷಾಣೋ ನಿತ್ಯಸುಖೋದ್ಭರೋಽಭೂತ್ || ೧೨೨

ಅ || ಪೂರ್ವೋಕ್ತಪ್ರಕಾರವಾಗಿ ಆ ಹನುಮಂತನು ಶತಕೋಟಿ (೧೦೦,0000000) ಸಂಖ್ಯಾಕ ಪದ್ಯಗಳಿಂದ ವಿಸ್ತಾರವುಳ್ಳ, ವೇದವ್ಯಾಸರು ಮಾಡಿದ ಮೂಲರಾಮಾಯಣವನ್ನೂ, ಭಾರತವನ್ನೂ, ಪಂಚರಾತ್ರಾಗಮವನ್ನೂ, ಬ್ರಹ್ಮಸೂತ್ರಗಳಿಂದ ಸಹಿತಗಳಾದ ಎಲ್ಲಾ ವೇದಗಳನ್ನೂ ವ್ಯಾಖ್ಯಾನಮಾಡುವವನಾಗಿ ಅವಿಚ್ಛಿನ್ನವಾದ ಸುಖದಿಂದ ಪೂರ್ಣನಾದವನು ಆದನು. || ೧೨೨ ||

ಮೂ || ರಾಮೋಽಪಿ ಸಾರ್ಧಂ ಪವನಾತ್ಮಜೇನ
ಸ ಸೀತಯಾ ಲಕ್ಷ್ಮಣಪೂರ್ವಕೈಶ್ಚ ||
ತಥಾ ಗರುತ್ಮತ್ಪ್ರಮುಖೈಶ್ಚ ಪಾರ್ಷದೈಃ
ಸಂ ಸೇವ್ಯಮಾನೋ ನ್ಯವಸತ್ಪಯೋಬ್ಧೌ || ೧೨೩ ||

ಅ || ಆ ಶ್ರೀ ರಾಮನೂ ಕೂಡ ವಾಯುಪುತ್ರನಾದ ಹನುಮಂತನಿಂದಲೂ, ಸೀತಾದೇವಿಯಿಂದಲೂ ಕೂಡಿಕೊಂಡು ಲಕ್ಷ್ಮಣಮೂಲರೂಪಿಯಾದ ಶೇಷನೇ ಮೊದಲಾಗಿವುಳ್ಳ ಹಾಗೆಯೇ ಗರುಡನೇ ಮೊದಲಾಗಿವುಳ್ಳ ಪರಿಚಾರಕರಿಂದ ಚೆನ್ನಾಗಿ ಸೇವಿಸಿಕೊಳ್ಳಲ್ಪಟ್ಟವನಾಗಿ ಕ್ಷೀರಸಮುದ್ರದಲ್ಲಿ (ಅಂದರೆ-ಅಮುಕ್ತರಿಂದ ಹೊಂದಲ್ಪಡತಕ್ಕ ಸ್ಥಾನದಲ್ಲಿರತಕ್ಕ ಮಂಟಪದಲ್ಲಿ) ಆವಾಸಮಾಡಿದನು.

ವಿಶೇಷಾಂಶ— (1) ಶೇಷಮಾರ್ಗವನ್ನು ಅನುಸರಿಸುವವರನ್ನೂ, ಗರುಡಮಾರ್ಗವನ್ನು ಅನುಸರಿಸುವವರನ್ನೂ, ಪ್ರತ್ಯೇಕವಾಗಿ ತೆಗೆದುಕೊಳ್ಳುವುದಕ್ಕಾಗಿ 'ಲಕ್ಷ್ಮಣಪೂರ್ವಕೈಃ ಗುರುತ್ಮತ್ಪ್ರಮುಖೈಶ್ಚ ಪಾರ್ಷದೈಃ' ಎಂದು ಹೇಳಿರುವರು. (2)ಲಕ್ಷ್ಮಣನೂ ಮೂಲರೂಪದಲ್ಲಿ ಸೇರಿರುವುದರಿಂದ ಸುಗ್ರೀವಾದಿ ದೇವತೆಗಳೂ ತಮ್ಮ ತಮ್ಮ ಮೂಲರೂಪವನ್ನೇ ಹೊಂದಿರುವರು || ೧೨೩ ||

ಮೂ ॥ ಕದಾಚಿದೀಶಃ ಸಕಲಾವತಾರಾ-
ನೇಕಂ ವಿಧಾಯಾಹಿಪತೌ ಚ ಶೇತೇ ॥
ಪೃಥಕ್ಚ ಸಂವ್ಯೂಹ್ಯ ಕದಾಚಿದಿಚ್ಛಯಾ
ರೇಮೇ ರಮೇಶೋಽನಿಸತದ್ಗುಣಾರ್ಣವಃ ॥ ೧೨೪ ॥

ಅ ॥ ಸರ್ವಸಮರ್ಥನಾದ ಶ್ರೀ ಹರಿಯು ಒಂದಾನೊಂದು ಸಮಯದಲ್ಲಿ ಎಲ್ಲಾ ಅವತಾರಗಳನ್ನು ಒಂದನ್ನಾಗಿ ಮಾಡಿ ಶೇಷನಲ್ಲಿ ಮಲಗಿಕೊಳ್ಳುತ್ತಾನೆ. ಕೆಲವು ಸಮಯದಲ್ಲಿ ಪೂರ್ಣ ಸದ್ಗುಣಗಳಿಂದ ಸಮುದ್ರದಂತಿರುವ ಲಕ್ಷ್ಮೀಪತಿಯಾದ ಶ್ರೀ ಹರಿಯು ವಾಸುದೇವಾದ್ಯನಂತಾನಂತರೂಪಗಳಿಂದ ಪ್ರತ್ಯೇಕವಾಗಿ ವ್ಯೂಹವನ್ನು ಮಾಡಿಕೊಂಡು ಇಚ್ಛೆಯಿಂದಲೇ ಕ್ರೀಡಿಸುತ್ತಿದ್ದನು ॥ ೧೨೪ ॥

ಆಚಾರ್ಯರು ತಾನು ಹೇಳಿದ ಗ್ರಂಥಕ್ಕೆ ಪ್ರಾಮಾಣಿಕತ್ವವನ್ನು ತೋರಿಸುತ್ತಾರೆ—

ಮೂ ॥ ಇತ್ಯಶೇಷಪುರಾಣೇಭ್ಯಃ ಪಂಚರಾತ್ರೇಭ್ಯ ಏವ ಚ ॥
ಭಾರತಾಚ್ಚೈವ ವೇದೇಭ್ಯೋ ಮಹಾರಾಮಾಯಣಾದಪಿ ॥ ೧೨೫ ॥
ಪರಸ್ಪರವಿರೋಧಸ್ಯ ಹಾನಾನ್ನಿರ್ಣೀಯ ತತ್ತ್ವತಃ ॥
ಯುಕ್ತ್ಯಾ ಬುದ್ಧಿಬಲಾಚ್ಚೈವ ವಿಷ್ಣೋರೇವ ಪ್ರಸಾದತಃ ॥ ೧೨೬ ॥
ಬಹುಕಲ್ಪಾನುಸಾರೇಣ ಮಯೇಯಂ ಸತ್ಕಥೋದಿತಾ ||
ನೈಕಗ್ರಂಥಾಶ್ರಯಾ ತಸ್ಮಾನ್ನಾಶಂಕ್ಯಾತ್ರ ವಿರುದ್ಧತಾ ॥ ೧೨೭ ॥

ಅ ॥ ಪುರಾಣಗಳಲ್ಲಿರತಕ್ಕ ಪರಸ್ಪರ ವಿರೋಧವನ್ನು ಪರಿಹರಿಸಿದರಿಂದ ಪೂರ್ವೋಕ್ತ ಪ್ರಕಾರ ಎಲ್ಲಾ ಪುರಾಣಗಳಿಂದಲೂ, ಪಂಚರಾತ್ರಾಗಮದಿಂದಲೂ, ಭಾರತದಿಂದಲೂ, ಋಗಾದಿ ವೇದಗಳಿಂದಲೂ, ಮಹತ್ತಾದ ಮೂಲರಾಮಾಯಣದಿಂದಲೂ, ಅನುಮಾನದಿಂದಲೂ, ತನ್ನ ಪ್ರಜ್ಞೆಯ ಬಲದಿಂದಲೂ. ಶ್ರೀ ವಿಷ್ಣುವಿನ ಪ್ರಸಾದದಿಂದಲೂ, ಯಥಾರ್ಥವಾಗಿ ಇದೇ ಅರ್ಥವು. ಬೇರೆ ಅರ್ಥವಲ್ಲವೆಂದು ನಿರ್ಣಯಮಾಡಿ ಬಹುಕಲ್ಪಗಳನ್ನೂ, ಮಹಾಕಲ್ಪಾದಿಗಳನ್ನೂ, ಅವಾಂತರಕಲ್ಪಗಳನ್ನೂ ಅನುಸರಿಸಿ ಈ ಪ್ರಕಾರವಾಗಿ ನನ್ನಿಂದ ಈ ಸತ್ಕಥೆಯು (ಅಂದರೆ—ವಿರೋಧಾದಿ ದೋಷಗಳಿಂದ ವಿರಹಿತವಾದ ಕಥೆಯು) ಹೇಳಲ್ಪಟ್ಟಿತು. ಯಾವ ಕಾರಣದಿಂದೆಯಿಂದ ಒಂದೇ ಗ್ರಂಥವನ್ನು ಆಶ್ರಯಿಸಿಕೊಂಡು ಕಥೆಯು ಹೇಳಲ್ಪಡಲಿಲ್ಲವೋ, ಆದಕಾರಣ ಈ ಕಥೆಯಲ್ಲಿ ವಿರೋಧವು ಶಂಕಿಸಲ್ಪಡಕೂಡದು ॥ ೧೨೫ ॥ ೧೨೬ ॥ ೧೨೭ ॥

ನಿರ್ಣಯ ಪ್ರಯೋಜನವನ್ನು ಹೇಳುತ್ತಾರೆ—

ಮೂ ॥ ಕ್ವಚಿನ್ಮೋಹಾಯಾಸುರಾಣಾಂ ವ್ಯತ್ಯಾಸಃ ಪ್ರತಿಲೋಮತಾ ||
ಉಕ್ತಾ ಗ್ರಂಥೇಷು ತಸ್ಮಾದ್ಧಿ ನಿರ್ಣಯೋಽಯಂ ಕೃತೋ ಮಯಾ ॥ ೧೨೮ ॥

ಅ ॥ ಭಾರತಾದಿ ಗ್ರಂಥಗಳಲ್ಲಿ ಕೆಲವು ಭಾಗದಲ್ಲಿ ಅಸುರರನ್ನು ಮೋಹಿಸುವುದಕ್ಕಾಗಿ ಕಾಲವ್ಯತ್ಯಾಸ–ಪುರುಷವ್ಯತ್ಯಾಸಾದಿಗಳಿಂದ ನಾನಾಪ್ರಕಾರವಾದ ವ್ಯತ್ಯಾಸವು (ಹೇಳಲ್ಪಟ್ಟಿದೆ.) ಯಾವ ಕಾರಣದಿಂದ ಹೇಳಲರ್ಹವಾದ ಅರ್ಥದಲ್ಲಿ ಅನ್ಯಾರ್ಥಕಥನರೂಪವಾದ ಪ್ರತಿಲೋಮತ್ವವು ಹೇಳಲ್ಪಟ್ಟದೋ, ಆದಕಾರಣ ಈ ಗ್ರಂಥೋಕ್ತವಾದ ನಿರ್ಣಯವು ನನ್ನಿಂದ ಹೇಳಲ್ಪಟ್ಟಿತು. (ಅಂದರೆ— ನಿರ್ಣಯವು ಬಹು ಗ್ರಂಥವನ್ನು ಆಶ್ರಯಿಸಿಕೊಂಡಿರುವುದರಿಂದ ಅಸುರರನ್ನು ಮೋಹಿಸುವುದಕ್ಕಾಗಿ ಒಂದು ಗ್ರಂಥದಲ್ಲಿ ಹೇಳಲ್ಪಟ್ಟು ವಿರೋಧವನ್ನು ಶಂಕಿಸಕೂಡದು) ॥೧೨೮॥

ಮೂ ॥ ಏವಂ ಚ ವಕ್ಷ್ಯಮಾಣೇಷು ನೈವಾಶಂಕ್ಯಾ ವಿರುದ್ಧತಾ ॥
ಸರ್ವಂಕಲ್ಪಸಮುಶ್ಚಾಯಂ ಪಾರಂಪರ್ಯಕ್ರಮಃ ಸದಾ ॥ ೧೨೯ ॥

ಅ॥ ಏವಂಚ ಹಿಂದೆ ಹೇಳಿದಪ್ರಕಾರ ಮುಂದೆ ಹೇಳುವ ವ್ಯಾಸಾದ್ಯವತಾರೋಕ್ತ ನಿರ್ಣಯಗಳಲ್ಲಿ ವಿರೋಧವು ಸರ್ವಥಾ ಆಶಂಕಿಸಲ್ಪಡಕೂಡದು. ಈ ಗ್ರಂಥಗಳಲ್ಲಿ ಹೇಳಲ್ಪಟ್ಟ ಸರ್ವಕಾಲಗಳಲ್ಲಿ ಸೃಷ್ಟ್ಯಾದಿ ಪಾರಂಪರ್ಯಕ್ರಮವು ಸರ್ವಕಲ್ಪಗಳಲ್ಲಿಯೂ ಸಾಧಾರಣ ವಾದುದು ಅಥವಾ ಬ್ರಹ್ಮಕಲ್ಪಾದ್ಯವಾಂತರಕಲ್ಪಗಳು ಇಲ್ಲಿ ಹೇಳಿದ ಕ್ರಮವನ್ನು ಅನುಸರಿಸಿರ ತಕ್ಕವುಗಳು ॥ ೧೨೯ ॥

'ಕ್ವಚಿತ್ ವ್ಯತ್ಯಾಸಃ' ಎಂದು ಹೇಳಿದನ್ನು ಸಂಕ್ಷೇಪದಿಂದ ಹೇಳುತ್ತಾರೆ—

ಮೂ ॥ ಪುಂವ್ಯತ್ಯಾಸೇ ನ ಚೋಕ್ತಿಃ ಸ್ಯಾತ್ಪುರಾಣಾದಿಷು ಕುತ್ರಚಿತ್ ॥
ಕೃಷ್ಣಾಮಾಹ ಯಥಾ ಕೃಷ್ಣೋ ಧನಂಜಯಶರೈರ್ಹತಾನ್ ॥ ೧೩೦ ॥
ಶತಂ ದುರ್ಯೋಧನಾದೀಂಸ್ತೇ ದರ್ಶಯಿಷ್ಯ ಇತಿ ಪ್ರಭುಃ ॥
ಭೀಮಸೇನಹತಾಸ್ತೇ ತು ಜ್ಞಾಯಂತೇ ಬಹುವಾಕ್ಯತಃ ॥ ೧೩೧ ॥

ಅ ॥ ಪುರಾಣಾದಿಗಳಲ್ಲಿ ಕೆಲವುಕಡೆ ಕಥಾಂತರದಲ್ಲಿ ಪುರುಷವ್ಯತ್ಯಾಸದಿಂದಲೂ ವಚನ ವಿದೆ. ಹೇಗೆಂದರೆ— ಶತಸಂಖ್ಯಾಕರಾದ ದುರ್ಯೋಧನನೇ ಮೊದಲಾಗಿವುಳ್ಳ ಧೃತರಾಷ್ಟ್ರ ಪುತ್ರರನ್ನು ಅರ್ಜುನನ ಬಾಣಗಳಿಂದ ಸಂಹರಿಸಿಕೊಳ್ಳಲ್ಪಟ್ಟವರನ್ನಾಗಿ (ಎಲೋ, ದ್ರೌಪದಿಯೇ) ನಿನಗೆ ತೋರಿಸುವೆನು ಎಂದು ಸರ್ವಸಮರ್ಥನಾದ ಶ್ರೀ ಕೃಷ್ಣನು ವನದಲ್ಲಿ ಕಷ್ಟದಿಂದ ಆವಾಸ ಮಾಡಿಕೊಂಡು ಇದ್ದುದರಿಂದ ಬಹು ದುಃಖಿತಗಳಾದ ದ್ರೌಪದಿಯನ್ನು ಕುರಿತು ಹೇಗೆ ಹೇಳಿರು ವನೋ (ಹಾಗೆ ಪುರುಷವ್ಯತ್ಯಾಸವನ್ನು ತಿಳಿಯತಕ್ಕದು. 'ಭೀಮಸೇನಹತಾನ್' ಎಂದು ಹೇಳುವುದನ್ನು ಬಿಟ್ಟು 'ಧನಂಜಯಶರೈರ್ಹತಾನ್' ಎಂದು ಹೇಳಿದ್ದು ಪುರುಷವ್ಯತ್ಯಾಸ ದಿಂದಲೇ. ಆಗ ಧನಂಜಯಪದದಿಂದ ಲಕ್ಷಣಾವೃತ್ತಿಯಿಂದ ಭೀಮಸೇನನೆಂದೇ ಇಟ್ಟುಕೊಳ್ಳ ಬೇಕು. ಆದಕಾರಣ ವಾಕ್ಯಗಳಿಗೆ ಅಪ್ರಾಮಾಣ್ಯವಿಲ್ಲ. ಹಾಗಾದರೆ ನಿರ್ಣಯವು ಹೇಗೆಂದರೆ—) ಬಹು ವಾಕ್ಯಗಳದೆಶೆಯಿಂದ (ಅಂದರೆ—ಭಾರತಯುದ್ಧ ಸಮಯದಲ್ಲಿ ಒಬ್ಬೊಬ್ಬನ ಸಂಹಾರ ಕಾಲಾಗ 'ಭೀಮೇನ ಹತಃ ಭೀಮೇನ ಹತಃ' ಬಹುವಾಕ್ಯಾನುಸಾರವಾಗಿ) ಆ ಪ್ರಸಿದ್ಧರಾದ ದುರ್ಯೋಧನನೇ ಮೊದಲಾಗಿವುಳ್ಳ ನೂರು ಜನರೂ ಭೀಮಸೇನನಿಂದ ಸಂಹರಿಸಿಕೊಳ್ಳಲ್ಪಟ್ಟರು ಎಂದು ತಿಳಿಯಲ್ಪಡುತ್ತಾರೆ. (ಆದುದರಿಂದ ನಿರ್ಣಯವಾಗುತ್ತದೆ) ॥ ೧೩೦ ॥ ೧೩೧ ॥

ನಿಶ್ಚಯಕ್ಕಾಗಿ ಹಿಂದೆ ಹೇಳಿದ ಅರ್ಥವನ್ನೇ ಹೇಳುತ್ತಾರೆ—

ಮೂ ॥ ವಿಸ್ತಾರೇ ಭೀಮನಿಹತಾಃ ಸಂಕ್ಷೇಪೇಽರ್ಜುನಪಾತಿತಾಃ ॥
ಉಚ್ಯಂತೇ ಬಹವಶ್ಚಾನ್ಯೇ ಪುಂವ್ಯತ್ಯಾಸಸಮಾಶ್ರಯಾತ್ ॥ ೧೩೨ ॥
ವಿಸ್ತಾರೇ ಕೃಷ್ಣನಿಹತಾ ಬಲಭದ್ರಹತಾ ಇತಿ ॥
ಉಚ್ಯಂತೇ ಚ ಕ್ವಚಿತ್ಕಾಲವ್ಯತ್ಯಾಸೋಽಪಿ ಕ್ವಚಿದ್ಭವೇತ್ ॥ ೧೩೩ ॥
ಯಥಾ ಸುಯೋಧನಂ ಭೀಮಃ ಪ್ರಾಹಸತ್ಕೃಷ್ಣ ಸನ್ನಿಧೌ ॥
ಇತಿ ವಾಕ್ಯೇಷು ಬಹುಷು ಜ್ಞಾಯಂತೇ ನಿರ್ಣಯಾದಪಿ ॥ ೧೩೪ ॥

ಅ ॥ ವಿಸ್ತಾರದಲ್ಲಿ (ಅಂದರೆ— ಯುದ್ಧ ಕಥೆಯನ್ನು ವಿಸ್ತಾರ ಮಾಡುವಾಗ) (ಆ ದುರ್ಯೋಧನಾದಿಗಳು) ಭೀಮಸೇನನಿಂದಲೇ ಸಂಹರಿಸಿಕೊಳ್ಳಲ್ಪಟ್ಟಿರುತ್ತಾರೆ ಎಂದು ಹೇಳಲ್ಪಡುತ್ತಾರೆ. ಸಂಕ್ಷೇಪದಲ್ಲಿ (ಅಂದರೆ ಪ್ರಾಸಂಗಿಕವಾಗಿ ಕಥಾಸಂಕ್ಷೇಪವನ್ನು ಮಾಡುವಾಗ) ಅರ್ಜುನನಿಂದ ಸಂಹರಿಸಿಕೊಳ್ಳಲ್ಪಟ್ಟಿರುತ್ತಾರೆಂದು ಹೇಳಲ್ಪಡುತ್ತಾರೆ. ಹೀಗೆಯೇ ಕೆಲವು ಗ್ರಂಥಗಳಲ್ಲಿ ಕೆಲವು ಅರ್ಥದಲ್ಲಿ ಹೀಗೆ ಕೆಲವರು ವಿಸ್ತಾರವಾಗಿ ಹೇಳುವಾಗ, ಶ್ರೀ ಕೃಷ್ಣನಿಂದ ಸಂಹರಿಸಿಕೊಳ್ಳಲ್ಪಟ್ಟಿರುತ್ತಾರೆಂದು ಹೇಳಲ್ಪಡುತ್ತಾರೆ. ಕೆಲವು ಕಡೆ ಸಂಕ್ಷೇಪದಿಂದ ಹೇಳುವಾಗ ಬಲರಾಮನಿಂದ ಸಂಹರಿಸಿಕೊಳ್ಳಲ್ಪಟ್ಟಿರುತ್ತಾರೆಂದು ಹೇಳಲ್ಪಡುತ್ತಾರೆ. (ಬಹೂಕ್ತಿಯು ಪ್ರಮಾಣವಾಗಿರುವುದರಿಂದ ಅಲ್ಪವಾಗಿ ಹೇಳಿದ್ದು ವ್ಯತ್ಯಾಸವೆಂದು ತಿಳಿಯತಕ್ಕದು, ಹೀಗೆ ನಿರ್ಣಯವು) ಹೀಗೆಯೇ ಇತರರಾದ ಬಹುಜನರೂ ಪುರುಷವ್ಯತ್ಯಾಸವನ್ನು ಚೆನ್ನಾಗಿ ಆಶ್ರಯಿಸಿಕೊಂಡು ಹೇಳಲ್ಪಡುತ್ತಾರೆ. ಕೆಲವು ಕಡೆ ಕಾಲವ್ಯತ್ಯಾಸವೂ ಆಗುವುದು. ಹೇಗೆಂದರೆ—ಭೀಮನು ಶ್ರೀಕೃಷ್ಣನ ಸಮೀಪದಲ್ಲಿ ದುರ್ಯೋಧನನನ್ನು ನೋಡಿ ನಗಾಡಿದನು ಎಂದು ಹೇಗೋ (ಇದೇ ಮೊದಲಾಗಿವುಳ್ಳ ಕಥೆಗಳು) ಬಹುವಾಕ್ಯಗಳಲ್ಲಿ ನಿಶ್ಚಯಿಸಿ ಹೇಳಿವರಿಂದ ನಿಶ್ಚಯಿಸಲ್ಪಡುತ್ತವೆ ॥ ೧೩೨ ॥ ೧೩೩ ॥ ೧೩೪ ॥

ಮೂ ॥ ಅನಿರ್ಣಯೇ ತು ಕೃಷ್ಣಸ್ಯ ಪೂರ್ವಮುಕ್ತಾ ಗತಿಸ್ತತಃ ॥
ವ್ಯತ್ಯಾಸಾಸ್ತ್ವೇವಮಾದ್ಯಾಶ್ಚ ಪ್ರಾತಿಲೋಮ್ಯಾದಯಸ್ತಥಾ ॥ ೧೩೫ ॥
ದೃಶ್ಯಂತೇ ಭಾರತಾದ್ಯೇಷು ಲಕ್ಷಣಗ್ರಂಥತಶ್ಚ ತೇ ॥
ಜ್ಞಾಯಂತೇ ಬಹುಭಿರ್ವಾಕ್ಯೈರ್ನಿರ್ಣಯಗ್ರಂಥತಸ್ತಥಾ ॥ ೧೩೬ ॥

ಅ ॥ ಅನಿರ್ಣಯ ಗ್ರಂಥಗಳಲ್ಲಿ ಒಂದೇ ವಾಕ್ಯದಿಂದ ಕೆಲವುಕಡೆ ಪ್ರಸಂಗ ಸಂಗತಿಯಿಂದ ಹೇಳುವಾಗ ಶ್ರೀ ಕೃಷ್ಣನ ಉತ್ತರಕಾಲೀನವಾದ ಗಮನವು ಕಾಲವ್ಯತ್ಯಾಸದಿಂದ ಮೊದಲೇ ಉಕ್ತವಾಗಿದೆ. ಹಾಗೆಯೇ ಇದುಮೊದಲಾಗಿವುಳ್ಳ ಕಾಲವ್ಯತ್ಯಾಸ-ಪುರುಷವ್ಯತ್ಯಾಸಾದಿಗಳೂ, ಹಾಗೆಯೇ ಪ್ರಾತಿಲೋಮ್ಯಾದಿಗಳೂ ಭಾರತಾದಿ ಗ್ರಂಥಗಳಲ್ಲಿ ಕಾಣಲ್ಪಡುತ್ತವೆ. ಆ ವ್ಯತ್ಯಾಸಪ್ರಾತಿಲೋಮ್ಯಾದಿಗಳು ವೇದವ್ಯಾಸರಿಂದ ಹೇಳಲ್ಪಟ್ಟ ಲಕ್ಷಣಗ್ರಂಥದೆಶೆಯಿಂದಲೂ, ಹಾಗೆಯೇ ಗ್ರಂಥಾಂತರದಲ್ಲಿ ಇರತಕ್ಕ ಅನೇಕ ಸದ್ವಾಕ್ಯಗಳಿಂದಲೂ, ಹಾಗೆಯೇ ನಿರ್ಣಯರೂಪವಾದ ಬ್ರಹ್ಮಸೂತ್ರ ಪಂಚರಾತ್ರ ಮೊದಲಾದ ನಿರ್ಣಯಗ್ರಂಥಗಳಿಂದಲೂ (ಸಂದಿಗ್ಧವಾಕ್ಯದ ಅರ್ಥವು) ತಿಳಿಯಲ್ಪಡುತ್ತವೆ.

**ವಿಶೇಷಾಂಶ— (1)** ಉತ್ತರಕಾಲೀನವಾದ ಗಮನಕ್ಕೆ ಪೂರ್ವಕಾಲೀನತ್ವವನ್ನು ಹೇಳಿದ್ದು ಕಾಲವ್ಯತ್ಯಾಸವು. ಆಗ 'ಗಂಗಾಯಾಂ ಘೋಷಃ' ಎನ್ನುವಲ್ಲಿ ಗಂಗಾಪದದಿಂದ ತೀರವನ್ನು ಹೇಗೆ ಇಟ್ಟುಕೊಳ್ಳುತ್ತೇವೋ ಹಾಗೆಯೇ ಪೂರ್ವಪದದಿಂದ ಪರಕಾಲವನ್ನು ಲಕ್ಷಣಾವೃತ್ತಿಯಿಂದ

ಇಟ್ಟುಕೊಳ್ಳಬೇಕು. ಅದಕಾರಣ ವಾಕ್ಯಕ್ಕೆ ಅಪ್ರಾಮಾಣ್ಯವಿಲ್ಲ. (2) ಶ್ರೀ ಕೃಷ್ಣನ ಗಮನವು ಅನಿರ್ಣಾಯಕಗ್ರಂಥಗಳಲ್ಲಿ ಅಟ್ಟಹಾಸದೆಶೆಯಿಂದ ಮೊದಲೇ ಉಕ್ತವಾಗಿದೆ. ಇಂದ್ರಪ್ರಸ್ಥದೆಶೆಯಿಂದ ಸಾಲ್ವನನ್ನು ಸಂಹರಿಸುವುದಕ್ಕಾಗಿ ದ್ವಾರಕೆಗೆ ಕೃಷ್ಣನು ಹೋದಮೇಲೆ ಭೀಮಸೇನನು ಜಲದಲ್ಲಿ ಬಿದ್ದಿರತಕ್ಕ ದುರ್ಯೋಧನನನ್ನು ನೋಡಿ ನಗಾಡಿದನು ಎಂದು ಕಾಲವ್ಯತ್ಯಾಸವಿದೆ. ಇಲ್ಲಿ ಶ್ರೀ ಕೃಷ್ಣನು ಇರುವಾಗಲೇ ನಗಾಡಿದ್ದು, ಆ ಮೇಲೆಯೇ ಶ್ರೀಕೃಷ್ಣನು ಹೋದದ್ದು ಎಂದು ಇಟ್ಟುಕೊಳ್ಳಬೇಕು. (3) ಮೇಲೆ ಹೇಳತಕ್ಕ ಕಥೆಯನ್ನು ಮೊದಲು ಹೇಳುವುದು ಪ್ರಾತಿಲೋಮ್ಯ ಎಂದು ಹೇಳಲ್ಪಡುತ್ತದೆ. ಹೇಗೆಂದರೆ— ದಕ್ಷಿಣ ಗೋಗ್ರಹಣದೆಶೆಯಿಂದ ಮೊದಲು ಉತ್ತರ ಗೋಗ್ರಹಣವನ್ನು ಹೇಳಿದ್ದು. 'ಪೂರ್ವಂ ಪಶ್ಚಾತ್' ಎಂದು ಕಾಲವಾಚಕಶಬ್ದವಿಲ್ಲದೆ ಕೇವಲವಾಗಿ ಕೇವಲ ಉತ್ತರ ಕಥೆಯನ್ನು ಮೊದಲು ಹೇಳಿದರೆ ಪ್ರಾತಿಲೋಮ್ಯವೆಂದು ಹೇಳಲ್ಪಡುತ್ತದೆ. ಕಾಲವಾಚಕಪದವಿಲ್ಲದಿರುವುದರಿಂದ ಕಾಲವ್ಯತ್ಯಾಸಕ್ಕೆ ಅವಕಾಶವಿಲ್ಲ. ಹೇಳಲ್ಪಡತಕ್ಕ ಕಥೆಯು ಇದ್ದಪ್ರಯುಕ್ತ ವಾಕ್ಯಕ್ಕೆ ಅಪ್ರಾಮಾಣ್ಯವೂ ಇಲ್ಲ. ಗ್ರಂಥಕ್ಕೆ ಅಕೌಶಲ್ಯವೂ ಇಲ್ಲ. ಬಹುಜ್ಞರನ್ನು ಕುರಿತು ವಿಸ್ತಾರವಾದ ಉತ್ತರದಲ್ಲಿ ಹೇಳತಕ್ಕ ಕಥೆಯನ್ನು ಮೊದಲು ಹೇಳಿದರೆ ಪ್ರಾಚೀನವಾದ ಅಲ್ಪಕಥೆಗೂ ಅದೇ ನ್ಯಾಯದಿಂದ ಅತಿದೇಶಮಾಡಿಕೊಳ್ಳಲಿಕ್ಕೆ ಬರುವುದರಿಂದ ಪ್ರಾತಿಲೋಮ್ಯವನ್ನು ಮಾಡಿದ್ದು ಕೆಲವುಕಡೆ ಅಲ್ಪಜ್ಞರ ಬುದ್ಧಿಯನ್ನು ಅನುಕೂಲೀಕರಿಸುವುದಕ್ಕಾಗಿ ಸೂಚೀಕಟಾಹನ್ಯಾಯದಿಂದ ಅಲ್ಪವಾದ ಉತ್ತರದಲ್ಲಿ ಹೇಳತಕ್ಕ ಕಥೆಯನ್ನು ಮೊದಲು ಹೇಳುವುದೂ ಸಂಗತವಾಗುತ್ತದೆ. (4) ಭಾರತಾದಿಗಳಲ್ಲಿರತಕ್ಕ ಗುಹ್ಯ-ಸಮಾಧಿ-ದರ್ಶನ ಎನ್ನುವ ಮೂರು ಭಾಷೆಗಳನ್ನೂ ರೀತಿಶತಕ (೧೦೦೦ರೀತಿ) ಮೊದಲಾದವುಗಳ ಲಕ್ಷಣವನ್ನೂ ಪ್ರತಿಪಾದಿಸತಕ್ಕ ಗ್ರಂಥವು ಲಕ್ಷಣ ಗ್ರಂಥವು. (5) 'ಸತ್ಯಂ ಸತ್ಯಂ ಪುನಃ ಸತ್ಯಂ' 'ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ವಿಬುಧಾಯ ತು' ಇತ್ಯಾದಿಗಳಂತೆಯೇ. ಇದು ಹೀಗೇಯೇ ಸರ್ವಥಾ ವ್ಯತ್ಯಾಸವಲ್ಲವೆಂದು ಪ್ರತಿಪಾದಿಸತಕ್ಕದ್ದು ನಿರ್ಣಯಗ್ರಂಥವು ॥ ೧೩೫ ॥ ೧೩೬ ॥

ಮೂ ॥ ತಸ್ಮಾದ್ಧಿ ನಿರ್ಣಯೇಗ್ರಂಥಾನಾಶ್ರಿತ್ಯೈವ ಚ ಲಕ್ಷಣಂ ॥
ಬಹುವಾಕ್ಯಾನುಸಾರೇಣ ನಿರ್ಣಯೋಽಯಂ ಮಯಾ ಕೃತಃ ॥ ೧೩೭ ॥

ಅ ॥ ಆದ ಕಾರಣ ನಿರ್ಣಯ ಗ್ರಂಥಗಳನ್ನೂ, ಲಕ್ಷಣವನ್ನೂ ಕೂಡ ಆಶ್ರಯಿಸಿಯೇ ಬಹು ವಾಕ್ಯಗಳ ಅನುಕೂಲ್ಯದಿಂದ ಇಲ್ಲಿ ಹೇಳಲ್ಪಟ್ಟ ನಿರ್ಣಯವು ನನ್ನಿಂದ ಮಾಡಲ್ಪಟ್ಟಿತು ॥ ೧೩೭ ॥

ಅದರಲ್ಲಿ ಲಕ್ಷಣಗ್ರಂಥವನ್ನು ಉದಾಹರಿಸುತ್ತಾರೆ—

ಮೂ ॥ ಉಕ್ತಂ ಲಕ್ಷಣಶಾಸ್ತ್ರೇ ಚ ಕೃಷ್ಣದ್ವೈಪಾಯನೋದಿತೇ ॥
ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ ॥ ೧೩೮ ॥
ವ್ಯತ್ಯಾಸಾದೀನ್ಸಪ್ತಭೇದಾನ್ವೇದಾದ್ಯರ್ಥಂ ತಥಾ ವದೇತ್ ॥
ಸ ಯಾತಿ ನಿರಯಂ ಘೋರಂ ಅನ್ಯಥಾಜ್ಞಾನಸಂಭವಂ ॥ ೧೩೯ ॥
ಇತ್ಯನ್ಯೇಷು ಚ ಶಾಸ್ತ್ರೇಷು ತತ್ರ ತತ್ರೋದಿತಂ ಬಹು ॥
ವ್ಯತ್ಯಾಸಃ ಪ್ರಾತಿಲೋಮ್ಯಂ ಚ ಗೋಮೂತ್ರೀ ಪ್ರಘಸಸ್ತಥಾ ॥ ೧೪೦ ॥
ಉಕ್ಷ್ಣಃ ಸುಧರಃ ಸಾಧುಃ ಸಪ್ತಭೇದಾಃ ಪ್ರಕೀರ್ತಿತಾಃ ॥
ಇತ್ಯಾದಿ ಲಕ್ಷಣಾನ್ಯತ್ರ ನೋಚ್ಯಂತೇಽನ್ಯಪ್ರಸಂಗತಃ ॥ ೧೪೧ ॥

ಅ || ಯಾವ ಪುರುಷನು ಸಮಾಧಿ-ದರ್ಶನ-ಗುಹ್ಯ ಎನ್ನುವ ಮೂರು ಭಾಷೆಗಳ ಲಕ್ಷಣವನ್ನೂ ರೀತಿಗಳ ನೂರರನ್ನೂ ವ್ಯತ್ಯಾಸ ಮೊದಲಾದ ಏಳು ಭೇಧಗಳನ್ನೂ ತಿಳಿಯುವದಿಲ್ಲವೋ, ಯಾವ ಪುರುಷನು ಯಾವ ಪಕ್ಷದಲ್ಲಿ ವೇದ-ಭಾರತ-ಪುರಾಣಗಳ ಅರ್ಥ ವನ್ನು (ಭಾಷಾತ್ರಯಾದಿಗಳ ಜ್ಞಾನವಿಲ್ಲದೆ ತನ್ನ ಬುದ್ಧಿಯಿಂದಲೇ) ಹೇಳುವನೋ (ಹಾಗಾದರೆ) ವಿಪರೀತಜ್ಞಾನದಿಂದ ಉಂಟಾಗತಕ್ಕ ಭಯಂಕರವಾದ ನರಕವನ್ನು ಹೊಂದುತ್ತಾನೆ. ಹೀಗೆ ವೇದವ್ಯಾಸರಿಂದ ಹೇಳಲ್ಪಟ್ಟ ಲಕ್ಷಣಶಾಸ್ತ್ರದಲ್ಲಿ ಹೇಳಲ್ಪಟ್ಟದೆ. ಪೂರ್ವೋಕ್ತಪ್ರಕಾರವಾಗಿ ಹೇಳಲ್ಪಟ್ಟ ಅರ್ಥವು ಲಕ್ಷಣಶಾಸ್ತ್ರದಿಂದ ಇತರಗಳಾದ ಶಾಸ್ತ್ರಗಳಲ್ಲಿಯೂ ಆಯಾಯಪ್ರಸಂಗಗಳಲ್ಲಿ ಬಹುಪ್ರಕಾರವು ಹೇಗೆ ಆದೀತೋ ಹಾಗೆ (ವೇದವ್ಯಾಸರಿಂದ) ಹೇಳಲ್ಪಟ್ಟದೆ. (ವ್ಯತ್ಯಾಸ ಮೊದ ಲಾದ ಏಳುಭೇದಗಳ ನಾಮಗಳನ್ನು ಹೇಳುತ್ತಾರೆ—) ವ್ಯತ್ಯಾಸವು, ಪ್ರತಿಲೋಮ್ಯವು, ಗೋಮೂತ್ರೀ, ಹಾಗೆಯೇ ಪ್ರಘಸವು, ಉಕ್ಷಣವು, ಸುಧರವು, ಸಾಧುವು ಹೀಗೆ ಏಳುಭೇದಗಳು ಹೇಳಲ್ಪಟ್ಟವೆ. ಇದು ಮೊದಲಾದ ವ್ಯತ್ಯಾಸಾದಿಗಳ ಲಕ್ಷಣಗಳು ಈ ಗ್ರಂಥದಲ್ಲಿ ಶ್ರೀ ಹರಿಯ ಅವತಾರಭೂತವಾದ ಕಥೆಯ ನಿರ್ಣಯಪ್ರಸಂಗದಿಂದ ವ್ಯತ್ಯಾಸಾದಿಗಳ ಲಕ್ಷಣ ಕಥನರೂಪ ವಾದ ಅನ್ಯಪ್ರಸಂಗದಿಂದ ಹೇಳಲ್ಪಡುದಿಲ್ಲ.

ವಿಶೇಷಾಂಶ— (1) ೧ ಸಮಾಧಿ ಭಾಷಾ, ೨ ಗುಹ್ಯಭಾಷಾ, ೩ ದರ್ಶನಭಾಷಾ, ಎಂದು ತ್ರಿಭಾಷಾ, ಅದರಲ್ಲಿ (೧) ಸ್ಪಷ್ಟವಾಗಿ ಸರ್ವರಿಂದಲೂ ಹೇಗೆ ತಿಳಿಯಲ್ಪಡುತ್ತದೋ ಆ ರೀತಿಯಾಗಿ ಹೇಳುವುದು ಸಮಾಧಿಭಾಷೆಯು, ಉದಾ— 'ನಾಸ್ತಿ ನಾರಾಯಣ ಸಮಂ' ಇತ್ಯಾದಿ. (೨) ಅರ್ಥವನ್ನು ಗೋಪ್ಯವಾಗಿಟ್ಟುಕೊಂಡು ಹೇಳುವುದು ಗುಹ್ಯಭಾಷೆಯು, ಉದಾ—'ನದೀಜಲಂಕೇಶವನಾರಿಕೇತುಃ' ಇತ್ಯಾದಿ. ಎಲೋ ಭೀಷ್ಮನೇ! ಲಂಕಾಪಟ್ಟ ಣಕ್ಕೆ ಸ್ವಾಮಿಯಾದ ರಾವಣನ ಅರಣ್ಯಕ್ಕೆ ಶತ್ರುವಾದ ಹನುಮಂತನು ಧ್ವಜದಲ್ಲಿರತಕ್ಕ ಅರ್ಜು ನನು ಎನ್ನುವ ಅರ್ಥವು ನಿಗೂಹಿತವಾಗಿರುವುದರಿಂದ ಗುಹ್ಯಭಾಷೆಯು (೩) ಪಾಶುಪತಾದಿ ಶಾಸ್ತ್ರವನ್ನು ಆಶ್ರಯಿಸಿ ಹೇಳುವುದು ದರ್ಶನಭಾಷೆಯೂ. ಉದಾ-ಶಾಂತಿಪರ್ವದಲ್ಲಿ ರುದ್ರನನ್ನು ಕುರಿತು ಶ್ರೀಕೃಷ್ಣನ ತಪಶ್ಚರಣಾದಿ ಕಥೆಗಳು. (2) 'ರೀತೀನಾಂ ಶತಮೇವ' ಎನ್ನುವ (೧) ಮೃದುಪದಾಕ್ಷರಗಳ ವಿನ್ಯಾಸವು ವೈದರ್ಭೀರೀತಿಯು. ಉದಾ-'ವಾಯುವಾಯಾಹಿ ದರ್ಶತೇ ಮೇ ಸೋಮಾಃ' ಇತ್ಯಾದಿ (೨) ಕಠೋರ ಪದಾಕ್ಷರಗಳ ವಿನ್ಯಾಸವು ಗೌಡೀರೀತಿಯು. ಉದಾ—ಸೃಣ್ಯೇವ ಜರ್ಭರೀ ತುರ್ಫರೀ ಪರ್ಭರೀತಿ' ಇತ್ಯಾದಿ. ಹಾಗೆಯೇ ಯಾವ ವ್ಯುತ್ಪನ್ನ ಪುರುಷನಿಗೂ ಮಾಡಲು ಸಾಧ್ಯವಿಲ್ಲವೆಂದು ತೋರಿಸಿಕೊಡುವುದಕ್ಕಾಗಿ ವೇದದಲ್ಲಿಯೂ ಛಂದಸ್ಸಿನ ಸಾಮ್ಯವನ್ನು ತೋರಿಸಿಕೊಡುವುದಕ್ಕಾಗಿ ವೈದಿಕ ಗ್ರಂಥದಲ್ಲಿಯೂ ಅಪ್ರಸಿದ್ಧ ಪದ ಗಳನ್ನು ಹೇಳಿದ್ದು ಕೆಲವುಕಡೆ ಮಾಡತಕ್ಕ ಸಂಧಿಯನ್ನು ಮಾಡದಿರುವುದು, ಕೆಲವುಕಡೆ ಸುಪಿಗೆ ಲೋಪವು. ಹೀಗೆ ವೇದದಲ್ಲಿಯೂ, ಹೀಗೆಯೇ ವೈದಿಕ ಗ್ರಂಥಗಳಲ್ಲಿಯೂ ರೀತಿಗಳನ್ನು ತಿಳಿಯ ಬೇಕು. 'ಆದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರಗೀಯತೇ' ಇದು ಮೊದಲಾದವಾಕ್ಯ ಗಳನ್ನು ಆಲೋಚಿಸದೆ 'ಅಗ್ನಿಮೀಳೇಪುರೋಹಿತಂ' ಇತ್ಯಾದಿಗಳು ಕೇವಲ ಅಗ್ನಿಪರತ್ವವನ್ನೇ ಹೇಳುತ್ತವೆ ಎಂದು. (3) ವ್ಯತ್ಯಾಸಾದಿ ಸಪ್ತಭೇದಗಳು, (೧) ಭೀಮಸೇನ ಎಂದು ಹೇಳುವ ಬದಲಿಗೆ ಅರ್ಜುನ ಎಂದು ಹೇಳಿದ್ದು ಪದವ್ಯತ್ಯಾಸವು. ಉತ್ತರಕಾಲೀನಕ್ಕೆ ಪೂರ್ವಕಾಲೀನತ್ವಕಥನವು ಕಾಲವ್ಯತ್ಯಾಸವು. (೨) 'ಪೂರ್ವಂ ಪಶ್ಚಾತ್' ಎಂದು ಕಾಲವಾಚಕಶಬ್ದವಿಲ್ಲದೆ ಕೇವಲವಾಗಿ ಉತ್ತರಕಥಾಮಾತ್ರವನ್ನು ಮೊದಲು ಹೇಳಿದರೆ ಪ್ರಾತಿಲೋಮ್ಯವು. (೩) ಹೋಗತಕ್ಕ ಎತ್ತಿನ ಮೂತ್ರವು ಹೇಗೆ ವಕ್ರಾಕಾರವಾಗಿ ಇರುತ್ತದೋ ಹಾಗೆಯೇ ಯಾವುದಾದರೊಂದು ಕಥೆಯನ್ನು

ಆರಂಭಿಸಿ ಮಧ್ಯದಲ್ಲಿ ಅದಕ್ಕೆ ಅಸಂಬದ್ಧವಾದ ಕಥೆಯನ್ನು ಹೇಳಿ ಪುನಃ ಅದಕ್ಕೆ ಅನುಕೂಲವಾದ ಕಥೆಯನ್ನು ಹೇಳುವುದು **ಗೋಮೂತ್ರಿಯು.** ಉದಾ= ಶ್ರೀ ಕೃಷ್ಣನ ಕಥೆಯನ್ನು ಹೇಳತಕ್ಕ ೧೦ನೇ ಸ್ಕಂಧದಲ್ಲಿ **'ದೇವಾಸುರವಮನುಷ್ಯೇಷು ಯೇ ಭಜಂತ್ಯಶಿವಂ ಶಿವಂ । ಪ್ರಾಯಸ್ತೇ ಧನಿನೋ ಭೋಜಾ ನ ತು ಲಕ್ಷ್ಮ್ಯಾಃ ಪತಿಂ ಹರಿಮ್ । ಏತದ್ವೇದಿತುಮಿಚ್ಛಾಮಃ** ಇದು ಮೊದಲಾದ ಪ್ರಾಸಂಗಿಕ ಕಥೆಯನ್ನು ಹೇಳಿ ಪುನಃ ಶ್ರೀ ಕೃಷ್ಣನ ಕಥೆಯನ್ನು ಹೇಳುವುದು. (೪) 'ಘಸ್ ಅಸ್ವಾದನೆ' ಎನ್ನುವ ಧಾತುವಿನದೆಶೆಯಿಂದ ಹೇಳತಕ್ಕ ಕಥೆಯನ್ನು ಭಕ್ಷಣದಂತೆಯೇ ನಿರೂಪಿಸದೆ ಇರುವುದು **ಪ್ರಘಸವು.** ಉದಾ= ಹರಿವಂಶದಲ್ಲಿ ವಿಸ್ತೃತವಾದ ಕೈಲಾಸಯಾತ್ರೆ ಮೊದಲಾದ ಕೃಷ್ಣಕಥೆಯನ್ನು ಹೇಳುವ ೧೦ನೇ ಸ್ಕಂಧದಲ್ಲಿ ವಿಸ್ತಾರವಾಗಿ ನಿರೂಪಿಸದೆ ಇರುವುದು ಇತ್ಯಾದಿಗಳು. (೫) ಗೋಮಯ ಪ್ರೋಕ್ಷಣದಂತೆ ಕಥೆಯನ್ನು ಅಲ್ಲಲ್ಲಿ ವಿಕ್ಷೇಪದಿಂದ ಹೇಳುವುದು **ಉತ್ಕ್ಷಣವು.** (೬) ಚೆನ್ನಾಗಿ ಧೂರ್ತಿಯಿಂದ ಎಲ್ಲಿ ಪಾರವಿದೆಯೋ ಅದು ಸುಧುರವು. ಉದಾ= **'ವಾಸುದೇವಪರಾ ವೇದಾಃ ವಾಸುದೇವಪರಾ ಮಖಾಃ । ವಾಸುದೇವಪರಾ ಯೋಗಾಃ ವಾಸುದೇವಪರಾಃ ಕ್ರಿಯಾಃ । ವಾಸುದೇವಪರಂ ಜ್ಞಾನಂ ವಾಸುದೇವಪರಂ ತಪಃ । ವಾಸುದೇವಪರೋ ಧರ್ಮೋ ವಾಸುದೇವಪರಾ ಗತಿಃ । ವಿಶ್ವತಃ ಪಾಣಿಪಾದಂ ತದ್ವಿಶ್ವತೋಽಕ್ಷಿಶಿರೋಮುಖಂ । ವಿಶ್ವತಃ ಶ್ರುತಿಮಲ್ಲೋಕೇ ವಿಶ್ವಮಾವೃತ್ಯ ತಿಷ್ಠತಿ । ಸರ್ವಜ್ಞಃ ಸರ್ವಗಃ ಸರ್ವಃ ಸರ್ವಗಃ ಸರ್ವಭಾವನಃ । ಸರ್ವಶಾಸ್ತಾ ಸರ್ವಸಾಕ್ಷೀ ಪೂಜ್ಯಃ ಸರ್ವಸ್ಯ ಸರ್ವಧೃಕ್ । ಸರ್ವಶಕ್ತಿಃ ಸರ್ವಸಾರಃ ಸರ್ವಾತ್ಮಾ ಸರ್ವತೋಮುಖಃ । ಸರ್ವಾವಾಸಃ ಸರ್ವರೂಪಃ ಸರ್ವಾದಿಃ ಸರ್ವದುಃಖಹಾ । ಸರ್ವಾರ್ಥಃ ಸರ್ವತೋ ಭದ್ರಃ ಸರ್ವಕಾರಣಕಾರಣಂ । ಸರ್ವಾತಿಶಾಯಿಕಃ ಸರ್ವಾಧ್ಯಕ್ಷಃ ಸರ್ವೇಶ್ವರೇಶ್ವರಃ'** ಇದು ಮೊದಲಾದುದು. (೭) ಸಾಧಿಷ್ಠಾನ ಸ್ತುತಿಯಿಲ್ಲದೆ 'ಕೇವಲವಾಗಿ ವಿಷ್ಣುವಿನ ಸ್ತುತಿಯು ಎಲ್ಲಿದೆಯೋ ಅದು **ಸಾಧುವು.** ಉದಾ= **ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ।'** ಇದು ಮೊದಲಾದುದು ॥ ೧೩೮ ॥ ೧೩೯ ॥ ೧೪೦ ॥ ೧೪೧ ॥

**ಮೂ ॥** ಅನುಸಾರೇಣ ತೇಷಾಂ ತು ನಿರ್ಣಯಃ ಕ್ರಿಯತೇ ಮಯಾ ॥
ತಸ್ಮಾನ್ನಿರ್ಣಯಶಾಸ್ತ್ರತ್ವಾದ್ಗ್ರಾಹ್ಯಮೇತದ್ಬುಭೂಷುಭಿಃ ॥ ೧೪೨ ॥

**ಅ ॥** ಲಕ್ಷಣಾದಿ ಶಾಸ್ತ್ರಗಳ ಅನುಕೂಲ್ಯದಿಂದ ಯಾವಕಾರಣದಿಂದ ನನ್ನಿಂದ ನಿರ್ಣಯವು ಮಾಡಲ್ಪಡುತ್ತದೋ ಆದುದರಿಂದ ನಿರ್ಣಯಶಾಸ್ತ್ರತ್ವವಿದ್ದವುದುಯುಕ್ತ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಾಖ್ಯವಾದ ಶಾಸ್ತ್ರವು ತತ್ವಜ್ಞಾನೇಚ್ಛುಗಳಿಂದ ಉಪಾದೇಯವೇ ಆಗಿದೆ ॥ ೧೪೨ ॥

ಶ್ರೀ ಹರಿಯ ಕಥೆಯನ್ನು ಹೇಳಿ ಶ್ರೀ ಹರಿಯ ಕಥೆಯ ಪಠನಾದಿಗಳಿಂದ ಶ್ರೀ ಹರಿಯ ಚರಣಪ್ರಾಪ್ತಿಯೇ ಫಲವೆಂದು ಹೇಳುವುದಕ್ಕಾಗಿ ಉಪಸಂಹಾರಮಾಡುತ್ತಾರೆ—

ಮೂ || ಇತೀರಿತಾ ರಾಮಕಥಾ ಪರಾ ಮಯಾ
ಸಮಸ್ತಶಾಸ್ತ್ರಾನುಸೃತೇರ್ಭವಾಪಹಾ ||
ಪಠೇದಿಮಾಂ ಯಃ ಶೃಣುಯಾದಥಾಪಿ ವಾ
ವಿಮುಕ್ತಬಂಧಶ್ಚರಣಂ ಹರೇರ್ವ್ರಜೇತ್ || ೧೪೩ ||

ಅ || ಸಮಸ್ತ ಶಾಸ್ತ್ರಗಳ ಅನುಸರಣದೆಶೆಯಿಂದ ಸಂಸಾರವನ್ನು ನಾಶಪಡಿಸತಕ್ಕ ಅತ್ಯುತ್ತಮವಾದ ಶ್ರೀ ರಾಮನ ಕಥೆಯು ಹಿಂದೆ ಹೇಳಿದಪ್ರಕಾರ ಹೇಳಲ್ಪಟ್ಟಿತು. ಈ ಕಥೆಯನ್ನು ಯಾವನು ಪಠನಮಾಡುತ್ತಾನೋ, ಶ್ರವಣಮಾಡುತ್ತಾನೋ, ಅಂಥವನು ಸಂಸಾರ ಬಂಧದಿಂದ ವಿಮುಕ್ತನಾಗಿ ಶ್ರೀ ಹರಿಯ ಚರಣವನ್ನು (ಅಂದರೆ ಮುಕ್ತಿಯನ್ನು) ಹೊಂದುವನು. || ೧೪೩ ||

ಇತಿ ಶ್ರೀಮದಾನಂದತೀರ್ಥಭಗವತ್ಪಾದಾ(ದ)ಚಾರ್ಯವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ಶ್ರೀರಾಮಚರಿತೇ
ಉತ್ತರಕಾಂಡಕಥಾನಿರೂಪಣೋ (ಶ್ರೀರಾಮ ಸ್ವಧಾಮಪ್ರವೇಶೋ) ನಾಮ
ನವಮೋಽಧ್ಯಾಯಃ

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀ ರಾಮಚರಿತ್ರೆಯಲ್ಲಿ
ಉತ್ತರಕಾಂಡಕಥಾನಿರೂಪಣ (ಶ್ರೀರಾಮನು ತನ್ನದಾದ ವೈಕುಂಠಪ್ರವೇಶ) ವೆನ್ನುವ
ಒಂಭತ್ತನೇ ಅಧ್ಯಾಯವು ಸಮಾಪ್ತನಾಯಿತು.

|| ಶ್ರೀ ಕೃಷ್ಣಾರ್ಪಣಮಸ್ತು ||



|| ಶ್ರೀಃ ||

# ಹತ್ತನೇ ಅಧ್ಯಾಯವು.

ಮೂ || ಓಂ ದ್ವಾಪರೇऽಥ ಯುಗೇ ಪ್ರಾಪ್ತೇ ತ್ವಷ್ಟಾವಿಂಶತಿಮೇ ಪುನಃ ||
ಸ್ವಯಂಭುಶರ್ವಶಕ್ರಾದ್ಯಾ ದುಗ್ಧಾಬ್ಧೇಸ್ತೀರಮಾಯಯುಃ || ೧ ||

ಅ || ಆ ಮೇಲೆ ವೈವಸ್ವತಮನ್ವಂತರದ ಪ್ರಥಮ ದ್ವಾಪರಯುಗಕ್ಕಿಂತ ಇಪ್ಪತ್ತೆಂಟನೇ ದ್ವಾಪರಯುಗವು ಚೆನ್ನಾಗಿ ಸಮಾಪ್ತಪ್ರಾಯವಾಗುತ್ತಿರಲು ಬ್ರಹ್ಮನು, ರುದ್ರನು, ದೇವೇಂದ್ರನು ಇವರೇ ಮೊದಲಾಗಿ ಉಳ್ಳ ದೇವತೆಗಳು ಪುನಃ ಕ್ಷೀರಸಮುದ್ರದ ತೀರವನ್ನು ಹೊಂದಿದರು.

ವಿಶೇಷಾಂಶ (1) ಶ್ರೀಮದಾಚಾರ್ಯರು 'ಭೈ (ಭೌ) ವಿೂ ತನುರ್ವರುತ ಆಡ ಕಥಾಃ ಪರಸ್ಯ' ಎಂದು ಪ್ರತಿಜ್ಞೆಯನ್ನು ಮಾಡಿ 'ವ್ಯೂಢಶ್ಚತುರ್ಧಾ ಭಗವಾನ್' ಇತ್ಯಾದಿಗಳಿಂದ ವಾಸುದೇವ ಮೊದಲಾದ ನಾಲ್ಕು ಅವತಾರಗಳ ಸೃಷ್ಟ್ಯಾದಿ ಕಥೆಯನ್ನು ಹೇಳಿ 'ತತಃ ಸನಂಗ್ರ್ಹಾ' ಎಂದಾರಂಭಿಸಿ 'ಕದಾಚಿದೀಶಃ ಸಕಲಾವತಾರಾನ್' ಎನ್ನುವ ಶ್ಲೋಕ ಪರ್ಯಂತ ವರಾಹ ಮೊದಲಾದ ನಾನಾವತಾರ ಕಥೆಗಳನ್ನು ನಿರ್ಣಯದಿಂದ ಹೇಳಿ, ಈಗ ವ್ಯಾಸಾವತಾರ ಕಥೆಯನ್ನು ಹೇಳವುದಕ್ಕಾಗಿ ಉಪೋದ್ಘಾತ ಸಂಗತಿಯನ್ನು ತೋರಿಸಿದರು. (2) ಮೊದಲು ನಾಲ್ಕಾವರ್ತಿ ವ್ಯಾಸಾವತಾರಕ್ಕಾಗಿ ಮಾಡಿದ ಸ್ತೋತ್ರವನ್ನು ಅಪೇಕ್ಷಿಸಿ ಪುನಃ ಎಂದು ಹೇಳಿದ್ದು. 'ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ । ಅಷ್ಟಾವಿಂಶಯುಗೇ ಕೃಷ್ಣಃ ಸತ್ಯವತ್ಯಾಮಜಾಯತ' || ೩ನೇ ದ್ವಾಪರ ಯುಗದಲ್ಲಿಯೂ, ೭ನೇ ದ್ವಾಪರ ಯುಗದಲ್ಲಿಯೂ, ೧೬ನೇ ದ್ವಾಪರ ಯುಗದಲ್ಲಿಯೂ, ೨೫ನೇ ದ್ವಾಪರ ಯುಗದಲ್ಲಿಯೂ ೨೮ನೇ ದ್ವಾಪರ ಯುಗದಲ್ಲಿಯೂ ಶ್ರೀ ವೇದವ್ಯಾಸರು ಸತ್ಯವತೀ ದೇವಿಯಲ್ಲಿ ಅವತರಿಸಿರುವರು ಎಂದು ದ್ವಿತೀಯ ಸ್ಕಂದ ತಾತ್ಪರ್ಯದಲ್ಲಿದೆ || ೧ ||

ಮೂ || ಪಯೋಬ್ಧೇರುತ್ತರಂ ತೀರಮಾಸಾದ್ಯ ವಿಬುಧರ್ಷಭಾಃ ||
ತುಷ್ಟುವುಃ ಪುಂಡರೀಕಾಕ್ಷಮಕ್ಷಯಂ ಪುರುಷೋತ್ತಮಂ || ೨ ||

ಅ || ದೇವಶ್ರೇಷ್ಠರು ಕ್ಷೀರಸಮುದ್ರದ ಉತ್ತರ ತೀರವನ್ನು ಹೊಂದಿ ನಾಶರಹಿತನಾದ ಕ್ಷರಾಕ್ಷರಪುರುಷರಿಂದುತ್ತಮನಾದ ಪುಂಡರೀಕಾಕ್ಷನನ್ನು ಸ್ತೋತ್ರಮಾಡಿದರು.

ವಿಶೇಷಾಂಶ— ತೊಂಬತ್ತ ಎರಡು ಲಕ್ಷ (೯೨೦೦೦೦೦) ಯೋಜನ ವಿಸ್ತೃತವಾದ ಕ್ಷೀರಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವಿದೆ. ಅದು ದಕ್ಷಿಣ ಕ್ಷೀರಸಮುದ್ರ ಪ್ರವಾಹದ ಉತ್ತರ ತೀರದಲ್ಲಿದೆ || ೨ ||

ಆ ಸ್ತುತಿ ಪ್ರಕಾರವನ್ನು ತೋರಿಸುತ್ತಾರೆ—

ಮೂ || ನಮೋ ನಮೋऽಗಣ್ಯ ಗುಣೈಕಧಾಮ್ನೇ
ಸಮಸ್ತವಿಜ್ಞಾನಮರೀಚಿಮಾಲಿನೇ ||
ಅನಾದ್ಯವಿಜ್ಞಾನತಮೋ ನಿಹಂತ್ರೇ
ಪರಾಮೃತಾನಂದಪದಪ್ರದಾಯಿನೇ || ೩ ||

ಅ || ಗಣನೆಮಾಡಲಿಕ್ಕೆ ಅಶಕ್ಯಗಳಾದ ಗುಣಗಳಿಗೆ ಮುಖ್ಯಾಶ್ರಯನು, ಕಿರಣಗಳಂತೆ ಇರತಕ್ಕ ಸರ್ವವಸ್ತು ವಿಷಯಕಗಳಾದ ವಿಶೇಷ ಜ್ಞಾನಗಳಿಂದ ಶೋಭಿಸಿಕೊಂಡು ಇರತಕ್ಕವನು, ಅನಾದಿ ಕಾಲವನ್ನಾರಂಭಿಸಿ ಇರತಕ್ಕ ಅಜ್ಞಾನವೆನ್ನುವ ಅಂಧಕಾರವನ್ನು ನಾಶಮಾಡುವವನು, ಉತ್ತಮರಾದ ಬ್ರಹ್ಮಾದಿಗಳಿಗೆ ಕ್ಷಯ ರಹಿತವಾದ ಆನಂದವುಳ್ಳ ಮೋಕ್ಷಸ್ಥಾನವನ್ನು ಕೊಡುವ ಶೀಲವುಳ್ಳವನು ಇಂತಹ ಶ್ರೀ ನಾರಾಯಣನಿಗೋಸ್ಕರ ನಮಸ್ಕಾರ ನಮಸ್ಕಾರವು.

**ವಿಶೇಷಾಂಶ**— (1) ಯದ್ಯಪಿ **'ಅಗಣ್ಯಗುಣೈಕಧಾಮ್ನೇ'** ಎನ್ನುವಲ್ಲಿಯೇ ಸಮಸ್ತ ಗುಣಗಳಿಗೂ ಪ್ರವೇಶವಾಗುತ್ತವೆ. ಆದಾಗ್ಯೂ ಜ್ಞಾನದಿಂದ ಅಜ್ಞಾನವನ್ನು ಹೋಗಲಾಡಿಸಿ ಸಜ್ಜನರಿಗೆ ಮೋಕ್ಷವನ್ನು ಕೊಡುವುದಕ್ಕಾಗಿ, ನಿನ್ನನ್ನು ಪ್ರಾರ್ಥಿಸುವುದಕ್ಕಾಗಿ ಬಂದಿರುತ್ತೇವೆ ಎಂದು ಸೂಚಿಸುವುದಕ್ಕಾಗಿ ಮೂರು ಗುಣಗಳನ್ನು ವಿಶೇಷವಾಗಿ ಹೇಳಿರುತ್ತಾರೆ. (2) ಅನಾದಿ ಪದದಿಂದ ಸಾದಿಯಾದ ಗೌತಮ ಶಾಪದಿಂದುಂಟಾದ ಅಜ್ಞಾನವನ್ನು ಪರಿಹರಿಸುವ ಶಕ್ತಿಯು ಇದೆ ಎಂದು ಸುತರಾಂ ಸಿದ್ಧವಾಯಿತು || ೩ ||

ಮುಂದೆ ಮಾಡತಕ್ಕ ಉಪಕಾರದಲ್ಲಿ ರುಚಿಯನ್ನು ಹುಟ್ಟಿಸುವುದಕ್ಕಾಗಿ ಮೊದಲು ಮಾಡಿದ್ದ ಉಪಕಾರವನ್ನು ಅನುವಾದಮಾಡುತ್ತಾರೆ. ಅಥವಾ ದೇವತೆಗಳು ಈ ಪ್ರಕಾರ ಸ್ತೋತ್ರಮಾಡಿ ತಮ್ಮ ಪರಿಪಾಲನರೂಪವಾದ ಶ್ರೀ ಹರಿಯ ಲೀಲೆಯನ್ನು ಸ್ತುತಿಪ್ರಕಾರವಾಗಿ ವಿಜ್ಞಾಪಿಸುತ್ತಾರೆ—

**ಮೂ ||** **ಸ್ವದತ್ತಮಾಲಾಭುವಿಪಾತಕೋಪತೋ**
**ದುರ್ವಾಸಸಃ ಶಾಪತ ಆಶು ಹಿ ಶ್ರಿಯಾ ||**
**ಶಕ್ರೇ ವಿಹೀನೇ ದಿತಿಜೈಃ ಪರಾಜಿತೈಃ**
**ಪುರಾ ವಯಂ ತ್ವಾಂ ಶರಣಂ ಗತಾಃ ಸ್ಮಃ || ೪ ||**

ಅ || ಮೊದಲು ದುರ್ವಾಸಋಷಿಯಿಂದ ಕೊಡಲ್ಪಟ್ಟ ಮಾಲಿಕೆಯು ಭೂಮಿಯಲ್ಲಿ ಬಿದ್ದಿರುವುದರಿಂದುಂಟಾದ ಕೋಪದೆಶೆಯಿಂದ, ದುರ್ವಾಸಋಷಿಯ ಶಾಪದೆಶೆಯಿಂದ ತತ್ಕ್ಷಣದಲ್ಲಿಯೇ ದೇವೇಂದ್ರನು ಸಂಪತ್ತಿನಿಂದ ರಹಿತನಾಗಿ ದೈತ್ಯರಿಂದ ಪರಾಜಿತನಾಗುತ್ತಿರಲು ನಾವು ನಿನ್ನನ್ನು ಶರಣಾಗತನನ್ನಾಗಿ ಹೊಂದಿರುತ್ತೇವೆ. (ಹಿ=) ಕುಪಿತನಾದ ಋಷಿಯ ಶಾಪಕ್ಕೆ ಸಂಪದ್ವಿಮೋಚನಶಕ್ತಿಯು ಸುಪ್ರಸಿದ್ಧವು.

**ವಿಶೇಷಾಂಶ**— (1) ದುರ್ವಾಸ ಋಷಿಯು ಇಂದ್ರನಿಗೋಸ್ಕರ ಮಾರ್ಗದಲ್ಲಿ ಮಾಲಿಕೆಯನ್ನು ಕೊಟ್ಟನು. ಇಂದ್ರನು ಇದು ಅರ್ಕಪುಷ್ಪದ ಮಾಲಿಕೆಯು ಎನ್ನುವ ಉದಾಸೀನಬುದ್ಧಿಯಿಂದ ಐರಾವತದ ಕುಂಭಸ್ಥಳದಲ್ಲಿಟ್ಟು ಹೋಗುತ್ತಿರಲು ಭೂಮಿಯಲ್ಲಿ ಬಿದ್ದಿರತಕ್ಕ ಮಾಲಿಕೆಯನ್ನು ನೋಡಿ ದುರ್ವಾಸನು ಶಾಪಕೊಟ್ಟನು. (2)**'ಆದಾಯಾಮರರಾಜಾಯ ಚಿಕ್ಷೇಪೋನ್ಮತ್ತವನ್ಮುನಿಃ । ಗೃಹೀತ್ವಾಮರರಾಜೇನ ಸ್ರಗೈರಾವತಮೂರ್ಧನಿ । ನ್ಯಸ್ತಾ ರರಾಜ ಕೈಲಾಸಶಿಖರೇ ಜಾಹ್ನವೀ ಯಥಾ । ಮದಾಂಧಕಾರಿತಾಕ್ಷೋಽಸೌ ಗಂಧಾಕೃಷ್ಟೇನ ವಾರಣಃ । ಕರೇಣಾಘ್ರಾಯ ಚಿಕ್ಷೇಪ ತಾಂ ಸ್ರಜಂ ಧರಣೀತಲೇ । ತತಶ್ಚುಕ್ರೋಧ ಭಗವಾನ್ ದುರ್ವಾಸಮುನಿಸತ್ತಮಃ'** । ದುರ್ವಾಸಋಷಿಯು ದೇವೇಂದ್ರನಿಗೋಸ್ಕರ ಮಾಲಿಕೆಯನ್ನು ಕೊಟ್ಟನು. ದೇವೇಂದ್ರನು ಆ ಮಾಲಿಕೆಯನ್ನು ಐರಾವತದ ಶಿರಸ್ಸಿನಲ್ಲಿ ಇಟ್ಟನು. ಆ

ಮಾಲಿಕೆಯು ಕೈಲಾಸದಲ್ಲಿ ಭಾಗೀರಥಿಯಂತೆ ಶೋಭಿಸಿತು. ಐರಾವತವು ಮದಾಂಧಕಾರದಿಂದ ಶುಂಡಾದಂಡದಿಂದ ಪರಿಮಳವನ್ನು ಸ್ವೀಕರಿಸಿ ಆ ಮಾಲಿಕೆಯನ್ನು ಭೂಮಿಯಲ್ಲಿ ಹಾಕಿತು. ಆಮೇಲೆ ದುರ್ವಾಸಋಷಿಯು ಕೋಪಗೊಂಡನು. ಇತ್ಯಾದಿ ವಿಷ್ಣುಪುರಾಣದಲ್ಲಿ ಹೇಳಿದ ಕಥೆಯನ್ನು ಇಟ್ಟುಕೊಳ್ಳಬೇಕು ॥ ೪ ॥

ಮೂ ॥ ತ್ವದಾಜ್ಞಯಾ ಬಲಿನಾ ಸಂದಧಾನಾ
ವರಾದ್ಗಿರೀಶಸ್ಯ ಪರೈರಚಾಲ್ಯಂ ॥
ಬೃಂದಾರಕಾ ಮಂದರಮೇತ್ಯ ಬಾಹುಭಿ-
ರ್ನಶೇಕುರುದ್ಧರ್ತುಮಿಮೇ ಸಮೇತಾಃ ॥ ೫ ॥

ಅ ॥ (ಸಮುದ್ರಮಥನಕ್ಕಾಗಿ ಕರ್ಮದೇವತೆಯಾದ ಬಲಿಯಿಂದ ಸಂಧಿಯು ಮಾಡಿಕೊಳ್ಳತಕ್ಕದು. ಈಪ್ರಕಾರವಾದ) ನಿನ್ನ ಆಜ್ಞೆಯಿಂದ ಕರ್ಮದೇವತೆಯಾದ ಬಲಿ (ಬಲಿನಾಮಕನಾದ ಅಸುರನಿಂದ ಅಲ್ಲ) ಯಿಂದ ಸಂಧಿಯನ್ನು ಮಾಡತಕ್ಕ ಈ ದೇವತೆಗಳು (ದೈತ್ಯರಿಂದ) ಕೂಡಿದವರಾಗಿ ರುದ್ರದೇವರ ವರದೆಶೆಯಿಂದ ನೀನು ಹೊರತು ಬೇರೆಯವರಿಂದ ಹಂದಾಡಿಸಲಿಕ್ಕೆ ಅಶಕ್ಯವಾದ ಮಂದರಪರ್ವತವನ್ನು ಹೊಂದಿ ಬಾಹುಗಳಿಂದ ಭೂಮಿಯ ಸಕಾಶದೆಶೆಯಿಂದ ಮೇಲೆ ಎತ್ತಲಿಕ್ಕೆ ಸಮರ್ಥರಾಗಲಿಲ್ಲ ॥ ೫ ॥

ಮಂದರಪರ್ವತವು ಶೇಷನಲ್ಲಿ ಸ್ಥಾಪಿಸಲ್ಪಟ್ಟಿತು ಎನ್ನುವ ಗ್ರಂಥಾಂತರ ವಿರೋಧವನ್ನು ಪರಿಹರಿಸುತ್ತಾರೆ—

ಮೂ ॥ ತದಾ ತ್ವಯಾ ನಿತ್ಯಬಲತ್ವಹೇತುತೋ
ಯೋಽನಂತನಾಮಾ ಗರುಡಸ್ತದಂಸಕೇ ॥
ಉತ್ಪಾಟ್ಯ ಚೈಕೇನ ಕರೇಣ ಮಂದರೋ
ನಿಧಾಪಿತಸ್ತಂ ಸ ಸಹ ತ್ವಯಾವಹತ್ ॥ ೬ ॥

ಅ ॥ ಆಗ ನಿನ್ನಿಂದ ನಿತ್ಯದಲ್ಲಿಯೂ ಬಲವತ್ವರೂಪವಾದ ಹೇತುವಿನದೆಶೆಯಿಂದ ಯಾವಾತನು ಅನಂತನೆಂದು ಹೆಸರುಳ್ಳ ಗರುಡನೋ ಅವನ ಭುಜಶಿರಸ್ಸಿನಲ್ಲಿ ಒಂದೇ ಕೈಯಿಂದ ಕಿತ್ತು ಮಂದರಪರ್ವತವು ಸ್ಥಾಪಿಸಲ್ಪಟ್ಟಿತು. ಆ ಗರುಡನು ನಿನ್ನಿಂದ ಕೂಡಿಕೊಂಡು ಆ ಮಂದರ ಪರ್ವತವನ್ನು ಹೊತ್ತುಕೊಂಡನು.

ವಿಶೇಷಾಂಶ— (1) 'ಅನಂತೋಽಥೋ ಮಂದರಸ್ತು ಯದಾ ವೈವಸ್ವತಾಂತರೇ ।
ಅಮೃತಾರ್ಥಂ ಸುಪರ್ಣೋಽಥೋ ಚಾಕ್ಷುಷಸ್ಯಾಂತರೇ ಮನೋಃ' ॥ ಎನ್ನುವ ಬ್ರಹ್ಮಾಂಡಪುರಾಣ ವಚನವಿರೋಧವು, 'ನಿತ್ಯಬಲತ್ವಹೇತುತೋ ಯೋಽನಂತನಾಮಾ ಗರುಡಃ' ಎನ್ನುವುದರಿಂದ ಪರಿಹೃತವಾಯಿತು. (2) 'ತತಸ್ತೇ ಮಂದರಗಿರಿಮೋಜ-ಸೋತ್ಪಾಟ್ಯ ದುರ್ಮದಾಃ' ಆ ಮೇಲೆ ದುಷ್ಟವಾದ ಮದವುಳ್ಳ ಆ ದೇವಾಸುರರು ಸಾಮರ್ಥ್ಯದಿಂದ ಮಂದರಪರ್ವತವನ್ನು ಕಿತ್ತರು ಎನ್ನುವ ಭಾಗವತೋಕ್ತಿಯಿಂದ ವಿರೋಧವೆಂದು ಹೇಳಕೂಡದು. ಶ್ರೀ ಹರಿಯು ಮಾರ್ಗದ ಮಧ್ಯದಲ್ಲಿ ತನ್ನ ವೀರ್ಯವನ್ನು ಪರೀಕ್ಷಿಸುವುದಕ್ಕಾಗಿ ಗರುಡನ ಭುಜಶಿರಸ್ಸಿನಲ್ಲಿರತಕ್ಕ ಮಂದರಪರ್ವತವನ್ನು ಗರುಡನ ಭುಜಶಿರಸ್ಸಿನ

ದೆಶೆಯಿಂದ ಕಿತ್ತು ಮೇಲೆ ಮಾಡಿರುವನು, ಎಂದೂ ಭಾಗವತದ ವಾಕ್ಯಕ್ಕೆ ಅರ್ಥವು. ಆದು ದರಿಂದಲೇ ಆಚಾರ್ಯರು 'ಸುರೈಃ ಸಹಾಸುರೈರನ್ನಮಿತಸ್ತದಂಸತಃ' ಎಂದು ಹೇಳಿರು ವರು. ಇಲ್ಲವಾದರೆ ಪರ್ವತದ ಭಾರವನ್ನು ಹೊರಲಿಕ್ಕೂ ಸಾಮರ್ಥ್ಯವಿಲ್ಲದಿರುವುದರಿಂದ ಚೂರ್ಣಿತವಾದ ಅಂಗಗಳುಳ್ಳ ದೇವಾಸುರರಿಗೆ ಭೂಮಿ ಮತ್ತು ಮೇರುಪರ್ವತ ಇವುಗಳ ಮಧ್ಯ ದಲ್ಲಿ ಕೀಲಾಗಿ ಖಚಿತವಾದ ಮಂದರಪರ್ವತವನ್ನು ಕೀಳುವುದು ಅನಂತಾನಂತ ಬಲವುಳ್ಳ ಶ್ರೀ ಹರಿಯನ್ನು ಹೊರತು ಶಕ್ತ್ಯಿಯು ಹೇಗೆ ಬರುವುದು? ಏವಂಚ ಪ್ರಥಮತಃ ನಿರವಧಿಕ ಬಲವುಳ್ಳ ಶ್ರೀ ಹರಿಯೇ ಮಂದರಪರ್ವತವನ್ನು ಕಿತ್ತಿರುವನು. ಆದುದರಿಂದಲೇ ಆಚಾರ್ಯರು 'ನಿತ್ಯ ಬಲತ್ವಹೇತುತಃ' ಎಂದು ಹೇಳಿರುವರು. ಎರಡನೇ ಆವರ್ತಿ ಗರುಡನ ಅಂಶದೆಶೆಯಿಂದ ಕಿತ್ತದ್ದು ಯಾವುದೋ ಅದನ್ನೇ ಅಸುರರು ಮಾಡಿರುವರು. ಶ್ರೀ ಹರಿಯಾದರೂ ಆ ಅಸುರರ ಮದವನ್ನು ಪರಿಹರಿಸುವುದಕ್ಕಾಗಿ ಗರುಡಾರೂಢನಾಗಿ ಸುಮ್ಮನೇ ಕುಳಿತನು. ಆದುದರಿಂದಲೇ ಭಾಗವತದಲ್ಲಿ 'ವಿಜ್ಞಾಯ ಭಗವಾಂಸ್ತತ್ರ ಬಭೂವ ಗರುಡಧ್ವಜಃ' ಎಂದು ಹೇಳಿರುವರು. ಮಧ್ಯದಲ್ಲಿ ಬಂದದ್ದಲ್ಲವೆಂದು ತಿಳಿಯತಕ್ಕದು. ಮೊದಲು ಸುಮ್ಮನೇ ಆದನು. ಆ ಮೇಲೆ ವಿಶೇಷವಾಗಿ ದಯಾಯುಳ್ಳವನಾದನು. ಹೀಗೆಯೇ ಭಾಗವತಾದಿಗಳಿಗೂ ಅರ್ಥವನ್ನು ಮಾಡ ಬೇಕು. ॥ ೬ ॥

ಮೂ ॥ ಪುನಃ ಪರೀಕ್ಷದ್ಭಿರಸೌ ಗಿರಿಃ ಸುರೈಃ
ಸಹಾಸುರೈರುನ್ನಮಿತಸ್ತದಂಸತಃ
ನ್ಯಚೂರ್ಣಯತ್ತಾನಖಿಲಾನ್ಸ್ಸನಶ್ಚ ತೇ
ತ್ವದೀಕ್ಷಯಾ ಪೂರ್ವವದುತ್ಥಿತಾಃ ಪ್ರಭೋ ॥ ೭ ॥

ಅ ॥ ಗರುಡನಲ್ಲಿ ಮಂದರಪರ್ವತವನ್ನು ಸ್ಥಾಪಿಸಿದ ಮೇಲೆ (ತಮಗೆ ಮಂದರಪರ್ವತ ವನ್ನು ಎತ್ತಲಿಕ್ಕೆ ಸಾಧ್ಯವೋ? ಅಸಾಧ್ಯವೋ? ಎಂದು) ಪರೀಕ್ಷೆಯನ್ನು ಮಾಡತಕ್ಕ ದೇವತೆ ಗಳಿಂದ ಅಸುರರಿಂದ ಕೂಡಿಕೊಂಡು ಆ ಗರುಡನ ಭುಜ-ಶಿರಸ್ಸಿನದೆಶೆಯಿಂದ ಎತ್ತಲ್ಪಟ್ಟ ಈ ಮಂದರಪರ್ವತವು (ಬಿದ್ದದ್ದಾಗಿ) ಆ ಎಲ್ಲಾ ದೇವಾಸುರರನ್ನೂ ಪುಡಿಮಾಡಿತು. ಎಲೋ ಸರ್ವ ಸಮರ್ಥನೇ! ಆ ದೇವಾಸುರರು ನಿನ್ನ ಕೃಪಾವಲೋಕನದಿಂದ ಮೊದಲು ಹೇಗೆ ದೃಢವಾದ ಅವಯವವುಳ್ಳವರು ಆಗಿರುತ್ತಿದ್ದರೋ ಹಾಗೆಯೇ ದೃಢಾವಯವವುಳ್ಳವರಾಗಿಯೇ ಎದ್ದು ನಿಂತರು ॥ ೭ ॥

ಮೂ ॥ ಪುನಶ್ಚ ವಾಮೇನ ಕರೇಣ ನೀಶ್ವರೇ
ನಿಧಾಯ ತಂ ಸ್ಕಂಧಗತಸ್ತ್ವಮಸ್ಯ ॥
ಅಗಾಃ ಪಯೋಬ್ಧಿಂ ಸಹಿತಃ ಸುರಾಸುರೈ-
ರ್ನಿಧಾ್ಯ ಚ ತೇನಬ್ಧಿಮಥಾಪ್ಯಮಥ್ನಾಃ ॥ ೮ ॥

ಅ ॥ ಮತ್ತು ಕೂಡ ಈ ಗರುಡನ ಭುಜ-ಶಿರಸ್ಸಿನಲ್ಲಿರುತ್ತಿದ್ದ ನೀನು ಆ ಮಂದರಪರ್ವತ ವನ್ನು ಎಡಗೈಯಿಂದ ಹಕ್ಕಿಗಳಿಗೆ ಅಧಿಪತಿಯಾದ ಗರುಡನಲ್ಲಿ ಇಟ್ಟು, ದೇವಾಸುರರಿಂದ ಕೂಡಿ ದವನಾಗಿ, ಕ್ಷೀರಸಮುದ್ರವನ್ನು ಕುರಿತು ಹೋಗಿರುತ್ತಿ, ಮತ್ತೂ ಕೂಡ ಆ ಮಥನರೂಪವಾದ

ಮಂದರಪರ್ವತದಿಂದ ದೇವಾಸುರರಿಂದ ಕೂಡಿದವನಾಗಿಯೇ ಕ್ಷೀರಸಮುದ್ರವನ್ನೂ ಕೂಡ ಮಥನಮಾಡಿರುತ್ತಿ (ಅಪಿ ) ನಿರವಧಿಕ ಸಾಮರ್ಥ್ಯವುಳ್ಳ ಶ್ರೀ ಹರಿಗೆ ದೇವಾಸುರರ ಸಹಾಯವು ಅವಶ್ಯಕವು ಎನ್ನುವುದು ಅತಿನಿಂದ್ಯವು ॥ ೮ ॥

ಮೂ ॥ ಕೃತಶ್ಚ ಕದ್ರೋ(ದ್ವಾ)ಸ್ತನಯೋಽತ್ರ ವಾಸುಕಿ-
ರ್ನೇತ್ರಂ ತ್ವಯಾ ಕಶ್ಯಪಜಃ ಸ ನಾಗರಾಟ್ ॥
ಮಮಂಥುರಬ್ಧಿಂ ಸಹಿತಾಸ್ತ್ವಯಾ ಸುರಾಃ
ಸಹಾಸುರಾ ದಿವ್ಯಪಯೋಘೃತಾಧಿಕಂ ॥ ೯ ॥

ಅ ॥ ಈ ಸಮುದ್ರಮಥನದಲ್ಲಿ ಕಶ್ಯಪಋಷಿಯಿಂದ ಹುಟ್ಟಿದ ಕದ್ರೂನಾಮಕಳಾದ ಕಶ್ಯಪನ ಹೆಂಡತಿಯಲ್ಲಿ ಜನಿಸಿದ್ದ, ಸರ್ಪರಲ್ಲಿ ವಿಶೇಷವಾಗಿ ಶೋಭಿಸಿಕೊಂಡಿರುವ (ಅಂದರೆ ಅಪ ಕುಲ ಸರ್ಪಶ್ರೇಷ್ಠಗಳಲ್ಲಿ ಇವನೂ ಕೂಡ ಒಬ್ಬನು ಸರ್ಪಶ್ರೇಷ್ಠನು) (ಯಾವ) ವಾಸುಕಿಯೆಂದು ಪ್ರಸಿದ್ಧನಾದವನೋ, ನಿನ್ನಿಂದ ಆತನು ಈ ಮಥನದಲ್ಲಿ ಅತ್ರಿತ್ರ ಮಂಥಾನವನ್ನು ಒಯ್ಯುವುದ ರಿಂದ ನೇತ್ರರೂಪವಾದ ರಜ್ಜುವಾಗಿ ಮಾಡಲ್ಪಟ್ಟನು. ಅಸುರರಿಂದ ಸಹಿತರಾದ ದೇವತೆಗಳು ನಿನ್ನಿಂದ ಸಹಿತರಾದವರಾಗಿ ದಿವ್ಯಗಳಾದ (ನಿರ್ವಿಕಾರಗಳಾದ) ಕ್ಷೀರರಾಜ್ಯಗಳಿಂದ ಶ್ರೇಷ್ಠವಾದ ಆ ಕ್ಷೀರ ಸಮುದ್ರವನ್ನು ಅಥವಾ ದಿವ್ಯವಾದ ಕ್ಷೀರದಲ್ಲಿ ಹೆಚ್ಚು ಘೃತವುಳ್ಳ ಕ್ಷೀರಸಮುದ್ರವನ್ನು ಮಥನ ಮಾಡಿದರು ॥ ೯ ॥

ಮೂ ॥ ನೈಚ್ಛಂತ ಪುಚ್ಛಂ ದಿತಿಜಾ ಅಮಂಗಲಂ
ತದಿತ್ಯಥಾಗ್ರಂ ಜಗೃಹುರ್ವಿಷೋಲ್ಬಣಂ ॥
ಶ್ರಾಂತಾಸ್ತು (ಶ್ಚ) ತೇಽತೋ ವಿಬುಧಾಸ್ತು ಪುಚ್ಛಂ
ತ್ವಯಾ ಸಮೇತಾ ಜಗೃಹುಸ್ತ್ವದಾಶ್ರಯಾಃ ॥೧೦॥

ಅ ॥ ದೈತ್ಯರು ಸರ್ಪನಬಾಲವು ಅಮಂಗಲವು (ನೀಚಾಂಗವು) ಎಂದು ಸರ್ಪನ ಬಾಲ ವನ್ನು (ಹಿಡಿಯಲಿಕ್ಕೆ) ಇಚ್ಛಿಸಲಿಲ್ಲ. ಮತ್ತೆ ಉತ್ತಮಾಂಗವಾದ ವಿಷದಿಂದ ಕ್ರೂರವಾದ (ಸಹಿಸ ಲಶಕ್ಯವಾದ) ಮುಖವನ್ನು ಹಿಡಿದುಕೊಂಡರು. ಆ ದೈತ್ಯರಾದರೂ ಅತಿಶಯವಾಗಿ ಶಾಂತ ರಾದರು. ಆ ಮೇಲೆ ನಿನ್ನಿಂದ ಸಹಿತರಾದ ನೀನೇ ಆಶ್ರಯನಾಗಿವುಳ್ಳ (ತು )ಬುದ್ಧಿವಿಶೇಷವುಳ್ಳ ದೇವತೆಗಳಾದರೂ ಶೇಷನ ಬಾಲವನ್ನಾದರೂ ಹಿಡಿದುಕೊಂಡರು.

**ವಿಶೇಷಾಂಶ**— (1) ೯ನೇ ಶ್ಲೋಕದಲ್ಲಿ '**ತ್ವಯಾ ಸಹಿತಾಃ ಸಹಾಸುರಾಃ**' ಎನ್ನುವ ಸಾಮಾನ್ಯೋಕ್ತಿಯಿಂದ ದೇವತೆಗಳಿಗೂ, ಅಸುರರಿಗೂ ಇಬ್ಬರಿಗೂ ಶ್ರೀ ಹರಿಯ ಸಹಾಯವಿದೆ ಎನ್ನುವ ಭ್ರಾಂತಿಯನ್ನು ಹೋಗಲಾಡಿಸುವುದಕ್ಕಾಗಿ '**ತ್ವಯಾ ಸಮೇತಾಃ ವಿಬುಧಾಃ**' ಎಂದು ಹೇಳಿರುವರು ॥ ೧೦ ॥

ಮೂ ॥ ಅಥಾತಿಭಾರಾದವಿಶತ್ಸುಕಾಂಚನೋ
ಗಿರಿಃ ಸ ಪಾತಾಲಮಥ ತ್ವಮೇವ ॥
ತಂ ಕಚ್ಛಪಾತ್ಮಾ ತ್ವಭರಃ ಸ್ವಪೃಷ್ಠೇ
ಹ್ಯನನ್ಯಥಾರ್ಯಂ ಪುರುಲೀಲಯೈವ ॥೧೧॥

ಅ ॥ ಪುಚ್ಛವನ್ನೂ ಮುಖವನ್ನೂ ಗ್ರಹಣ ಮಾಡಿದ ಮೇಲೆ ಉತ್ತಮ ಸುವರ್ಣರೂಪವಾದ ಆ ಮಂದರಪರ್ವತವು ಸುವರ್ಣಾತ್ಮಕವಾಗಿರುವುದರಿಂದ ಬಹಳ ಭಾರವಿದ್ದಪ್ರಯುಕ್ತ ಪಾತಾಳ ಲೋಕವನ್ನು ಪ್ರವೇಶಮಾಡಿತು. ಆಮೇಲೆ ನೀನೇ ಕೂರ್ಮಸ್ವರೂಪವುಳ್ಳವನಾಗಿ ಇತರರಿಂದ ಧರಿಸಲಿಕ್ಕೆ ಅಶಕ್ಯವಾದ ಆ ಮಂದರಪರ್ವತವನ್ನು ಉತ್ಕೃಷ್ಟವಾದ ಕ್ರೀಡೆಯಿಂವಲೇ ತನ್ನ ಪೃಷ್ಠಭಾಗದಲ್ಲಿ ಧರಿಸಿರುತ್ತಿ ॥ ೧೧ ॥

ಮೂ ॥ ಉಪರ್ಯಧಶ್ಚಾತ್ಮನಿ ನೇತ್ರಗೋತ್ರಯೋ-
ಸ್ತ್ವಯಾ ಪರೇಣಾವಿಶತಾ ಸಮೇಧಿತಾಃ ॥
ಮಮಂಥುರಬ್ಧಿಂ ತರಸಾ ಮದೋತ್ಕಟಾಃ
ಸುರಾಸುರಾಃ ಕ್ಷೋಭಿತನಕ್ರಚಕ್ರಂ ॥ ೧೨ ॥

ಅ ॥ ಪರ್ವತದ ಮೇಲೆಯೂ, ಪರ್ವತದ ಕೆಳಗೂ, ನಮ್ಮಲ್ಲಿಯೂ, ಪರಿವರ್ತಕ ರಜ್ಜುವಿನಲ್ಲಿಯೂ, ಪರ್ವತದಲ್ಲಿಯೂ, ಪ್ರವೇಶಮಾಡಿರತಕ್ಕ ಸರ್ವೋತ್ತಮನಾದ ನಿನ್ನಿಂದ ಚೆನ್ನಾಗಿ ಬಲದಿಂದ ಅಭಿವೃದ್ಧರಾದ ಮದಭರಿತರಾದ ದೇವಾಸುರರು ವೇಗದಿಂದ ಕ್ಷೋಭವನ್ನು ಹೊಂದಿದ ಜಲಚರಗಳ ಸಮೂಹವುಳ್ಳ ಆ ಕ್ಷೀರ ಸಮುದ್ರವನ್ನು ಮಥನ ಮಾಡಿದರು.

ವಿಶೇಷಾಂಶ—(1) ಮಾವಿನಹಣ್ಣಿನ ಬೀಜದಂತೆಯೇ ಸಮುದ್ರಮಥನದ ಭರದಿಂದ ಪರ್ವತವು ಮೇಲಕ್ಕೆ ಹಾರಬಾರದು ಎನ್ನುವ ಉದ್ದೇಶದಿಂದ ಪರ್ವತದ ಮೇಲೆ ಶ್ರೀ ಹರಿಯು ಇರುತ್ತಿದ್ದನು. (2) ಜೂರ್ಣೀಭಾವವನ್ನು ಪರಿಹರಿಸುವುದಕ್ಕಾಗಿ ಪರ್ವತದಲ್ಲಿಯೂ ಪ್ರವೇಶ ಮಾಡಿರುವನು ॥ ೧೨ ॥

ಮೂ ॥ ಶ್ರಾಂತೇಷು ತೇಷ್ವೇಕ ಉರುಕ್ರಮಸ್ತ್ವಂ (ತ್ವಂ)
ಸುಧಾರಸಾಪ್ತ್ಯೈ ಮುದಿತೋ ಹ್ಯಮಂಥ್ನಾಃ ॥
ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ
ತ್ವದಾಜ್ಞಯಾ ವಾಯುರಧಾತ್ಕರೇ ನಿಜೇ ॥ ೧೩ ॥

ಅ ॥ ಆ ದೇವಾಸುರರು ಬಳಲುವಿಕೆಯನ್ನು ಹೊಂದುತ್ತಿರಲು ಉತ್ಕೃಷ್ಟವಾದ ಪರಾಕ್ರಮವುಳ್ಳ ಶ್ರೀ ಹರಿಯೇ ಮಹಾಹರ್ಷದಿಂದ ಕೂಡಿರುವ ನೀನು ಒಬ್ಬನೇ ಶ್ರೇಷ್ಠವಾದ ಅಮೃತದ ಪ್ರಾಪ್ತಿಗೋಸ್ಕರ (ಅಂದರೆ ದೇವತೆಗಳಿಗೆ ಅಮೃತದ ಪ್ರಾಪ್ತಿಗೋಸ್ಕರವೇ) (ಕ್ಷೀರ ಸಮುದ್ರವನ್ನು) ಮಥನಮಾಡಿರುತ್ತಿ. (ಹಿ=) '(ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ)' ಇತ್ಯಾದಿಶ್ರುತಿಗಳಲ್ಲಿ ಹೇಳಿದಪ್ರಕಾರ ಶ್ರೀ ಹರಿಗೆ ಇತರರ ಸಹಾಯಾಪೇಕ್ಷೆಯು ಇಲ್ಲವೆನ್ನುವುದು ಪ್ರಸಿದ್ಧವೆಂದು ಸೂಚಿತವಾಯಿತು. ಆಗ ಜಗತ್ತನ್ನೇ ನಾಶಮಾಡತಕ್ಕ ವಿಷವು ಹುಟ್ಟಿತು. ಆದನ್ನು ನಿನ್ನ ಆಜ್ಞಾನುಸಾರವಾಗಿಯೇ ವಾಯುದೇವರು ತನ್ನ ಕೈಯಲ್ಲಿ ಧರಿಸಿದರು ॥೧೩॥

ಮೂ ॥ ಕಲೇಃ ಸ್ವರೂಪಂ ತದತೀವ ದುಸ್ಸಹಂ
ವರಾದ್ವಿಧಾತುಃ ಸಕಲೈಶ್ಚ ದುಃಸ್ಪೃಶಂ ॥
ಕರೇ ವಿಮಥ್ಯಾಸ್ತಬಲಂ ವಿಧಾಯ
ದದೌ ಸ ಕಿಂಚಿದ್ಗಿರಿಶಾಯ ವಾಯುಃ ॥ ೧೪ ॥

ಅ ॥ ಆ ವಿಷವು ಸಾಕ್ಷಾತ್ಕಲಿಯ ಸ್ವರೂಪವು. (ಅಂದರೆ ಕಲಿಯು ತಾನೇ ವಿಷರೂಪದಿಂದ ಹುಟ್ಟಿರುವನು. ಅಥವಾ ಕಲಿಯಿಂದ ಅಭಿಮನ್ಯಮಾನವಾದ ಪ್ರಯುಕ್ತ 'ಕಲೇಃ ಸ್ವರೂಪಂ' ಎಂದು ಹೇಳಿರುವರು.) ಬ್ರಹ್ಮನ ವರದೆಶೆಯಿಂದ (ಅಂದರೆ ಬ್ರಹ್ಮನ ಸಕಾಶದೆಶೆಯಿಂದ ಕಲಿಯಿಂದ ಹೊಂದಲ್ಪಟ್ಟ ವರದ ಸಾಮರ್ಥ್ಯದೆಶೆಯಿಂದ) ಆ ವಿಷವು ಅತ್ಯಂತವಾಗಿ ಸಹಿಸ ಲಶಕ್ಯವಾದುದು. ಎಲ್ಲರಿಂದಲೂ ಕೂಡ ಮುಟ್ಟಲಿಕ್ಕೆ ಅಶಕ್ಯವಾದುದು. ಆ ವಿಷವನ್ನು ಆ ವಾಯುದೇವರು ತನ್ನ ಕೈಯಲ್ಲಿ ಚೆನ್ನಾಗಿ ಮರ್ದಿಸಿ ಹೋಗಲ್ಪಟ್ಟ ಸಾರವುಳ್ಳದ್ದನ್ನಾಗಿ ಮಾಡಿ ಸ್ವಲ್ಪ ವಿಷವನ್ನು ರುದ್ರನಿಗೋಸ್ಕರ ಕೊಟ್ಟನು ॥ ೧೪ ॥

ಮೂ ॥ ಸ ತತ್ಪಿಬನ್ಕಂಠಗತೇನ ತೇನ
ನಿಪಾತಿತೋ ಮೂರ್ಚ್ಛಿತ ಆಸ ರುದ್ರಃ ॥
ಹರೇಃ ಕರಸ್ಪರ್ಶಬಲಾತ್ಸ ಸಂಜ್ಞಾ-
ಮವಾಪ ನೀಲೋಽತ್ರಸ್ಯ ಗಲಸ್ತದಾಸೀತ್ ॥ ೧೫ ॥

ಅ ॥ ಆ ವಿಷವನ್ನು ಪಾನಮಾಡಿದ ರುದ್ರನು ಕಂಠದಲ್ಲಿರತಕ್ಕ ವಿಷದಿಂದ (ಅಂದರೆ ಅಲ್ಪವಾಗಿರುವುದರಿಂದ ಕಂಠದಲ್ಲಿ ಸಂಬದ್ಧವಾದುದಾಗಿ ಕಂಠದಲ್ಲಿಯೇ ಇದ್ದು ಉದರವನ್ನು ಹೊಂದಲಿಲ್ಲ ಅಂತಹ ವಿಷದಿಂದ) ಬದ್ಧವನಾಗಿ ಮೂರ್ಚ್ಛಿತನಾದನು. ಆ ರುದ್ರನು ಶ್ರೀ ಹರಿಯ ಹಸ್ತದ ಸ್ಪರ್ಶದ ಬಲದಿಂದ ಸಂಜ್ಞೆಯನ್ನು ಹೊಂದಿದನು. ವಿಷಪಾನ ಕಾಲದಲ್ಲಿ ಈ ರುದ್ರನ ಕಂಠವು ನೀಲವರ್ಣವಾಯಿತು. (ಆದುದರಿಂದಲೇ ರುದ್ರನಿಗೆ ನೀಲಕಂಠನೆಂಬ ಹೆಸರು) ॥ ೧೫ ॥

ಮೂ ॥ ಅಥ ತ್ವದಾಜ್ಞಾಂ ಪುರತೋ ನಿಧಾಯ
ನಿಧಾಯ ಪಾತ್ರೇ ತಪನೀಯರೂಪೇ ॥
ಸ್ವಯಂ ತ್ವನಿರ್ಮಥ್ಯ ಬಲೋಪಪನ್ನಂ
ಪಪೌ ಸ ವಾಯುಸ್ತದುತಾ(ಚಾ)ಸ್ಯ ಜೀರ್ಣಂ ॥ ೧೬ ॥

ಅ ॥ ಆ ಮೇಲೆ ಆ ವಾಯುದೇವರು, ನಿನ್ನ ಆಜ್ಞೆಯನ್ನು ಮುಂದೆ ಇಟ್ಟುಕೊಂಡು (ಅಂದರೆ—ಪುರಸ್ಕರಿಸಿಕೊಂಡು) ಸುವರ್ಣಾತ್ಮಕವಾದ ಭಾಜನದಲ್ಲಿ (ಕೈಯ್ಯಲ್ಲಿರತಕ್ಕ ವಿಷವನ್ನು) ಇಟ್ಟು, ತಾನಾದರೂ ಮರ್ದನ ಮಾಡದೇನೇ ಸಾರಯುಕ್ತವಾದ ಆ ವಿಷವನ್ನು ಪಾನಮಾಡಿದನು. ಆ ವಿಷವೂ ಕೂಡ ಈ ವಾಯುದೇವರಿಗೆ ಜೀರ್ಣವಾಯಿತು.

ವಿಶೇಷಾಂಶ— (1) ತು ಶಬ್ದದಿಂದ ವಾಯುದೇವರಿಗೆ ಶಕ್ತಿವಿಶೇಷವಿದೆ ಎಂದು ಸೂಚಿತವಾಯಿತು. ತಥಾ ಚ ಶ್ರುತಿಯು (೧) 'ವಾಯುರಸ್ಮಾ ಉಪಾಮಂಥತ್ಪಿನಷ್ಟಿಸ್ಮಾ ಕುನನ್ನಮಾ । ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ' ಕೇಶೀ= ಪ್ರಶಸ್ತ ಕೇಶವುಳ್ಳ ಮತ್ತು ಸುಖರೂಪಿಯಾದ ಶ್ರೀ ನಾರಾಯಣಾಖ್ಯ ಈಶನುಳ್ಳ, ಕುನನ್ನಮಾ= ಕುತ್ಸಿತರಾದ ಕಲ್ಯಾದಿಗಳನ್ನು ವಿಶೇಷವಾಗಿ ಅಂಧಂತಮಸ್ಸಿನಲ್ಲಿ ಬೀಳಿಸುವ, ವಾಯುಃ= ವಾಯುದೇವರು, ವಿಷಸ್ಯ ಪಾತ್ರೇಣ=ಸುವರ್ಣಪಾತ್ರದಿಂದ ಧರಿಸಲ್ಪಟ್ಟದ್ದು, ಯತ್=

ಯಾವುದು ವಿಷವನ್ನು, ರುದ್ರೇಣ ಸಹ=ರುದ್ರನಿಂದ ಕೂಡಿಕೊಂಡು, ಅಪಿಬತ್=ಪಾನಮಾಡಿರುವರೋ, ತತ್ ಆ ವಿಷವನ್ನು, ಅಸ್ಮೈ=ಈ ರುದ್ರನಿಗೋಸ್ಕರ, ಉಪಾಮಂಥತ್=ಉಪಪನ್ನವಾದುದು ಪಾನಾರ್ಹವು ಹೇಗೆ ಆಗುತ್ತದೋ, ಹಾಗೆ ಮಥನಮಾಡಿದರು. (೨) ಅಸ್ಮೈ ಉಪಾಮಂಥತ್=ಎಂದು ಹೇಳಿದರಿಂದ ತಾನು ಮಥನ ಮಾಡದೇನೇ ಪಾನಮಾಡಿದರೆಂದು ಉಕ್ತವಾಯಿತು. (೩) ಪಾತ್ರದಲ್ಲಿಯೇ ಮಥನವಾಗಿದ್ದರೆ ತನಗೂ ಕೂಡ ಮಥಿತವಾದ ವಿಷಪಾನವು ಆಗಬೇಕಾಗುವುದು. ಆದಾದರೂ ಶ್ರುತಿವಿರುದ್ಧವು. ಆದಕಾರಣ ಪಾತ್ರದೆಶೆಯಿಂದ ಬೇರೆ ಕಡೆಯಲ್ಲಿಯೇ ಮಥನವು. ಆದುದರಿಂದಲೇ 'ಕರೇ ವಿನಿರ್ಮಥ್ಯ' ಎಂದು ಹೇಳಿರುವರು. (೪) 'ಅಸ್ತ್ರಬಲಂ ವಿಧಾಯ' ಎಂದು ಹೇಳಿದರಿಂದ ವಿಷದಲ್ಲಿರುತ್ತಿದ್ದ ಅತ್ಯುಗ್ರತನವು ದೂರೀಕೃತವಾಯಿತು. ಪಾನಕ್ಕೆ ಹೇಗೆ ಯೋಗ್ಯವಾಗುವುದೋ, ಹಾಗೆಯೇ ಮಾಡಿಕೊಟ್ಟಿರುವರು ಎಂದುಕ್ತವಾಯಿತು. (೫) ರುದ್ರನಿಂದ ಕೂಡಿಕೊಂಡು ವಾಯುದೇವರು ಪಾನಮಾಡಿದರು ಎಂದು ಹೇಳಿದರಿಂದ ವಾಯುದೇವರಿಗೇನೇ ಮುಖ್ಯಪಾತ್ರತ್ವವು. ರುದ್ರನಿಗಾದರೂ ಅಮುಖ್ಯಪಾತ್ರತ್ವವು ಎಂದು ಸಿಗುತ್ತದೆ. ಆದುದರಿಂದಲೇ 'ಕಿಂಚಿದ್ಗಿರೀಶಾಯ' ಎಂದು ಹೇಳಿರುವರು. (೬) ವಿಷಪಾನದಿಂದಲೂ ರುದ್ರನಿಗೆ ರೋದನವು ಆಯಿತು ಎಂದು ಸೂಚಿಸುವುದಕ್ಕಾಗಿ ರುದ್ರಪದವು. 'ಸೋರೋದೀತ್ ಯದರೋದೀತ್ ತದ್ರುದ್ರಸ್ಯ ರುದ್ರತ್ವಂ' ಎಂದು ರೋದನಕರ್ತೃತ್ವವೇ ರುದ್ರಪದಪ್ರವೃತ್ತಿನಿಮಿತ್ತವು. (೭) ಸುಖರೂಪಿಯಾದ ಶ್ರೀ ನಾರಾಯಣನನ್ನು ತನ್ನ ಹೃದಯದಲ್ಲಿ ಧರಿಸಿಕೊಂಡಿರುವುದರಿಂದಲೂ ಕುನನ್ನಾಮವಿದ್ದುದರಿಂದಲೂ ವಾಯುದೇವರಿಗಾದರೂ ವಿಷಪಾನದಿಂದ ದುಃಖಲೇಶವೂ ಆಗಲಿಲ್ಲವೆಂದು ಸೂಚಿತವಾಯಿತು. ಆದುದರಿಂದಲೇ ಕೇಶೀ ಎಂದೂ, ಕುನನ್ನಮಾ ಎಂದೂ ಹೆಸರು. (೮) ಗಮನಾದಿ ಸಾಮರ್ಥ್ಯಕ್ಕೆ ಸ್ವಲ್ಪವೂ ಹಾನಿಯಿಲ್ಲವೆಂದು ಸೂಚಿಸುವುದಕ್ಕಾಗಿ ವಾಯುಃ ಎಂದು ಹೇಳಿರುವರು. (೯) 'ತದುತಾಸ್ಯ ಜೀರ್ಣಂ' ಎಂದು ಗೋಪ್ಯವಾದಪ್ರಯುಕ್ತವೇ ಈ ಅರ್ಥವು ಸಿಗುತ್ತದೆ. ಪುರಾಣಾದಿಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಡಲಿಲ್ಲ. ಸರ್ವಜ್ಞರಾದಪ್ರಯುಕ್ತ ದೇವತೆಗಳು ಶ್ರುತಿಯಲ್ಲಿ ಹೇಳಿದ ಸರ್ವವನ್ನೂ ಏಕೀಕರಿಸಿ ಸ್ತೋತ್ರಮಾಡಿದರು, ಎಂದು ಗ್ರಂಥಕಾರರ ಅಭಿಪ್ರಾಯವು ॥ ೧೭ ॥

ಮೂ ॥ ಅತ್ಯಲ್ಪಪಾನಾಚ್ಚ ಬಭೂವ ಶೂಲಾ
ಶಿವಸ್ಯ ಶೀರ್ಷ್ಣ್ಯಸ್ಯ (ಷ್ಣಶ್ಚ) ಕರಾವಶಿಷ್ಟಂ ॥
ಅಭೂತ್ಕಲಿಃ ಸರ್ವಜಗತ್ಸು ಪೂರ್ಣಂ
ಪೀತ್ವಾ ವಿಕಾರೋ ನ ಬಭೂವ ವಾಯೋಃ ॥ ೧೭ ॥

ಅ ॥ ಅತ್ಯಂತ ಅಲ್ಪವಾದ (ನಿರ್ವೀರ್ಯವಾದ) ವಿಷಪಾನದೆಶೆಯಿಂದಲೂ ರುದ್ರನ ತಲೆಯಲ್ಲಿ ವ್ಯಥೆಯು ಉಂಟಾಯಿತು. (ಆದುದರಿಂದಲೇ ರುದ್ರನು ಅಭಿಷೇಕ ಪ್ರಿಯನೂ, ಚಂದ್ರಶೇಖರನೂ ಕೂಡ ಆದನು)(ರುದ್ರನು ವಾಯುವಿನಿಂದ ಕೊಡಲ್ಪಟ್ಟ ನಿರ್ವೀರ್ಯವಾದ ಅಲ್ಪವಾದ ವಿಷವನ್ನೂ ಕೂಡ ಪೂರ್ಣವಾಗಿ ಪಾನಮಾಡಲಿಲ್ಲವೆನ್ನುತ್ತಾರೆ.) ಈ ರುದ್ರನ ಕೈಯಿಂದ ಅವಶಿಷ್ಟವಾದ (ಅತ್ಯಂತವಾಗಿ ಅಲ್ಪವಾದ ಪಾನದಿಂದಲೇ ಮೂರ್ಛಿತನಾದ ರುದ್ರನ ಕೈಯಲ್ಲಿ ಉರ್ವರಿತವಾದ) ವಿಷವು ಎಲ್ಲಾ ಜಗತ್ತುಗಳಲ್ಲಿ ಪೂರ್ಣವಾದುದಾಗಿ ಕಲಿಯಾದನು. (ಅಂದರೆ ಅಭಿಮಾನಿ ಅಭಿಮನ್ಯಮಾನಗಳಿಗೆ ಐಕ್ಯವ್ಯಪದೇಶವಿದ್ದಪ್ರಯುಕ್ತ ಕಲಿಯಿಂದ ಅಭಿಮನ್ಯಮಾನವಾದದ್ದು ಆಯಿತು.) (ವಿಷಸಾಮರ್ಥ್ಯವನ್ನು ಹೇಳಿ ವಾಯುದೇವರ ಸಾಮರ್ಥ್ಯವನ್ನು ತೋರಿಸುತ್ತಾರೆ) ಎಲ್ಲಾ ವಿಷವನ್ನು ಪಾನಮಾಡಿರತಕ್ಕ ವಾಯುದೇವರಿಗೆ ವಿಷವಿಕಾರವು ಆಗಲೇ ಇಲ್ಲ ॥ ೧೭ ॥

ವಿಷಾತ್ಮಕವಾದ ಕಲಿಗೆ ಎಲ್ಲಾ ಜಗತ್ತುಗಳಲ್ಲಿಯೂ ಪೂರ್ಣತ್ವವನ್ನು ಸ್ಪಷ್ಟೀಕರಿಸುತ್ತಾರೆ

ಮೂ ॥ ಕಲೇಃ ಶರೀರಾದಭವನ್ನುನಾಗಾಃ
ಸವೃಶ್ಚಿಕಾಃ ಶ್ವಾಪದಯಾತುಧಾನಾಃ ॥
ಅಥ ತ್ವಯಾಬ್ಧೌ ತು ವಿಮಥ್ಯಮಾನೇ
ಸುರಾಭವತ್ತಾಮಸುರಾ ಅವಾಪುಃ ॥ ೧೮ ॥

ಅ ॥ ಕಲಿಯ ಶರೀರದೆಶೆಯಿಂದ (ಅಂದರೆ ಕಲಿಸ್ವರೂಪವಾದ ವಿಷದೆಶೆಯಿಂದ ಅಥವಾ ಕಲ್ಯಭಿಮನ್ಯಮಾನವಾದ ವಿಷದೆಶೆಯಿಂದ) ಕುತ್ಸಿತ ಸರ್ಪರೂ, ಚೇಳುಗಳಿಂದ ಸಹಿತಗಳಾದವು ಗಳು, ವೃಕ್ಷ, ವ್ಯಾಘ್ರ ಮೊದಲಾದವುಗಳು, ರಾಕ್ಷಸರೂ ಕೂಡ ಆದರು. ವಿಷವು ಹುಟ್ಟಿದ ಮೇಲೆ ನಿನ್ನಿಂದಲಾದರೂ ಸಮುದ್ರವು ಮಥಿಸಿಕೊಳ್ಳಲ್ಪಡುತ್ತಿರಲು ಮದ್ಯವು ಹುಟ್ಟಿತು, ಆ ಮದ್ಯವನ್ನು ಅಸುರರು ಹೊಂದಿದರು ॥ ೧೮ ॥

ಮೂ ॥ ಉಚ್ಚೈಃಶ್ರವಾ ನಾಮ ತುರಂಗಮೋಽಭೂ-
ತ್ಸ(ಥ ಕ)ರೀ ತಥೈರಾವತನಾಮಧೇಯಃ ॥
ಅನ್ಯೇ ಚ ದಿಕ್ಪಾಲಗಜಾ ಬಭೂವು-
ರ್ವರಂ ತಥೈವಾಪ್ಸರಸಾಂ ಸಹಸ್ರಂ ॥ ೧೯ ॥

ಅ ॥ 'ಉಚ್ಚೈಃಶ್ರವಾಃ' ಎಂದು ಪ್ರಸಿದ್ಧವಾದ ಇಂದ್ರನ ಕುದುರೆಯು ಉಂಟಾಯಿತು. ಹಾಗೆಯೇ ಐರಾವತ ಎಂದು ಹೆಸರುಳ್ಳ ಇಂದ್ರನ ಆನೆಯು ಉಂಟಾಯಿತು. ಹಾಗೆಯೇ ಐರಾವತದೆಶೆಯಿಂದ ಇತರಗಳಾದ ದಿಕ್ಪಾಲಕರ ಆನೆಗಳೂ ಹುಟ್ಟಿದವು. ಹಾಗೆಯೇ ಉರ್ವಶೀ ಮೊದಲಾದ ಅಪ್ಸರಸ್ತ್ರೀಯರ ಸಹಸ್ರವೂ ಹುಟ್ಟಿತು. ॥ ೧೯ ॥

ಮೂ ॥ ತಥಾಯುಧಾನ್ಯಾಭರಣಾನಿ ಚೈವ
ದಿವೌಕಸಾಂ ಪಾರಿಜಾತಸ್ತರುಶ್ಚ ॥
ತಥೈವ ಸಾಕ್ಷಾತ್ಸುರಭಿರ್ನಿಶೇಶೋ
ಬಭೂವ ತತ್ಕೌಸ್ತುಭಂ ಲೋಕಸಾರಂ ॥ ೨೦ ॥

ಅ ॥ ಹಾಗೆಯೇ ಆಯುಧಗಳೂ, ಆಭರಣಗಳೂ, ದೇವತೆಗಳ ಪಾರಿಜಾತಾಖ್ಯ ವೃಕ್ಷವೂ, ಹಾಗೆಯೇ ಮುಖ್ಯವಾದ ಕಾಮಧೇನುವೂ, ರಾತ್ರಿಗೆ ಅಧಿಪತಿಯಾದ ಚಂದ್ರನೂ, ಸರ್ವಲೋಕಗಳಲ್ಲಿ ಶ್ರೇಷ್ಠವಾದ ಪ್ರಸಿದ್ಧವಾದ ಕೌಸ್ತುಭಮಣಿಯೂ ಕೂಡ ಉಂಟಾಯಿತು ॥ ೨೦ ॥

ಮೂ ॥ ಅಥೇಂದಿರಾ ಯದ್ಯಪಿ ನಿತ್ಯದೇಹಾ
ಬಭೂವ ತತ್ರಾಪರಯಾ ಸ್ವತನ್ವಾ ॥
ತತೋ ಭವಾನ್ದಕ್ಷಿಣಬಾಹುನಾ ಸುಧಾ
ಕಮಂಡಲುಂ ಕಲಶಂ ಚಾಪರೇಣ ॥ ೨೧ ॥

ಅ ॥ ಆ ಮೇಲೆ ಯದ್ಯಪಿ ಲಕ್ಷ್ಮೀದೇವಿಯು ನಾಶರಹಿತವಾದ ಸ್ವರೂಪವುಳ್ಳವಳು. ಆದಾಗ್ಯೂ ಇತರವಾದ ತನ್ನ ಶರೀರದಿಂದ (ಅಂದರೆ ಎರಡನೇ ರೂಪದಿಂದ) ಆ ಕ್ಷೀರಸಮುದ್ರದಲ್ಲಿ ಆವಿರ್ಭೂತಳಾದಳು. ಆ ಮೇಲೆ ಇಂದ್ರನೀಲಮಣಿಯ ಕಾಂತಿಯಂತೆ ಕಾಂತಿಯುಳ್ಳ, ಧನ್ವಂತರಿರೂಪಿಯಾದ ಶ್ರೀ ಹರಿಯೆಂದು ಪ್ರಸಿದ್ಧನಾದ ನೀನು ಬಲ ಭುಜದಿಂದ (ಬಲಗೈಯಿಂದ) ಸುಧಾ ಕಮಂಡಲವನ್ನು (ಅಂದರೆ— ಅಮೃತದಿಂದ ಪೂರಿತವಾದ ಕಮಂಡಲವನ್ನು ಅಲ್ಲ. ಹಾಗಿದ್ದರೆ ದೈತ್ಯರು ಅದನ್ನು ಕೂಡ ಅಪಹರಿಸುತ್ತಿದ್ದರು. ಮತ್ತೆ ನೀರನ್ನು ಪರಿವೇಷಣ ಮಾಡತಕ್ಕ ಕಮಂಡಲವನ್ನು) ಎಡಭುಜದಿಂದ (ಎಡಕೈಯಿಂದ) ಸುಧಾ ಪೂರಿತವಾದ ಕಲಶವನ್ನು ಕೂಡ ಹಿಡಿದುಕೊಂಡು ಆ ಸಮುದ್ರದೇಶೆಯಿಂದ ಆವಿರ್ಭೂತನಾಗಿರುತ್ತಿ.

**ವಿಶೇಷಾಂಶ—** (1) ಪರಿವೇಷಣ ಪಾತ್ರವು ಸುಧಾ ಪಾತ್ರವಾಗಿರುವಾಗ ಕಲಶಕ್ಕೆ ಸುಧಾ ಪೂರ್ಣತ್ವವು ಸ್ವತ ಏವ ಸಿದ್ಧವಾಗಿದೆ, ಆದಕಾರಣ **'ಸುಧಾ ಕಲಶಂ'** ಎಂದು ಪ್ರತ್ಯೇಕ ಹೇಳಲಿಲ್ಲ (2) ಮತ್ತು **'ಸುಧಾಭರಂ ಕಲಶಂ'** ಅಮೃತದ ಭಾರವು ಎಲ್ಲಿದೆಯೋ ಅಂತಹ ಕಲಶವನ್ನು ಎಂದು ಮುಂದಿನ ಶ್ಲೋಕದಲ್ಲಿಯೇ ಹೇಳಿರುವರು (3) **'ಜ್ಞಾನಂ ಸುಧಾ ಕಲಶನೇವ ಚ ಸಂದದಾನಂ'** ಎಂದು ತಂತ್ರಸಾರದಲ್ಲಿ ಆಚಾರ್ಯರೇ ಹೇಳಿರುವರು ॥ ೨೧ ॥

**ಮೂ ॥** **ಪ್ರಗೃಹ್ಯ ತಸ್ಮಾನ್ನಿರಗಾತ್ಸಮುದ್ರಾ-**
**ದ್ಧನ್ವಂತರಿರ್ನಾಮ ಹರಿಸ್ಮಣಿದ್ಯುತಿಃ ||**
**ತತೋ ಭವದ್ಧಸ್ತಗತಂ ದಿತೇಃ ಸುತಾಃ**
**ಸುಧಾಭರಂ ಕಲಶಂ ಚಾಪಜಹ್ರುಃ ॥**
**ಮುಕ್ತಂ ತ್ವಯಾ ಶಕ್ತಿಮತಾಪಿ ದೈತ್ಯಾ-**
**ನ್ಸತ್ಯಚ್ಯುತಾನ್ಕಾರಯಿತುಂ (ಯತಾ) ವಧಾಯ ॥ ೨೨ ||**

ಅ ॥ ಆ ಮೇಲೆ ದೈತ್ಯರು ನಿನ್ನ ಕೈಯಲ್ಲಿರತಕ್ಕ ಅಮೃತದ ಭಾರವುಳ್ಳ (ಅಂದರೆ ಅಮೃತದಿಂದ ತುಂಬಿದ) ಶಕ್ತಿಯುಳ್ಳ ಧನ್ವಂತರಿ ರೂಪಿಯಾದ ನಿನ್ನಿಂದಲಾದರೂ. ದೈತ್ಯರನ್ನು ತಮ್ಮಿಂದ ಹೇಳಲ್ಪಟ್ಟ ವಾಕ್ಯದಿಂದ ರಹಿತರನ್ನಾಗಿ ಮಾಡಿಸುವುದಕ್ಕಾಗಿಯೂ, ಸಂಹರಿಸುವುದಕ್ಕಾಗಿಯೂ ಬಿಡಲ್ಪಟ್ಟ ಸುಧಾಪೂರಿತವಾದ ಕಲಶವನ್ನೇ ಅಪಹರಿಸಿದರು. (ಸುಧಾ ಕಮಂಡಲವನ್ನು ಅಪಹರಿಸಲಿಲ್ಲ.)

**ವಿಶೇಷಾಂಶ—** (1) **'ತೇಷಾಂ ಸತ್ಯಾಚ್ಚಾಲನಾರ್ಥಂ ಹರಿರ್ಧನ್ವಂತರಿರ್ವಿಭುಃ । ಸಮರ್ಥೋಽಪ್ಯಸುರಾಣಾಂ ತು ಸ್ವಹಸ್ತಾದಮುಚತ್ಸುಧಾಂ'** ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. (2) ಸಮುದ್ರಮಥನ ಕಾಲದಲ್ಲಿ ವೇದವು ಯಥಾ ಯೋಗ್ಯವಾಗಿ ಮಥನದಿಂದುಂಟಾದುದನ್ನು ಸ್ವೀಕರಿಸಬೇಕೆಂದು ಉಕ್ತವಾಗಿದೆ. ಅದಕ್ಕಾಗಿಯೇ ದೈತ್ಯರಿಗೆ ಯೋಗ್ಯವಾದ ಮದ್ಯವು ಲಬ್ಧವಾಗಿದೆ. ಅಯೋಗ್ಯವಾದ ಅಮೃತವನ್ನು ಅಪಹರಿಸಿದರಿಂದ ಸತ್ಯಚ್ಯುತರಾದರು. ॥ ೨೨ ॥

**ಮೂ ||** **ತತೋ ಭವಾನನುಪಮಮುತ್ತಮಂ ವಪು-**
**ರ್ಬಭೂವ ದಿವ್ಯಪ್ರಮದಾತ್ಮಕಂ ತ್ವರನ್ ॥**
**ಶ್ಯಾಮಂ ನಿತಂಬಾರ್ಪಿತರತ್ನಮೇಖಲಂ**
**ಜಾಂಬೂನದಾಭಾಂಬರಭೃತ್ಸುಮಧ್ಯಮಂ ॥ ೨೩ ॥**

ಅ ॥ ಆ ಮೇಲೆ ನೀನು ದಿವ್ಯವಾದ ಸ್ತ್ರೀಯ ಶರೀರವುಳ್ಳ, ಯೌವನ ಮಧ್ಯಸ್ಥವಾದ (ಅಂದರೆ—ಹದಿನಾರು ವರ್ಷವುಳ್ಳ) ಅಥವಾ ನೀಲವರ್ಣವಾದ, ಕಟಿಪ್ರದೇಶದಲ್ಲಿ ಸ್ಥಾಪಿತವಾದ ರತ್ನಗಳ ವಡ್ಯಾಣವುಳ್ಳ, ಸುವರ್ಣದ ಕಾಂತಿಯಂತೆ ಕಾಂತಿಯುಳ್ಳ, ಪೀತಾಂಬರವನ್ನು ಧರಿಸಿ ರತ್ನಕ್ಕೆ ಸಮೀಚೀನವಾದ ಮಧ್ಯಪ್ರದೇಶ (ಕಟಿಪ್ರದೇಶ) ವುಳ್ಳ, ಅಸದೃಶವಾದ ಲಕ್ಷ್ಮೀ ಸ್ವರೂಪದಿಂದಲೂ ಉತ್ತಮವಾದ ಶರೀರವುಳ್ಳವನಾಗಿರುತ್ತಿ. (ಅಂದರೆ—ನಾರಾಯಣೀಸ್ವರೂಪವುಳ್ಳವನಾಗಿರುತ್ತಿ.)

ವಿಶೇಷಾಂಶ— ಶ್ರೀ ವಿಷ್ಣುವಿಗೂ, ವಿಷ್ಣುವಿನ ಶರೀರಕ್ಕೂ ಅಭೇಧವನ್ನು ಸೂಚಿಸುವುದಕ್ಕಾಗಿ 'ಭವಾನುಪಮಮುತ್ತಮಂ ವಪುರ್ಬಭೂವ' ಎಂದು ಹೇಳಿರುವರು ॥ ೨೩ ॥

ಮೂ ॥ ಬೃಹನ್ನಿತಂಬಂ ಕಲಶೋಪಮಸ್ತನಂ
ಸತ್ಪುಂಡರೀಕಾಯತನೇತ್ರಮುಜ್ಜ್ವಲಂ ॥
ಸಮಸ್ತಸಾರಂ ಪರಿಪೂರ್ಣಸದ್ಗುಣಂ
ದೃಷ್ಟ್ವೈವ ತತ್ಸಂಮುಮುಹುಃ ಸುರಾರಯಃ ॥ ೨೪ ॥

ಅ ॥ ವಿಸ್ತೀರ್ಣವಾದ ಕಟಿಪಶ್ಚಾದ್ಭಾಗವುಳ್ಳದ್ದೂ, ಕಲಶಸದೃಶಗಳಾದ ಕುಚಗಳುಳ್ಳದ್ದೂ, ನಿರ್ದುಷ್ಟವಾದ ಕಮಲದಂತೆ ವಿಶಾಲಗಳಾದ ನಯನಗಳುಳ್ಳದ್ದೂ, ಪ್ರಕಾಶಮಾನವಾದುದೂ, ಸರ್ವವಸ್ತುಗಳಲ್ಲಿಯೂ ಶ್ರೇಷ್ಠವಾದುದೂ, ಪರಿಪೂರ್ಣಗಳಾದ, ನಿರ್ದುಷ್ಟಗಳಾದ ಗುಣಗಳುಳ್ಳದ್ದೂ, ಇಂತಹ ಆ ಶರೀರವನ್ನು ನೋಡಿದೊಡನೆಯೇ ದೈತ್ಯರು ಚೆನ್ನಾಗಿ ಮೋಹಪಟ್ಟರು ॥ ೨೪ ॥

ಮೂ ॥ ಪರಸ್ಪರಂ ತೇSಮೃತಹೇತುತೋSಖಿಲಾ
ವಿರುಧ್ಯಮಾನಾಃ ಪ್ರದದುಃಸ್ಮ ತೇ ಕರೇ ॥
ಸಮಂ ಸುಧಾಯಾಃ ಕಲಶಂ ವಿಭಜ್ಯ
ನಿಪಾಯಯಾಸ್ಮಾನಿತಿ ವಂಚಿತಾಸ್ತ್ವಯಾ ॥ ೨೫ ॥

ಅ ॥ ನಿನ್ನಿಂದ ಮೋಸಗೊಳಿಸಿಕೊಳ್ಳಲ್ಪಟ್ಟ ಆ ಎಲ್ಲಾ ದೈತರು ಅಮೃತನಿಮಿತ್ತವಾಗಿ ಪರಸ್ಪರವಾಗಿ ವಿರೋಧಿಸಿಕೊಳ್ಳಲ್ಪಟ್ಟವರಾಗಿ ಸಮ ಹೇಗೆ ಆದೀತೋ ಹಾಗೆ (ಅಮೃತವನ್ನು) ವಿಭಾಗಮಾಡಿ ನಮ್ಮನ್ನು ಚೆನ್ನಾಗಿ ಪಾನಮಾಡಿಸು. ಈ ಪ್ರಕಾರ (ಹೇಳಿ) ಅಮೃತದ ಕಲಶವನ್ನು ನಿನ್ನ ಕೈಯಲ್ಲಿ ಕೊಟ್ಟರು ॥ ೨೫ ॥

ಮೂ ॥ ಧರ್ಮಚ್ಛಲಂ ಪಾಪಜನೇಷು ಧರ್ಮ
ಇತಿ ತ್ವಯಾ ಜ್ಞಾಪಯಿತುಂ ತದೋಕ್ತಂ ॥
ಯದ್ಯತ್ಕೃತಂ ಮೇ ಭವತಾಂ ಯದೀಹ
ಸಂವಾದ ಏವೋದ್ವಿಭಜೇ ಸುಧಾಮಿಮಾಂ ॥ ೨೬ ॥

ಅ ॥ ನಿನ್ನಿಂದ ಪಾಪಿಷ್ಠರಾದ ಜನರಲ್ಲಿ ಧರ್ಮಾಭಾಸವು, ಅಥವಾ ಧರ್ಮರಕ್ಷಣೆಗೋಸ್ಕರ ಕಪಟವು ಧರ್ಮವು ಎಂದು ಲೋಕಶಿಕ್ಷೆಗೋಸ್ಕರವೇ, ಅಥವಾ ಸಜ್ಜನರಿಗೆ ತಿಳಿಸಿಕೊಡುವುದಕ್ಕಾಗಿಯೇ ಆ ಸಮಯದಲ್ಲಿ, ಈ ಅಮೃತ ವಿಭಾಗವಿಷಯದಲ್ಲಿ ನಿನ್ನಿಂದ ಯಾವ

ಯಾವ ವ್ಯಾಪಾರವು ಮಾಡಲ್ಪಡುತ್ತದೊ. (ಅದರಲ್ಲಿ) ನಿಮಗೆ ಸಮ್ಮತಿಯೇ ಇದ್ದರೆ ಈ ಅಮೃತವನ್ನು ವಿಭಾಗಮಾಡುತ್ತೇನೆ., ಹೀಗೆ ಹೇಳಲ್ಪಟ್ಟಿದೆ ॥ ೨೬ ॥

'ಇನೋಂ ಸುಧಾಂ ಉದ್ವಿಭಜೇ' ಎಂದು ಮೊದಲು ನೀನು ಅನೃತವನ್ನೇ ಹೇಳಿರುತ್ತಿ. 'ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ ಕಸ್ಯಚಿತ್'ಎನ್ನುವ ತನ್ನ ನಿಯಮವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಪುನಃ ಸತ್ಯವನ್ನೇ ಹೇಳಿರುತ್ತಿ ಎನ್ನುವ ಅಭಿಪ್ರಾಯದಿಂದ ಹೇಳಿರುತ್ತಾರೆ.

ಮೂ ॥ ಯಥೇಷ್ಟತೋಽಹಂ ವಿಭಜಾಮಿ ಸರ್ವಥಾ
ನ ವಿಶ್ವಸಧ್ವಂ ಮಯಿ ಕೇನಚಿತ್ಕ್ವಚಿತ್ ॥
ಇತೀ ಪ್ರಹಸ್ಯಾಭಿಹಿತಂ ನಿಶಮ್ಯ
ಸ್ತ್ರೀಭಾವಮುಗ್ಧಾ ಸ್ತ್ವ ತಥೇತಿ ತೇಽವದನ್ ॥ ೨೭ ॥

ಅ ॥ ನಾನು ನನ್ನ ಇಚ್ಛಾನುಸಾರವಾಗಿ ವಿಭಾಗಮಾಡುತ್ತೇನೆ. (ನೀವಾದರೂ) ನನ್ನಲ್ಲಿ ಯಾವಪ್ರಕಾರದಿಂದಲೂ, ಯಾವಾಗಲೂ, ಎಲ್ಲಿಯೂ, ಸರ್ವಪ್ರಕಾರದಿಂದಲೂ, ವಿಶ್ವಾಸಮಾಡಬೇಡಿರಿ. ಆಗ ದೈತ್ಯರು ಹೀಗೆ ಹೇಳಲ್ಪಟ್ಟ ಮಾತನ್ನು ಕೇಳಿ (ದೈತ್ಯರಾದರೂ ಹೇಗೆ ಅಂಗೀಕರಿಸಿದರೆಂದರೆ-) ಸ್ತ್ರೀವಿಲಾಸದಿಂದ ಮೋಹಿತರಾದವರಾಗಿ ನಗಾಡಿಕೊಂಡು ಹಾಗೆಯೇ ಆಗಲಿ ಎಂದು ಹೇಳಿದರು ॥ ೨೭ ॥

ಮೂ ॥ ತತಶ್ಚ ಸಂಸ್ಥಾಪ್ಯ ಪೃಥಕ್ಸುರಾಸುರಾಂ-
ಸ್ತ್ವಾತಿರೂಪೋಚ್ಛಲಿತಾನ್ಸುರೇತರಾನ್ ॥
ಸರ್ವಾನ್ಸ್ವದರ್ಶ(ರ್ಶಿ)ನ ಈಕ್ಷ್ಯ ಲಜ್ಜಿತಾ-
ಸ್ತ್ಯಹಂ ದೃಶೋ ಮೀಲಯತೇತ್ಯವೋಚಃ ॥ ೨೮ ॥

ಅ ॥ ಆ ಮೇಲೆ ದೇವತೆಗಳನ್ನೂ ದೈತ್ಯರನ್ನೂ ಕೂಡ ಪ್ರತ್ಯೇಕವಾಗಿ ಸ್ಥಾಪಿಸಿ, ನಿನ್ನ ಸುರೂಪಾತಿಶಯದಿಂದ ಉತ್ಪನ್ನವಾದ ಮನಶ್ಚಾಂಚಲ್ಯವುಳ್ಳ ಎಲ್ಲಾ ದೇವತೆಗಳಿಂದ ಇತರರಾದ ದೈತ್ಯರನ್ನು ಕುರಿತು ನಿಮಗೆ ರಾಗದಿಂದ ನನ್ನ ದರ್ಶನವಾಗುತ್ತಿರಲು (ನಿಮ್ಮನ್ನು) ನೋಡಿ ನಾನು ನಾಚಿಕೆಪಟ್ಟವಳು ಆಗುತ್ತೇನೆ. ಕಣ್ಣುಗಳನ್ನು ಮುಚ್ಚಿಕೊಳ್ಳಿರಿ ಎಂದು ಹೇಳಿರುತ್ತಿ. (ದೇವತೆಗಳಾದರೂ ರಾಗವಿಲ್ಲದೇನೇ ನನ್ನನ್ನು ನೋಡುವುದರಿಂದ ಅವರನ್ನು ನೋಡಿ ನಾಚಿಗೆ ಪಡಲಾರೆನು ಎಂದು ತಾತ್ಪರ್ಯವು) ॥ ೨೮ ॥

ಮೂ ॥ ನಿಮೀಲಿತಾಕ್ಷೇಷ್ವಸುರೇಷು ದೇವತಾ-
ನ್ಯಪಾಯಯಃ ಸಾಧ್ವಮೃತಂ ತತಃ ಪುಮಾನ್ ॥
ಕ್ಷಣೇನ ಭೂತ್ವಾ ಪಿಬತಃ ಸುಧಾಂ ಶಿರೋ
ರಾಹೋರ್ನ್ಯಕೃಂತಶ್ಚ ಸುದರ್ಶನೇನ ॥ ೨೯ ॥

ಅ ॥ ದೈತ್ಯರು ಮುಚ್ಚಲ್ಪಟ್ಟ ಕಣ್ಣುಗಳುಳ್ಳವರಾಗುತ್ತಿರಲು (ಅಂದರೆ ಕಣ್ಣುಗಳನು ಮುಚ್ಚುತ್ತಿರಲು) ದೇವತೆಗಳನ್ನು ಚನ್ನಾಗಿ ಅಮೃತವನ್ನು ಪಾನಮಾಡಿಸಿರುತ್ತಿ. ಆ ಮೇಲೆ

ಕ್ಷಣದಿಂದ ಪುರುಷರೂಪಿಯಾಗಿ ಅಮೃತವನ್ನು ಪಾನಮಾಡತಕ್ಕ ರಾಹುವಿನ ಶಿರಸ್ಸನ್ನು ಸುದರ್ಶನದಿಂದ ಛೇದಿಸಿರುತ್ತಿ.

ವಿಶೇಷಾಂಶ— ದೇವಪಂಕ್ತಿಯಲ್ಲಿ ಅಂತ್ಯದಲ್ಲಿ ರಾಹುವು ಕುಳಿತಿರುವನು. ಎಲ್ಲಾ ದೇವತೆಗಳಿಗೂ ಅಮೃತಪಾನಾನಂತರದಲ್ಲಿ ಅಂತ್ಯದಲ್ಲಿ ಅಮೃತವನ್ನು ಕುಡಿಯುತ್ತಿದ್ದ ರಾಹುವಿನ ಶಿರಸ್ಸನ್ನು ಛೇದಿಸಿರುತ್ತಿ. ಹೀಗೆ ಅಂಗೀಕರಿಸದೆಯಿದ್ದರೆ ಮಧ್ಯದಲ್ಲಿಯೇ ರಾಹುವು ಕೂತು ಕೊಳ್ಳುತ್ತಿದ್ದರೆ ಕೆಲವು ದೇವತೆಗಳಿಗೆ ಸುಧಾಪಾನವೇ ಇಲ್ಲದೆಹೋಗುತ್ತಿತ್ತು. ಪರಿವೇಷಣ ಮಾಡತಕ್ಕ ಸ್ತ್ರೀರೂಪಕ್ಕೂ ಅಲ್ಲಿಯೇ ಸಮಾಪ್ತಿಯಾಗುತ್ತಿತ್ತು. ಮಾಯೆಯಿಂದ ದೇವತೆಗಳ ವೇಷವನ್ನು ತಾಳಿಕೊಂಡವನಾಗಿ ಭಯಗ್ರಸ್ತನಾಗಿ ಕೊನೆಗೇನೇ ಕೂತುಕೊಂಡಿದ್ದನು ॥ ೨೯ ॥

ಹಾಗಾದರೆ ಅಯೋಗ್ಯನಾದವನಿಗೆ ಅಮೃತಪ್ರಾಪ್ತಿಯು ಹೇಗೆ ಆಯಿತೆಂದರೆ—

ಮೂ ॥ ತೇನಾಮೃತಾರ್ಥಂ ಹಿ ಸಹಸ್ರಜನ್ಮಸು
ಪ್ರತಪ್ಯ ಭೂಯಸ್ತಪ ಆರಿತೋ ವರಃ ॥
ಸ್ವಯಂಭುವಸ್ತೇನ ಭವಾನ್ಕರೇಽಸ್ಯ
ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ ॥ ೩೦ ॥

ಅ ॥ ಆ ರಾಹುವಿನಿಂದ ಅಮೃತವು ಸಿಗುವುದಕ್ಕಾಗಿ ಸಹಸ್ರಜನ್ಮಗಳಲ್ಲಿ ಬಹಳವಾದ ತಪಸ್ಸನ್ನು ಮಾಡಿ (ಯಾವಕಾರಣದಿಂದ) ಬ್ರಹ್ಮನದೆಸೆಯಿಂದ ಅಮೃತಪ್ರಾಪ್ತಿರೂಪವಾದ ವರವು ಸ್ವೀಕರಿಸಲ್ಪಟ್ಟದೋ, ಆದಕಾರಣದಿಂದ ನೀನು ರಾಹುವಿನ ಕೈಯಲ್ಲಿ ಬಿಂದುಮಾತ್ರ ಅಮೃತವನ್ನು ಇಟ್ಟು ರಾಹುವಿನ ಶಿರಸ್ಸನ್ನು ಛೇದಿಸಿದಿ ॥ ೩೦ ॥

ಮೂ ॥ ಶಿರಸ್ತು ತಸ್ಯ ಗ್ರಹತಾಮುವಾಪ
ಸುರೈ ಸಮಾವಿಷ್ಟಮುಖೋ ಸಬಾಹುಃ ॥
ಕ್ಷಿಪ್ತಃ ಕಬಂದೋಽಸ್ಯ ಶುಭೋದಸಾಗರೇ
ತ್ವಯಾ ಸ್ಥಿತೋ ದ್ಯಾಪಿ ಹಿ ತತ್ರ ಸಾಮೃತಃ ॥ ೩೧ ॥

ಅ ॥ ದೇವತೆಗಳಿಂದ ಪ್ರವಿಷ್ಟವಾದ ಆ ರಾಹುವಿನ ಶಿರಸ್ಸಾದರೂ ಚಂದ್ರಸೂರ್ಯರ ಗ್ರಹತ್ವವನ್ನು ಹೊಂದಿತು. ಆ ಮೇಲೆ ನಿನ್ನಿಂದ ಉತ್ತಮವಾದ (ಸ್ವಾದುವಾದ) ಜಲವುಳ್ಳ ಸಮುದ್ರದಲ್ಲಿ ಬಾಹುವಿನಿಂದ ಕೂಡಿರುವ ಈ ರಾಹುವಿನ ಕಬಂಧವು (ಶಿರಸ್ಸು ಇಲ್ಲದಿರುವ ಕಾಯವು) ನಿನ್ನಿಂದ ಬಿಸಾಡಲ್ಪಟ್ಟಿತು. ಯಾವಕಾರಣದಿಂದ ಕಬಂಧವು ಅಮೃತದಿಂದ ಸಹಿತ ವಾಗಿದೆಯೋ, ಆದಕಾರಣ ಈಗಲೂಕೂಡ ಸ್ವಾದೂದಕಸಮುದ್ರದಲ್ಲಿ ಇರುತ್ತದೆ,

ವಿಶೇಷಾಂಶ— (1) ಶ್ರೀ ಹರಿಯು ಅತಿಚಮತ್ಕಾರದಿಂದ ರಾಹುವಿನ ಶಿರಸ್ಸನ್ನು ಛೇದಿಸುತ್ತಿರಲು ರಾಹುವೇ ಮೃತನಾದನು. ಆ ರಾಹುವಿಗೆ ಸುಧಾಪಾನವೂ ಆಗಲಿಲ್ಲ. ರಾಹು ವಿನ ಶಿರಸ್ಸಾದರೂ ಹಸ್ತಲಾಘವ ಸಾಮರ್ಥ್ಯದೆಸೆಯಿಂದ ರಾಹುವಿನಲ್ಲಿಯೇ ಸಂಬದ್ಧವಾಯಿತು, ಆವಾಗಲೇ ಬೀಳಲಿಲ್ಲ. (2) ಆಮೇಲೆ ಆ ರಾಹುವಿನ ಅಧರೋಷ್ಠದ (ಕೆಳಗಿನ ತುಟಿಯ ಮೇಲೆ ಇಟ್ಟಿರತಕ್ಕ ಕೈಯಲ್ಲಿದ್ದ ಅಮೃತವಾದರೂ ಭಿನ್ನವಾದ ಶಿರಸ್ಸು ಬೀಳುವುದಕ್ಕಿಂತ ಮೊದಲೇ

ಶಿರಸ್ಸಿನ ವಿವರವನ್ನು ಪ್ರವೇಶಮಾಡಿ ಕುಕ್ಷಿಗೆಯ ವಿವರದ ದ್ವಾರದಿಂದ ಕಬಂಧವನ್ನು ಪ್ರವೇಶ ಮಾಡಿತು. ಶಿರಸ್ಸನ್ನೂ ಪ್ರವೇಶಮಾಡಿತು. ಆದಕಾರಣ ಅಮೃತವು ಇದ್ದ ಪ್ರಯುಕ್ತ ಶಿರಸ್ಸೂ ಕೂಡ ಚಿರಕಾಲದಲ್ಲಿರತಕ್ಕುದು ಕಬಂಧವು ಕೂಡ ಚಿರಕಾಲದಲ್ಲಿರತಕ್ಕುದು, ಶಿರಸ್ಸು-ಕಬಂಧ ಇವು ಗಳವ ಧ ಡಲ್ಲಿ ಶಿರಸ್ಸಿನಲ್ಲಿ ' ರಾಹುರ್ಜ್ಯೇಷ್ಠಂ ಕೇರುಶತಂ ' ಎನ್ನುವ ವಚನದಶೆಯಿಂದ, ರಾಹು ವಿಗೂ ಕೂಡ ಸ್ವಲ್ಪ ಸನ್ನಿಧಾನವಿದೆ (೧೦೦) ದೇವತೆಗಳ ಸನ್ನಿಧಾನವೂ ಇದೆ. ಅದರಲ್ಲಿಯೂ ಶಿರಸ್ಸಿಗೆ ಅಭಿಮಾನಿಯಾಗಿರುವುದರಿಂದ ರಾಹುವಿನ ಅಂಶಕ್ಕೆ ಜ್ಯೇಷ್ಠತ್ವವು. ಕೇತುಗಳಿಗೆ ಕನಿಷ್ಠತ್ವವು. ಹೀಗೆ ರಾಹು-ಕೇತು ಎನ್ನುವಗ್ರಹಗಳಿಬ್ಬರಿಗೂ ಒಂದು ಶಿರಸ್ಸೇ ಅಧಿಷ್ಠಾನವು. ಆದುದರಿಂದಲೇ 'ಕರೇ ಪ್ರಾಸ್ಯ ಶಿರೋ ಜಹಾರ' ಎಂದು ಹೇಳಿರುವರು. (3) ರಾಹು ಎನ್ನುವ ಹೆಸರಿನಿಂದ ಯಾಜ್ಞಿಕರಿಂದ ಕೊಡಲ್ಪಡತಕ್ಕ ಹವಿಸ್ಸನ್ನು ದೇವತೆಗಳೇ ಸ್ವೀಕರಿಸುತ್ತಾರೆ. ಯಜ್ಞಾಹುತಿಯಲ್ಲಿ ದೈತ್ಯರಿಗೆ ಅಧಿಕಾರವೇ ಇಲ್ಲ. (4) ಪ್ರತಿಪರ್ವದಲ್ಲಿಯೂ ಸೂಚಕರಾದ ಚಂದ್ರ-ಸೂರ್ಯರಿಗೆ ಕೇವಲ ದ್ವೇಷಕ್ಕಾಗಿಯೇ ರಾಹುವಿಗೆ ಹುಟ್ಟಿದ್ದ ಅವೈಷ್ಣವರಿಂದ ಕೊಡಲ್ಪಡತಕ್ಕ ಆಹುತಿ ಯಿಂದಲೇ ಜೀವನವು ॥ ೩೧ ॥

ಮೂ ॥ ಅಥಾಸುರಾಃ ಪ್ರತ್ಯಪತನ್ನುದಾಯುಧಾಃ
ಸಮಸ್ತಶಸ್ತೇ ಚ ಹತಾಸ್ತ್ವಯಾ ರಣೇ ॥
ಕಲಿಸ್ತು ಸ ಬ್ರಹ್ಮವರಾದಜೇಯೋ
ಋತೇ ಭವಂತಂ ಪುರುಷೇಷ ಸಂಸ್ಥಿತಃ ॥ ೩೨ ॥

ಅ ॥ ಆ ಮೇಲೆ ಎಲ್ಲಾ ಅಸುರರೂ ಮೇಲಕ್ಕೆ ಎತ್ತಲ್ಪಟ್ಟ ಆಯುಧವುಳ್ಳವರಾಗಿ ಎದು ರಾಗಿ ಬಂದರು. ಅವರೆಲ್ಲರೂ ನಿನ್ನಿಂದ ಯುದ್ಧದಲ್ಲಿ ಸಂಹರಿಸಿಕೊಳ್ಳಲ್ಪಟ್ಟರು. ಬ್ರಹ್ಮನ ವರ ದಶೆಯಿಂದ ನಿನ್ನನ್ನು ಹೊರತು ಜಯಿಸಲಿಕ್ಕೆ ಅಶಕ್ಯನಾದ, ಸರ್ವಜಗತ್ತುಗಳಲ್ಲಿ ಪೂರ್ಣನಾದ ಆ ಕಲಿಯಾದರೂ ಮನುಷ್ಯರಲ್ಲಿಯೂ, ರುದ್ರಾದಿಗಳಲ್ಲಿಯೂ ಇರುತ್ತಾನೆ.

ವಿಶೇಷಾಂಶ—(1) ಪರಶುಕ್ಲತ್ರಯವೂ ನಿನ್ನ ಪ್ರಸಾದದಿಂದಲೇ ಕಲಿಯನ್ನು ಜಯಿಸಿ ದುದರಿಂದ ಅದನ್ನು ಪ್ರತ್ಯೇಕವಾಗಿ ಕಂಠತಃ ಹೇಳಲಿಲ್ಲ. )2) 'ಪುರುಷಾಃ ಪೂರುಷಾಃ ನರಾಃ' ಎನ್ನುವ ಅನುಶಾಸನದಶೆಯಿಂದ ಮನುಷ್ಯರಲ್ಲಿ ಕಲಿಯು ಚೆನ್ನಾಗಿ ಇರತಕ್ಕವನು. ರುದ್ರಾದಿ ಗಳಲ್ಲಿ ಕೆಲವುವೇಳೆಯೇ ಕಲ್ಯಾವೇಶವು ಎಂದು ಸೂಚಿಸುವುದಕ್ಕಾಗಿ 'ಸಂಸ್ಥಿತ'ಃ ಎಂದು ಹೇಳಿರುವರು. ॥ ೩೨ ॥

ಮೂ ॥ ತಸ್ಯಾರ್ಧದೇಹಾ ಸಮಭೂದಲಕ್ಷ್ಮೀ-
ಸ್ತತ್ಪುತ್ರಕಾ ದೋಷಗಣಾಶ್ಚ ಸರ್ವಶಃ ॥
ಅಥೇಂದಿರಾ ವಕ್ಷಸಿ ತೇ ಸಮಾಸ್ಥಿತಾ
ತ್ವತ್ಕಂಠಗಂ ಕೌಸ್ತುಭಮಾಸ ಧಾತಾ ॥ ೩೩ ॥

ಅ ॥ ದಾರಿದ್ರ್ಯದೋಷಕ್ಕೆ ಅಭಿಮಾನಿಯಾಗಿರುವುದರಿಂದ ಅಲಕ್ಷ್ಮೀನಾಮಕಳು ಆ ಕಲಿಗೆ ಅರ್ಧಾಂಗಿಯು(ಹೆಂಡತಿಯೂ) ಆದಳು. ಕಾಮಾದಿ ದೋಷಗಳಿಗೆ ಅಭಿಮಾನಿಗಳಾದ ದೈತ್ಯರ ಸಮೂಹಗಳೆಲ್ಲವೂ ಆ ಕಲಿಯ ಮಕ್ಕಳು ಆದರು. ಆ ಮೇಲೆ ಲಕ್ಷ್ಮೀದೇವಿಯು ನಿನ್ನ ವಕ್ಷಸ್ಥಳದಲ್ಲಿ ಆಶ್ರಿತಳಾದಳು. ಬ್ರಹ್ಮನು ನಿನ್ನ ಕುಕ್ಷಿಗೆಯಲ್ಲಿರತಕ್ಕ ಕೌಸ್ತುಭಮಣಿಗೆ ಅಭಿಮಾನಿಯು ಆದನು. ॥ ೩೩ ॥

ಮೂ ‖ ಯಥಾ ವಿಭಾಗಂ ಚ ಸುರೇಷು ದತ್ತಾ-
ಸ್ತ್ವಯಾ ತಥಾನ್ಯೇಽಪಿ ಹಿ ತತ್ರ ಜಾತಾಃ ‖
ಇತ್ಥಂ ತ್ವಯಾ ಸಾಧ್ವಮೃತಂ ಸುರೇಷು
ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ ‖ ೩೪ ‖

ಅ ‖ ಮಥನಮಾಡಲ್ಪಡತಕ್ಕ ಆ ಕ್ಷೀರಸಮುದ್ರದಲ್ಲಿ ಹುಟ್ಟಿರತಕ್ಕ, ಇತರಗಳಾದ (ಅಂದರೆ–ಲಕ್ಷ್ಮೀ–ಕೌಸ್ತುಭ–ಸುಧಾ ಮೊದಲಾದ ಪದಾರ್ಥಗಳು ಹುಟ್ಟಿದ್ದಾವೆ ಎಂದು ಹೇಳಲ್ಪಟ್ಟ ಪದಾರ್ಥಗಳದೆಶೆಯಿಂದ ಇತರಗಳಾದ)ಪದಾರ್ಥಗಳು ನಿನ್ನಿಂದ ವಿಭಾಗವನ್ನು ಅತಿಕ್ರಮಿಸದೇ ಅದನ್ನು ಅನುಸರಿಸಿಯೇ ದೇವತೆಗಳಲ್ಲಿ ಕೊಡಲ್ಪಟ್ಟವೆ. ಆ ವಿಭಾಗವು ಶಾಸ್ತ್ರಪ್ರಸಿದ್ಧಿಯಿಂದಲೇ ತಿಳಿಯತಕ್ಕುದು ಎಂದು ಪ್ರಸಿದ್ಧವು. ಈ ಪ್ರಕಾರ ಮೋಕ್ಷದ ದೃಷ್ಟಾಂತಕ್ಕಾಗಿ (ಅಂದರೆ ಯಾರಿಗೆ ಅಮೃತವು ಕೊಡಲ್ಪಟ್ಟಿದೆಯೋ ಅವರಿಗೇನೇ ಮೋಕ್ಷವು ಎಂದು ತೋರಿಸುವುದಕ್ಕಾಗಿ) ನಿನ್ನಿಂದ ಅತಿ ಸ್ವಾದುವಾದ ಅಮೃತವು ದೇವತೆಗಳಲ್ಲಿ ಕೊಡಲ್ಪಟ್ಟಿದೆ. (ಅಂದರೆ ಯಾವ ಕಾರಣದಿಂದ ದೇವತೆಗಳಿಗೆ ಮೋಕ್ಷವು ಶಾಶ್ವತವಾಗಿ ಹೇಗೆ ಆಗುವುದೋ ಆದಕಾರಣದಿಂದ ಹಾಗೆಯೇ ಅಮೃತವು ಕೊಡಲ್ಪಟ್ಟಿದೆ.)

ವಿಶೇಷಾಂಶ— (1)ಐರಾವತ, ಉಚ್ಚೈಃಶ್ರವ, ಪಾರಿಜಾತ ಮೊದಲಾದವುಗಳು ಇಂದ್ರನಿಗೋಸ್ಕರ ಕೊಡಲ್ಪಟ್ಟವು. ಶಾಸ್ತ್ರದಲ್ಲಿ ಹಾಗೆಯೇ ಹೇಳಿದೆ. ಅದರಿಂದ ಅತಿರಿಕ್ತಗಳಾದ ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎನ್ನುವ ಏಳು ದಿಗ್ಗಜಗಳೂ, ಅಗ್ನಿಮೊದಲಾದ ಏಳು ದಿಕ್ಪಾಲಕರಿಗೆ ಕೊಡಲ್ಪಟ್ಟವು. ಹಾಗೆಯೇ ಶಾಸ್ತ್ರದಲ್ಲಿ ಹೇಳಿದೆ. (2)ಯಥಾಯೋಗ್ಯಗಳಾಗಿ ಆಯುಧಗಳೂ, ಆಭರಣಗಳೂ, ಕೂಡ ದೇವತೆಗಳಲ್ಲಿ ಕೊಡಲ್ಪಟ್ಟವು. (3)'ಸುರೇಷು ದತ್ತಂಹಿ' ಎನ್ನುವಲ್ಲಿದ್ದ ಹಿ ಶಬ್ದದಿಂದ 'ತಮೇವಂ ವಿದ್ವಾನಮೃತ ಇಹ ಭವತಿ'ಎನ್ನುವ ಶ್ರುತಿಪ್ರಸಿದ್ಧಿಯನ್ನು ಸೂಚಿಸಿದರು ‖ ೩೪ ‖

ಮೂ ‖ ಭವೇದ್ಧಿ ಮೋಕ್ಷೋಽಯಂ ನಿಯತಂ ಸುರಾಣಾಂ
ನೈವಾಸುರಾಣಾಂ ಸ ಕಥಂಚನ ಸ್ಯಾತ್ ‖
ಉತ್ಸಾಹಯುಕ್ತಸ್ಯ ಚ ತತ್ಪ್ರತೀಪಂ
ಭವೇದ್ಧಿ ರಾಹೋರಿವ ದುಃಖರೂಪಂ ‖ ೩೫ ‖

ಅ ‖ ಯಾವಕಾರಣದಿಂದ ದೇವತೆಗಳಿಗೆ ಶಾಶ್ವತವಾಗಿ ಮೋಕ್ಷವು ಆಗುವುದೋ, (ಆದುದರಿಂದಲೇ ಅಮೃತವು ಕೊಡಲ್ಪಟ್ಟಿತು.) ಆ ಮೋಕ್ಷವು ಅಸುರರಿಗೆ ಯಾವ ಉಪಾಯದಿಂದಲೂ ಸರ್ವಥಾ ಆಗಲಾರದೋ, (ಆದುದರಿಂದಲೇ ಅಮೃತವು ಕೊಡಲ್ಪಡಲಿಲ್ಲ) (ಹಾಗಾದರೆ, ಮೋಕ್ಷಪ್ರಾಪ್ತಿಗೆ ಸಾಧನವಾದ ಕರ್ಮದಲ್ಲಿ ಪ್ರಯತ್ನವುಳ್ಳ ಅಸುರನಿಗೆ ಮೋಕ್ಷವು ಆಗಬೇಕಾಗುವುದೆಂದರೆ) ಮೋಕ್ಷಪ್ರಾಪ್ತಿಗೆ ಕಾರಣೀಭೂತವಾದ ಕರ್ಮದಲ್ಲಿ ಉದ್ಯೋಗದಿಂದ ಕೂಡಿರುವ ಅಸುರನಿಗೆ ಆ ಕರ್ಮವು ರಾಹುವಿಗೆ ಅಮೃತಸಿಗುವುದಕ್ಕಾಗಿ ಮಾಡಲ್ಪಟ್ಟ ತಪಸ್ಸು ಹೇಗೆ ದುಃಖರೂಪವಾಯಿತೋ ಹಾಗೆಯೇ ಮೋಕ್ಷಪ್ರಾಪ್ತಿಗೆ ವಿರೋಧಿಯಾದುದೇ ಆಗುವುದು ಪ್ರಸಿದ್ಧವು.

**ವಿಶೇಷಾಂಶ— (1) 'ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ ಅವಧಸ್ಯೂಂರಧೂನುಥಾಃ ॥ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ'। ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ।'** ಇತ್ಯಾದಿ ಶ್ರುತಿ ಸ್ಮೃತಿಗಳಿಂದ ಅಸುರರಿಗೆ ಮೋಕ್ಷವಾಗುವುದಿಲ್ಲವೆನ್ನುವುದು ಪ್ರಸಿದ್ಧವು ಎಂದು 'ಅಸುರಾಣಾಂ ನ ಸ್ಯಾತ್ ಹಿ' ಎನ್ನುವಲ್ಲಿದ್ದ 'ಹಿ' ಶಬ್ದದಿಂದ ಸೂಚಿಸಿದರು. (2) ಮೋಕ್ಷೋತ್ಸಾಹದಿಂದ ಕೂಡಿದವನಿಗೆ ಸುಖರೂಪವಾದ ಮೋಕ್ಷಕ್ಕೆ ವಿಪರೀತವಾದ ದುಃಖರೂಪವಾದ ಅಂಧಂತಮಸ್ಸು ಆಗುವುದು. 'ಭವೇದ್ಧಿ' ಎನ್ನುವಲ್ಲಿದ್ದ 'ಹಿ' ಶಬ್ದದಿಂದ **'ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ'** ಇತ್ಯಾದಿ ಶ್ರುತಿಪ್ರಸಿದ್ಧಿಯನ್ನೂ ಸೂಚಿಸಿದರು. ಹಾಗಾದರೆ ಉತ್ಸಾಹಕ್ಕೆ ಏನು ಗತಿಯು? ಎನ್ನುವ ಶಂಕೆಯನ್ನೂ ಕೂಡ ಪೂರ್ವೇಷಾಂ= ಉಗ್ರರಾದ ದೈತ್ಯರ, ಸಖ್ಯಾ=ತನ್ನಲ್ಲಿ ಮಾಡಲ್ಪಡತಕ್ಕ ಭಕ್ತಿಮೊದಲಾದ ಸಾಧನಗಳನ್ನು, ಪರಾವೃಣಕ್ತಿ=ಛೇದಿಸುತ್ತದೆ. ಎಂದು ಹೇಳತಕ್ಕ ಸ್ಮೃತಿಯೇ ಧಿಕ್ಕರಿಸುತ್ತದೆ. ಇದಾದರೂ ಶೂರ್ಪನಖ್ಯಾದಿಗಳಲ್ಲಿ ಪ್ರಸಿದ್ಧವು ಎಂದು 'ಹಿ' ಶಬ್ದದಿಂದ ಸೂಚಿಸಿದರು ॥ ೩೫ ॥

ಇತರ ಅವತಾರಗಳನ್ನು ಬಿಟ್ಟು ಯಾವುದಕ್ಕಾಗಿ ಕೂರ್ಮಾವತಾರ ಕಥೆಯನ್ನೇ ವಿಸ್ತಾರವಾಗಿ ಹೇಳಿರುವರೋ, ಅದಕ್ಕೆ ಫಲವನ್ನು ಹೇಳುತ್ತಾರೆ—

ಮೂ ॥ **ಕಲಿಸ್ತ(ಸ್ತ್ವ)ಯಂ ಬ್ರಹ್ಮವರಾದಿದಾನೀಂ**
**ವಿಬಾಧತೇಽಸ್ಮಾನ್ಸಕಲಾಃ (ಲಾನ್) ಪ್ರಜಾಶ್ಚ ॥**
**ಅಜ್ಞಾನಮಿಥ್ಯಾಮತಿರೂಪತೋಽಸೌ**
**ಪ್ರವಿಶ್ಯ ಸಜ್ಞಾನವಿರುದ್ಧರೂಪಃ ॥ ೩೬ ॥**

**ಅ ॥** ಸಜ್ಞಾನಕ್ಕೆ ವಿರುದ್ಧವಾದ ರೂಪವುಳ್ಳ ಈ ಕಲಿಯು ಕಾಲಕೂಟಾಖ್ಯವಿಷದ ಸಹಾಯವಿಶೇಷದಿಂದ ಈಗ ನಮ್ಮನ್ನೆಲ್ಲರನ್ನು ಪ್ರವೇಶಮಾಡಿ ಅಜ್ಞಾನ-ಮಿಥ್ಯಾ ಜ್ಞಾನಗಳ ರೂಪದಿಂದ (ಮನಸ್ಸನ್ನು ಕಳವಳಪಡಿಸಿ) ಕೆಲವು ವೇಳೆ ಬ್ರಹ್ಮದೇವರ ವರದಿಂದ ಬಾಧಿಸುತ್ತಾನೆ. ಎಲ್ಲಾ ಪ್ರಜೆಗಳನ್ನೂ ಪ್ರವೇಶಮಾಡಿ ಅಜ್ಞಾನ-ಮಿಥ್ಯಾಜ್ಞಾನಗಳಿಂದ ಮನಸ್ಸನ್ನು ಕಳವಳಪಡಿಸಿ ವಿಶೇಷಾಕಾರವಾಗಿ ಪೀಡಿಸುತ್ತಾನೆ.

**ವಿಶೇಷಾಂಶ**—(1)ತಾನಾದರೂ ಪಿಶಾಚಿಯ ಆವೇಶದಿಂದಲೆಂಬಂತೆ ಪರಶುಕ್ಲತ್ರಯವನ್ನು ಬಿಟ್ಟು ನಮ್ಮ ಮತ್ತು ಪ್ರಜೆಗಳ ಬುದ್ಧಿಯನ್ನು ಹಾಳುಮಾಡಲಿಕ್ಕೆ ಸಮರ್ಥನು. ಈಗ ಕಾಲಕೂಟಾಖ್ಯವಿಷದ ಸಹಾಯವಿರುವಾಗ ಉನ್ಮತ್ತಬೀಜದಿಂದಲೆಂಬಂತೆ ಬುದ್ಧಿಯನ್ನು ಕೆಡಿಸಿ ನಮ್ಮನ್ನು ಕೆಲವು ವೇಳೆಯೇ ಬಾಧಿಸುತ್ತಾನೆ. ಪ್ರಜೆಗಳಾದರೂ ದುರ್ಬಲವಾದ ಮನಸ್ಸುಳ್ಳವರಾದ್ದರಿಂದ ವಿಶೇಷಾಕಾರವಾಗಿ ಅವರನ್ನು ಪೀಡಿಸುತ್ತಾನೆ. (2)'ಕಪಿರಪಿ ಚ ಕಾಪಿ ಶಾಯು ನ ರಸಮತ್ತೋ ವೃಶ್ಚಿಕೇನ ಸಂದಷ್ಟಃ । ಅಪಿ ಚ ಪಿಶಾಚಗ್ರಹೀತಃ ಕಿಂ ಬ್ರೂಮಃ ತಸ್ಯ ಚರಿತಾನಿ' ಎಂದು ನೀತಿಕಾರನು ಹೇಳಿರುವನು. ಪ್ರಕೃತದಲ್ಲಿ ವೃಶ್ಚಿಕ ದಂಶದಂತೆ ಗೌತಮಶಾಪವಿದೆ ॥ ೩೬ ॥

ಮೂ ॥ **ತ್ವದಾಜ್ಞಯಾ ತಸ್ಯ ವರೋಽಬ್ಜಜೇನ**
**ದತ್ತಃ ಸ ಆವಿಶ್ಯ ಶಿವಂ ಚಕಾರ ॥**

ಕದಾಗವೂಾಂಸ್ತಸ್ಯ ಕುಯುಕ್ತಿಬಾಧಾನ್
ನ ಹಿ ತ್ವದನ್ಯಶ್ಚರಿತುಂ ಸಮರ್ಥಃ ॥ ೩೭ ॥

ಅ ॥ ನಿನ್ನ ಆಜ್ಞೆಯಿಂದಲೇ ಆ ಕಲಿಗೆ ಬ್ರಹ್ಮನಿಂದ ವರವು ಕೊಡಲ್ಪಟ್ಟದೆ. ಆ ಕಲಿಯು ಕುತ್ಸಿತಗಳಾದ ಆಗಮಗಳನ್ನು ರುದ್ರನನ್ನು ಪ್ರವೇಶಮಾಡಿ ಮಾಡಿದನು. ಆ ಕಲಿಯ ಕುಯುಕ್ತಿಗಳ ದೂಷಣೆಯನ್ನು ಮಾಡಲಿಕ್ಕೆ ನಿನ್ನಿಂದ ವ್ಯತಿರಿಕ್ತನು ಸಮರ್ಥನಲ್ಲ.

ವಿಶೇಷಾಂಶ— ಪಾಶುಪತಾದಿ ಸಕಲ ದುರಾಗಮಗಳಿಗೂ ಶಿವನೇ ಪ್ರವರ್ತಕನಾಗಿರುತ್ತಾನೆ ಎಂದರೆ— ಕಲಿಯು ಶಿವನನ್ನು ಪ್ರವೇಶಮಾಡಿ ದುರಾಗಮಗಳನ್ನು ಮಾಡಿರುತ್ತಾನೆ, ಎಂದು ಹೇಳಿರುವರು ॥ ೩೭ ॥

ಮೂ ॥　ವೇದಾಶ್ಚ ಸರ್ವೇಃ ಸಹಶಾಸ್ತ್ರಸಂಘಾ
ಉತ್ಸಾದಿತಾಸ್ತೇನ ನ ಸಂತಿ ತೇಽದ್ಯ ॥
ತತ್ಸಾಧು ಭೂಮಾವವತೀರ್ಯ ವೇದಾ-
ನುದ್ಧೃತ್ಯ ಶಾಸ್ತ್ರಾಣಿ ಕುರುಷ್ವ ಸಮ್ಯಕ್ ॥ ೩೮ ॥

ಅ ॥ ಪಂಚರಾತ್ರಾಗಮ-ಮೂಲರಾಮಾಯಣ ಮೊದಲಾದ ಶಾಸ್ತ್ರಗಳ ಸಮೂಹಗಳಿಂದ ಕೂಡಿದ ಎಲ್ಲಾ ವೇದಗಳೂ ಕಲಿಯಿಂದಲೇ ನಾಶಮಾಡಲ್ಪಟ್ಟವೆ. ಆ ವೇದಾದಿಗಳು ಈಗ ವ್ಯಕ್ತಗಳಾಗಿ ಇರುವುದಿಲ್ಲ. (ಅಂದರೆ— ಯಾವ ಕಾರಣದಿಂದ ಕುತ್ಸಿತಾಗಮಗಳನ್ನು ಮಾಡಿದರಿಂದ ಯಥಾರ್ಥಜ್ಞಾನವನ್ನು ಹುಟ್ಟಿಸತಕ್ಕವುಗಳು ಆಗುವುದೇ ಇಲ್ಲವೋ) ಆದಕಾರಣ ಪುಣ್ಯಕ್ಕೆ ಹೇತುವಾದ ಕರ್ಮಭೂಮಿಯಲ್ಲಿ ಅವತಾರಮಾಡಿ ಋಗಾದಿವೇದಗಳನ್ನೂ, ಪಂಚರಾತ್ರಾಗಮಾದಿಗಳನ್ನೂ ಉದ್ಧಾರಮಾಡಿ ಬ್ರಹ್ಮಸೂತ್ರ-ಭಾರತ-ಪುರಾಣ ಮೊದಲಾದ ಶಾಸ್ತ್ರಗಳನ್ನು, ಚೆನ್ನಾಗಿ (ಅಂದರೆ ವೇದಾದಿಗಳ ಅರ್ಥದಲ್ಲಿಯೂ ಸಂಶಯಪರಿಹಾರವು ಹೇಗೆ ಆಗುವುದೋ ಹಾಗೆ) ಮಾಡು.

ವಿಶೇಷಾಂಶ— (1)ವೈದಿಕಶಿರೋಮಣಿಯಾದ ಗೌತಮ ಋಷಿಗೆ ವೇದಶಾಸ್ತ್ರಗಳನ್ನು ನಾಶಮಾಡಲಿಕ್ಕೆ ಶಾಪಕೊಡುವ ವಿಷಯದಲ್ಲಿ ಕಲ್ಯಾವೇಶದಿಂದಲೇ ಮನಸ್ಸುಂಟಾಯಿತು ಎನ್ನುವ ಅಭಿಪ್ರಾಯದಿಂದಲೇ 'ತೇನ ಉತ್ಸಾದಿತಾಃ' ಎಂದು ಹೇಳಿರುವರು. ಇಲ್ಲವಾದರೆ ಶಿಷ್ಯರ ಅಪರಾಧವಿರಲು ಅಗಸ್ತ್ಯನು ಗಜೇಂದ್ರನಿಗೆ ಶಾಪಕೊಟ್ಟಂತೆಯೇ ಶಿಷ್ಯರಿಗೇನೇ ಶಾಪವನ್ನು ಕೊಡುತ್ತಿದ್ದನು. ನಿರಪರಾಧಿಯಾದ ವೇದಶಾಸ್ತ್ರಗಳ ದ್ವೇಷವಾದರೂ ಕಲ್ಯಾವೇಶದಿಂದಲೇ ಎಂದು ತಿಳಿಯುತ್ತದೆ. (2) ವೇದಗಳು ಅನಾದಿಗಳಾಗಿರುವುದರಿಂದ ವೇದಾನುದ್ಧೃತ್ಯವೆಂದು ಹೇಳಿರುವರು. ಪಂಚಾರಾತ್ರಾಗಮವು ಸಾದಿಯಾಗಿದ್ದಾಗ್ಯೂ ಆದಿಸೃಷ್ಟಿಯಲ್ಲಿ ಶ್ರೀ ಹರಿಯೇ ಮಾಡಿರುವುದರಿಂದ ಪುನಃ ಮಾಡಬೇಕೆನ್ನುವುದು ಕೂಡಲಾರದು. (3) ಮಿಥ್ಯಾಜ್ಞಾನಕ್ಕೂ ಕಲಿಯೇ ಅಭಿಮಾನಿಯಾಗಿರುವುದರಿಂದ ಕಲಿದ್ವೇ ಮತ್ತೊಂದು ರೂಪವು ॥ ೩೮ ॥

ಮೂ ॥　ಅದೃಶ್ಯಮಜ್ಞೇಯಮತರ್ಕ್ಯರೂಪಂ
ಕಲಿಂ ನಿಲೀನಂ ಹೃದಯೇಽಖಿಲಸ್ಯ ॥
ಸಚ್ಛಾಸ್ತ್ರಶಸ್ತ್ರೇಣ ನಿಹತ್ಯ ಶೀಘ್ರಂ
ಘನಂ ನಿಜಂ ದೇಹಿ ಮಹಾಜನಸ್ಯ ॥ ೩೯ ॥

ಅ || ದೃಷ್ಟಿಗೆ ಅಗೋಚರನಾದವನು, ಎಲ್ಲಿಯೂ ಇದ್ದಾನೆಂದು ತಿಳಿಯಲು ಅಶಕ್ಯನು. ಅನುಮಾನದಿಂದ ಇಂತಹ ರೂಪವುಳ್ಳವನೆಂದು ಊಹಿಸಲಿಕ್ಕೆ ಅಶಕ್ಯನು, ಎಲ್ಲಾ ಜಗತ್ತಿನ ಮನಸ್ಸಿನಲ್ಲಿಯೂ ಗೋಪ್ಯವಾಗಿ ಇರತಕ್ಕವನು, ಇಂತಹ ಕಲಿಯನ್ನು ನಿರ್ದುಷ್ಟವಾದ ಶಾಸ್ತ್ರವೆನ್ನುವ ಶಸ್ತ್ರದಿಂದ ಶೀಘ್ರದಲ್ಲಿ ಸಂಹರಿಸಿ ಭಕ್ತಜನರಿಗೆ ತನ್ನ ಸ್ಥಾನವನ್ನು ಕೊಡು.

ವಿಶೇಷಾಂಶ— ದೇಹವನ್ನು ಸಂಹರಿಸಿದರೆ ಜೀವತ ಹನನದಂತೆ ಕಲಿಗೇನೇ ಹನನವು ಎನ್ನುವ ಅಭಿಪ್ರಾಯದಿಂದ'ಸಚ್ಛಾಸ್ತ್ರಶಸ್ತ್ರೇಣ ಕಲಿಂ ನಿಹತ್ಯ' ಎಂದು ಹೇಳಿರುವರು. || ೩೯ ||

ಮೂ || ಯತೇ ಭವಂತಂ ನ ಹಿ ತಂ ನಿಹಂತಾ
ತ್ವಮೇಕ ಏವಾಖಿಲಶಕ್ತಿಪೂರ್ಣಃ |
ತತೋ ಭವಂತಂ ಶರಣಂ ಗತಾ ವಯಂ
ತಮೋ ನಿಹತ್ಯೈ ನಿಜಬೋಧವಿಗ್ರಹಂ || ೪೦ ||

ಅ || ನಿನ್ನನ್ನು ಹೊರತು ಆ ಕಲಿಯನ್ನು ಸಂಹರಿಸುವವನು ಇಲ್ಲವೇ ಇಲ್ಲ. ನೀನು ಒಬ್ಬನೇ ಅಖಿಲಶಕ್ತಿಯಿಂದ ಪೂರ್ಣನು. ಕಲ್ಕಿರೂಪದಿಂದ ಆ ಕಲಿಯನ್ನು ಶ್ರೀ ಹರಿಯು ಸಂಹರಿಸುತ್ತಾನೆನ್ನುವುದು ಸುಪ್ರಸಿದ್ಧವು. ಆದುದರಿಂದ ನಾವು ಅಜ್ಞಾನವನ್ನು ನಾಶಮಾಡುವುದಕ್ಕಾಗಿ ಸ್ವರೂಪಜ್ಞಾನವೇ ಶರೀರವಾಗಿವುಳ್ಳ ನಿನ್ನನ್ನು ರಕ್ಷಕನನ್ನಾಗಿ ಹೊಂದಿರುತ್ತೇವೆ. || ೪೦ ||

ಮೂ || ಇತೀರಿತಸ್ತೈರಭಯಂ ಪ್ರದಾಯ
ಸುರೇಶ್ವರಾಣಾಂ ಪರಮೋಽಪ್ರಮೇಯಃ |
ಪ್ರಾದುರ್ಬಭೂವಾವ್ಯತಭೂರಿಲಾಯಾಂ
ವಿಶುದ್ಧವಿಜ್ಞಾನಘನಸ್ವರೂಪಃ || ೪೧ ||

ಅ || ಈ ಪ್ರಕಾರ ಆ ದೇವತೆಗಳಿಂದ ಹೇಳಿಸಿಕೊಳ್ಳಲ್ಪಟ್ಟ, ಸರ್ವೋತ್ತಮನಾದ, ತಿಳಿಯಲಿಕ್ಕೆ ಅಶಕ್ಯನಾದ, ಕ್ಷಯರಹಿತನಾದ, ಆನಂದಾದಿ ಗುಣಗಳಿಗೆ ಆಶ್ರಯನಾದ ಅಥವಾ ಮುಕ್ತರಿಗೆ ಆಶ್ರಯಭೂತನಾದ, ಅಜ್ಞಾನಲೇಶರಹಿತನಾದ, ವಿಶೇಷ ಜ್ಞಾನದಿಂದ ಪೂರ್ಣವಾದ ಸ್ವರೂಪವುಳ್ಳ ಶ್ರೀ ಹರಿಯು ಅಥವಾ ಅನ್ಯಂತರಹಿತವಾದ ವಿಶೇಷಜ್ಞಾನದಿಂದ ಪೂರ್ಣವಾದ ಸ್ವರೂಪವುಳ್ಳ ಶ್ರೀ ಹರಿಯು ದೇವಶ್ರೇಷ್ಠರಿಗೆ ಅಭಯವನ್ನು ಕೊಟ್ಟು ಭೂಮಿಯಲ್ಲಿ ಪ್ರಾದುರ್ಭವಿಸಿದನು.

ವಿಶೇಷಾಂಶ— (1) ಶ್ರೀ ಹರಿಗೆ ಸಾಕ್ಷಾತ್ ಉತ್ಪತ್ತಿಯಿಲ್ಲವೆನ್ನುವ ಅಭಿಪ್ರಾಯದಿಂದ 'ಅವ್ಯಾತಭೂಃ ಪ್ರಾದುರ್ಬಭೂವ' ಎಂದು ಹೇಳಿರುವರು. ಶ್ರೀ ಹರಿಗೆ ಉತ್ಪತ್ತಿಯಾದರೆ ಅವನ ಉದರದಲ್ಲಿರತಕ್ಕ ಮುಕ್ತರಿಗೂ ಕೂಡ ಪುನಃ ಉತ್ಪತ್ತಿಯಾಗಬೇಕಾಗುವುದು. || ೪೧ ||

ಹೇಗೆ ಸ್ತಂಭದಲ್ಲಿ ಪ್ರಾದುರ್ಭವಿಸಿರುವನೋ ಹಾಗೆಯೇ, ಭೂಮಿಯಲ್ಲಿ ಅವತರಿಸಿರುವನೋ ಏನು ಎಂದರೆ—

ಮೂ ॥ ವಸಿಷ್ಠನಾಮಾ ಕಮಲೋದ್ಭವಾತ್ಮಜಃ
ಸುತೋಽಸ್ಯ ಶಕ್ತಿಸ್ತನಯಃ ಪರಾಶರಃ ॥
ತಸ್ಯೋತ್ತಮಂ ಸೋಽಪಿ ತಪೋಽಚರದ್ಧರೇಃ
ಸುತೋ ಮಮ ಸ್ಯಾದಿತಿ ತದ್ಧರಿರ್ದದೌ ॥೪೨॥

ಅ ॥ ವಸಿಷ್ಠನೆಂದು ಹೆಸರುಳ್ಳವನು ಕಮಲದಲ್ಲಿ ಹುಟ್ಟಿದ ಬ್ರಹ್ಮನ ಮಗನು. ಈ ವಸಿಷ್ಠನ ಮಗನು ಶಕ್ತಿಯು. ಆ ಶಕ್ತಿಯ ಮಗನು ಪರಾಶರನು. ಆ ಪರಾಶರನು ಹರಿಯೇ ನನಗೆ ಮಗನಾಗಲಿ, ಎಂದು ತಪಸ್ಸನ್ನು ಮಾಡಿರುವನು. ಶ್ರೀ ಹರಿಯು ಆ ಅಭೀಷ್ಟವನು ಕೊಟ್ಟನು. ॥ ೪೨ ॥

ಮೂ ॥ ಉವಾಚ ಚೈನಂ ಭಗವಾನ್ಸುತೋಷಿತೋ
ವಸೋರ್ಮದೀಯಸ್ಯ ಸುತಾಸ್ತಿ ಶೋಭನಾ ॥
ವನೇ ಮೃಗಾರ್ಥಂ ಚರತೋಽಸ್ಯ ವೀರ್ಯಂ
ಪಪಾತ ಭಾರ್ಯಾಂ ಮನಸಾ ಗತಸ್ಯ ॥ ೪೩ ॥
ತಚ್ಛ್ಯೇನಹಸ್ತೇ ಪ್ರದದೌ ಸ ತಸ್ಯೈ
ದಾತುಂ ತದನ್ಯೇನ ತು ಯುಧ್ಯತೋಽಪತತ್ ॥
ಜಗ್ರಾಸ ತನ್ಮತ್ಸ್ಯವಧೂರ್ಯಮುಸ್ವಸು-
ರ್ಜಲಸ್ಥಮೇನಾಂ ಜಗೃಹುಃಸ್ಮ (ಚ)ದಾಶಾಃ ॥ ೪೪ ॥
ತದ್ಗರ್ಭತೋಽಭೂನ್ಮಿಥುನಂ ಸ್ವರಾಜ್ಞೇ
ನ್ಯವೇದಯನ್ಸೋಽಪಿ ವಸೋಃ ಸಮರ್ಪಯತ್ ॥
ಪುತ್ರಂ ಸಮಾದಾಯ ಸುತಾಂ ಸ ತಸ್ಮೈ
ದದೌ ಸುತೋಽಭೂದಥ ಮತ್ಸ್ಯರಾಜಃ ॥ ೪೫ ॥
ಕನ್ಯಾ ತು ಸಾ ದಾಶರಾಜಸ್ಯ ಸದ್ಮ-
ನ್ಯವರ್ಧತಾತೀವ ಸುರೂಪಯುಕ್ತಾ ॥
ನಾಮ್ನಾ ತು (ಚ) ಸಾ ಸತ್ಯವತೀತಿ ತಸ್ಯಾಂ
ತವಾತ್ಮಜೋಽಹಂ ಭವಿತಾಸ್ಮ್ಯಜೋಽಪಿ ॥ ೪೬ ॥

ಅ ॥ (ಪರಾಶರ ಋಷಿಯಿಂದ ತಪಸ್ಸಿನಿಂದ) ಚೆನ್ನಾಗಿ ಸಂತೋಷಿಸಿಕೊಳ್ಳಲ್ಪಟ್ಟ (ಅಂದರೆ ಸಂತುಷ್ಟರಾದ) ಪೂಜ್ಯನಾದ ಶ್ರೀ ಹರಿಯು ಈ ಪರಾಶರ ಋಷಿಯನ್ನು ಕುರಿತು ಹೇಳಿದನು. (ಏನು ಹೇಳಿದನೆಂದರೆ) ನನ್ನ ಭಕ್ತನಾದ ವಸುರಾಜನಿಗೆ ಅತಿ ಪುಣ್ಯಕರ್ಮವುಳ್ಳ ಮಗಳು ಇದ್ದಾಳೆ. (ಅವಳ ಉತ್ಪತ್ತಿಪೂರ್ವಕವಾಗಿ ಕಥೆಯನ್ನು ಹೇಳುತ್ತಾರೆ.) ಕಾಡಿನಲ್ಲಿ ಮೃಗಗಳನ್ನು ಕೊಲ್ಲುವುದಕ್ಕಾಗಿ ಸಂಚರಿಸಿಕೊಂಡಿರುತ್ತಿದ್ದ ಹೆಂಡತಿಯನ್ನು ಮನಸ್ಸಿನಿಂದ ಹೊಂದಿದ ಈ ವಸುರಾಜನ ರೇತಸ್ಸು ಕೆಳಗೆ ಸುರಿದುಹೋಯಿತು.. ಆ ವಸುರಾಜನು ಹೆಂಡತಿಗೋಸ್ಕರ ಆ ವೀರ್ಯವನ್ನು ಕೊಡುವುದಕ್ಕಾಗಿ ಶ್ಯೇನಾಖ್ಯಪಕ್ಷಿವಿಶೇಷದ, (ಅಂದರೆ ಗಿಡುಗಹಕ್ಕಿಯ) ಕೈಯಲ್ಲಿ

ಕೊಟ್ಟನು. ಮತ್ತೊಂದು ಶ್ಯೇನಪಕ್ಷಿಯಿಂದ ವಿಶೇಷವಾಗಿ ಯುದ್ಧಮಾಡತಕ್ಕ (ಅಂದರೆ ತುಂಡ ಮಾತ್ರ ಯುದ್ಧವನ್ನು ಬಿಟ್ಟು ಹಸ್ತಪಕ್ಷಗಳಿಂದ ಕೂಡಿಕೊಂಡು ಎರಡು ಶ್ಯೇನಗಳೂ ಯಮುನಾ ಜಲದ ಮೇಲುಭಾಗದಲ್ಲಿರತಕ್ಕ ಆಕಾಶಪ್ರದೇಶದಲ್ಲಿ ಯುದ್ಧಮಾಡುತ್ತಾ ಇರುವ) ವಸುರಾಜನ ಶ್ಯೇನದೆಶೆಯಿಂದ ಆ ವೀರ್ಯವು (ಯಮುನಾ ಜಲದಲ್ಲಿ) ಬಿದ್ದಿತು. ಯಮುನ ತಂಗಿಯಾದ ಯಮುನಾ ನದಿಯ ಜಲದಲ್ಲಿರತಕ್ಕ ಆ ವೀರ್ಯವನ್ನು ಹೆಣ್ಣು ಮತ್ಸ್ಯವು ನುಂಗಿಬಿಟ್ಟಿತು. ಈ ಹೆಣ್ಣು ಮತ್ಸ್ಯವನ್ನು ಮೊಗೆಯರು ಹಿಡಿದರು. ಆ ಹೆಣ್ಣು ಮತ್ಸ್ಯದ ಗರ್ಭದೆಶೆಯಿಂದ ಕನ್ಯಾ ಪುತ್ರಾತ್ಮಕವಾದ ಎರಡು ಆಯಿತು. (ಅಂದರೆ— ಗಂಡುಮಗನೊಬ್ಬನೂ ಹೆಣ್ಣುಮಗಳೊಬ್ಬಳೂ ಹೀಗೆ ಇಬ್ಬರು ಹುಟ್ಟಿದರು.) ಆ ಮೊಗೆಯರು ತಮಗೆ ಸ್ವಾಮಿಯಾದ ದಾಶರಾಜನಿಗೋಸ್ಕರ (ಆ ಎರಡು ಮಕ್ಕಳನ್ನು ಸಮರ್ಪಿಸಿದನು. ಆ ದಾಶರಾಜನು ಆ ಎರಡು ಮಕ್ಕಳನ್ನು ವಸು ರಾಜನಿಗೆ ಸಮರ್ಪಿಸಿದನು. ಆ ವಸುರಾಜನು ತಾನು ಮಗನನ್ನು ಇಟ್ಟುಕೊಂಡು ಮಗಳನ್ನು (ಹುಡುಗಿಯನ್ನು) ಆ ದಾಶರಾಜನಿಗೋಸ್ಕರ ಕೊಟ್ಟನು. ಆ ಕಾರಣದಿಂದ ಅಂದರೆ ಹೆಣ್ಣು ಮತ್ಸ್ಯದ ಶರೀರದಿಂದ ಹುಟ್ಟಿರುವಪ್ರಯುಕ್ತ) ವಸುರಾಜನ ಮಗನು ಮತ್ಸ್ಯಸಂಬಂಧಿಯಾದ ರಾಜನು ಆದನು. ವಿಶೇಷವಾಗಿ(ಅಂದರೆ—ದಾಶರಾಜನ ಮಗಳಲ್ಲ. ಮತ್ತೆ ವಸುರಾಜನ ಮಗಳು ಎನ್ನುವ ವಿಶೇಷದಿಂದ) ಆ ಹುಡುಗಿಯು ಅತ್ಯಂತವಾಗಿ ಸುಂದರರೂಪದಿಂದ ಕೂಡಿದವಳು. ಯಾರಿಂದಲೂ ಪಾಣಿಗ್ರಹಣಮಾಡಿಸಿಕೊಳ್ಳದಿದ್ದವಳು. ಅವಳು ನಾವಿಕರಿಗೆ ರಾಜನಾದ ದಾಶ ರಾಜನ ಮನೆಯಲ್ಲಿಯೇ ಬೆಳೆದಳು. ಆ ವಸುರಾಜನ ಮಗಳು ನಾಮದಿಂದ ಸತ್ಯವತಿಯೆಂದು ಪ್ರಸಿದ್ಧಳಾದಳು. ನಾನು ಉತ್ಪತ್ತಿರಹಿತನಾದಾಗ್ಯೂ ಆ ಸತ್ಯವತೀ ದೇವಿಯಲ್ಲಿ ನಿನ್ನ ಮಗ ನಾಗಿ ಅವತರಿಸುವೆನು. (ಎಂದು ಶ್ರೀ ಹರಿಯು ಪರಾಶರರನ್ನು ಕುರಿತು ಹೇಳಿದನು.) ॥ ೪೩ ॥

ಮೂ ॥ ಇತೀರಿತಶ್ಚಕ್ರಧರೇಣ ತಾಂ ಮುನಿ–
ರ್ಜಗಾಮ ಮಾರ್ತಂ (ತಾರ್ಂ) ಡಸುತಾಂ ಸಮುದ್ರಗಾಂ ॥
ಉತ್ತಾರಯಂತೀಮಥ ತತ್ರ ವಿಷ್ಣು :
ಪ್ರಾದುರ್ಬಭೂವಾಶು ವಿಶುದ್ಧ ಚಿದ್ಘನಃ ॥೪೭॥

ಅ ॥ ಈಪ್ರಕಾರವಾಗಿ ಚಕ್ರಧಾರಿಯಾದ ಶ್ರೀ ಹರಿಯಿಂದ ಹೇಳಿಸಿಕೊಳ್ಳಲ್ಪಟ್ಟ ಪರಾ ಶರಋಷಿಯು (ಅಥ) ವಸಿಷ್ಠ–ಯಾಜ್ಞವಲ್ಕ್ಯ ಮೊದಲಾದ ಮುನಿಗಳ ಸಭೆಯಲ್ಲಿ ವಿವಾಹ ಹೋಮಮಾಡಿದಮೇಲೆ ತಂದೆಯಾದ ಚಕ್ರವರ್ತಿಯು ಧಾರಾಪೂರ್ವಕವಾಗಿ ಸತ್ಯವತಿಯನ್ನು ದಾನಮಾಡಿದಮೇಲೆ (ಈ ಕಥೆಯು ಭಾರತದಲ್ಲಿ ಪ್ರಸಿದ್ಧವಾಗಿದೆ) ಸಮುದ್ರಕ್ಕೆ ಹೋಗತಕ್ಕ ಸೂರ್ಯನ ಮಗಳಾದ ಯಮುನಾನದಿಯನ್ನು ದೋಣಿಯಿಂದ ಜನರನ್ನು ದಾಟಿಸುವ ಆ ಸತ್ಯವತೀದೇವಿಯನ್ನು ಕ್ರೀಡಿಸಿದನು. ಕ್ರೀಡಾನಂತರದಲ್ಲಿ ಆ ಸತ್ಯವತೀದೇವಿಯಲ್ಲಿ ನಿರ್ಮಲವಾದ ಸಜ್ಞಾನದಿಂದ ಪೂರ್ಣವಾದ ಶ್ರೀ ಹರಿಯು ತಕ್ಷಣದಲ್ಲಿ ಅವತರಿಸಿದನು ॥ ॥ ೪೭ ॥

ಹಾಗಾದರೆ— ಪರಾಶರಋಷಿಯ ದೆಶೆಯಿಂದ ಸತ್ಯವತಿಯಲ್ಲಿ ಶ್ರೀ ಹರಿಯು ಅವತರಿಸಿ ದನು. ಎಂದು ಏತಕ್ಕೆ ಹೇಳಿರುವದು? ಲೌಕಿಕಜನರಂತೆ ಶುಕ್ಲರಕ್ತ ಸಂಬಂಧದೆಶೆಯಿಂದ ಹುಟ್ಟಿದ್ದಾನೆಂದು ಏಕೆ ಆಗಲಾರದು?—

ಮೂ ॥ ವಿದೋಷವಿಜ್ಞಾನಸುಖೈಕರೂಪೋ-
ಪ್ಯಜೋ ಜನಾನ್ಮೋಹಯಿತುಂ ವೃಥೈವ ॥
ಯೋಷತ್ಸು ಪುಂಸೋ ಹ್ಯಜನೀವ ದೃಶ್ಯತೇ
ನ ಜಾಯತೇ ಕ್ವಾಪಿ ಬಲಾದಿವಿಗ್ರಹಃ ॥ ೪೮ ॥

ಅ ॥ ನಿರ್ದುಷ್ಟಗಳಾದ ವಿಜ್ಞಾನಸುಖಗಳೇ ಕೇವಲ ರೂಪವಾಗಿವುಳ್ಳ ಶ್ರೀ ಹರಿಯು ಉತ್ಪತ್ತಿರಹಿತನಾದಾಗ್ಯೂ ಅಯೋಗ್ಯ ಜನರನ್ನು ಮೋಹಿಸುವುದಕ್ಕಾಗಿ ವ್ಯರ್ಥವಾಗಿಯೇ ಪುರುಷನಿಂದ ಸ್ತ್ರೀಯರಲ್ಲಿ ಹುಟ್ಟಿದವನಂತೆ ಕಾಣಿಸಿಕೊಳ್ಳಲ್ಪಡುತ್ತಾನೆ. (ಹಿ) 'ನಿತ್ಯೋ ನಿತ್ಯಾನಾಂ'ಇತ್ಯಾದಿಶ್ರುತಿಗಳಿಂದ ಶ್ರೀ ಹರಿಗೆ ಪರಮನಿತ್ಯತ್ವವು ಪ್ರಸಿದ್ಧವು. ಬಲಜ್ಞಾನ ಆನಂದ ಮೊದಲಾದ ಗುಣಗಳೇ ಶರೀರವಾಗಿವುಳ್ಳ ಶ್ರೀ ಹರಿಯು ಎಲ್ಲಿಯೂ ಯಾವ ಅವತಾರದಲ್ಲಿಯೂ ಹುಟ್ಟುವುದೇ ಇಲ್ಲವು.

ವಿಶೇಷಾಂಶ— (1) ವೇದವ್ಯಾಸರ ಉತ್ಪತ್ತಿಯು ಭಾರತದಲ್ಲಿ ಹೇಳಿದಪ್ರಕಾರ ಅತಿ ಶೋಭನವಾದುದೇ. 'ಕಾನೀನೋ ವ್ಯಾಸಃ' ಎನ್ನುವ ವಚನವು ಭಾರತಕಥಾ ಪರಿಜ್ಞಾನವಿಲ್ಲದಿರುವ ಅವಿದ್ವಾಂಸರ ವಚನವು. (2) ಚಿತ್ಸದ್ದ್ವಾರಾ ತಾಯಿಯ ಉದರಪ್ರವೇಶವಾದಾಗ್ಯೂ ಹೇಗೆ ಶುಕ್ಲಶೋಣಿತಾದಿ ಮಲಸಂಬಂಧವಾಗಲಾರದೋ ಅಂತಹ ಸಾಮರ್ಥ್ಯವಿದೆ ಎಂದು ಸೂಚಿಸುವುದಕ್ಕಾಗಿ 'ಬಲಾದಿವಿಗ್ರಹಃ' ಎಂದು ಹೇಳಿರುವರು ॥ ೪೮ ॥

ಹಿಂದೆ ಹೇಳಿದ ಅರ್ಥವನ್ನು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ—

ಮೂ ॥ ಯಥಾ ನೃಸಿಂಹಾಕೃತಿರಾವಿರಾಸೀ-
ತ್ಸ್ತಂಭಾತ್ತಥಾ ನಿತ್ಯರನುತ್ತಮೋ ವಿಭುಃ ॥
ಆವಿರ್ಭವೇದ್ಯೋಷಿತಿ ನೋ ಮಲೋತ್ಥ-
ಸ್ತಥಾಪಿ ನೋಹಾಯ ನಿದರ್ಶಯೇತ್ತಥಾ ॥ ೪೯ ॥

ಅ ॥ ಹೇಗೆ ನರ-ಸಿಂಹಗಳ ಆಕಾರವುಳ್ಳ ನರಸಿಂಹರೂಪಿಯಾದ ಶ್ರೀ ಹರಿಯು ಸ್ತಂಭದೆಶೆಯಿಂದ ಆವಿರ್ಭವಿಸಿರುವನೋ, ಹಾಗೆಯೇ (ನರಸಿಂಹರೂಪದಂತೆಯೇ) ಸರ್ವತ್ರ ವ್ಯಾಪಕನಾದ ಶ್ರೀ ಹರಿಯು ಅವಿನಾಶಿಯಾದ ಸ್ವರೂಪವುಳ್ಳವನಾದುದರಿಂದ ಸ್ತ್ರೀಯಲ್ಲಿ ಆವಿರ್ಭವಿಸಿರುವನು. ಶುಕ್ಲಶೋಣಿತಾಖ್ಯವಾದ ಮಲದೆಶೆಯಿಂದ ಹುಟ್ಟಿದವನಲ್ಲ; ಆದಾಗ್ಯೂ ಮಲದಿಂದ ಹುಟ್ಟಿದವನಂತೆಯೇ ಅಯೋಗ್ಯರಿಗೆ ಮಿಥ್ಯಾಜ್ಞಾನ ಹುಟ್ಟುವುದಕ್ಕಾಗಿಯೇ ತೋರಿಸುವನು ॥೪೯॥

ಮೋಹಕಾರಣವನ್ನು ತೋರಿಸುತ್ತಾರೆ—

ಮೂ ॥ ಸ್ತ್ರೀಪುಂಪ್ರ (ಸ) ಸಂಗಾತ್ಪರತೋ ಯತೋ ಹರಿಃ
ಪ್ರಾದುರ್ಭವತ್ಯೇಷ ವಿಮೋಹಯಜ್ಜನಂ ॥
ಅತೋ ಮಲೊತ್ಥೋಽಯಮಿತಿ ಸ್ಮ ಮನ್ಯತೇ
ಜನೋಽಶುಭಃ ಪೂರ್ಣಗುಣೈಕವಿಗ್ರಹಂ ॥ ೫೦ ॥

ಅ || ಸ್ತ್ರಿಯರು ಪುರುಷರು ಇವರ ಸಂಬಂಧದವೆಶೆಯಿಂದ ಉತ್ತರಕಾಲದಲ್ಲಿ ಯಾವ ಕಾರಣದಿಂದ ಈ ಶ್ರೀ ಹರಿಯು ಜನರನ್ನು ಮೋಹಿಸುವವನಾಗಿ ಪ್ರಾದುರ್ಭವಿಸುತ್ತಾನೋ, ಆದಕಾರಣ ಶ್ರೀ ಹರಿಯು ಸ್ತ್ರೀಪುರುಷರ ಶುಕ್ರರಕ್ತರೂಪವಾದ ಮಲದಿಂದಲೇ ಹುಟ್ಟಿದವನು ಎಂದು ಪಾಪಿಷ್ಠರಾದ ಜನರು ಪೂರ್ಣಗಳಾದ ಗುಣಗಳೇ ಮುಖ್ಯವಾದ ಶರೀರವಾಗಿವುಳ್ಳ ಶ್ರೀ ಹರಿಯನ್ನು ತಿಳಿದುಕೊಳ್ಳುತಾರೆ || ೫೦ ||

ಪ್ರಾದುರ್ಭಾವಸ್ಥಲವನ್ನು ಹೇಳುತ್ತಾ ಶ್ರೀ ಹರಿಗೆ ಉತ್ಪತ್ತಿಯಿಲ್ಲವೆನ್ನುವುದನ್ನು ತೋರಿಸಿ ಕೊಡತಕ್ಕ ದೃಷ್ಟಾಂತವನ್ನು ಹೇಳುತ್ತಾರೆ—

ಮೂ || ದ್ವೀಪೇ ಭಗಿನ್ಯಾಶ್ಚ ಯಮುಸ್ಯ ವಿಶ್ವಕೃ-
ತ್ಪ್ರಕಾಶತೇ ಜ್ಞಾನಮರೀಚಿಮಂಡಲಃ ||
ಪ್ರಭಾಸಯನ್ನಂಡಬಹಿಸ್ತಥಾಂತಃ
ಸಹಸ್ರಲಕ್ಷಾಮಿತಭಾನುದೀಧಿತಿಃ || ೫೧ ||

ಅ || ಕಿರಣಗಳಂತೆ ಇರತಕ್ಕ ಜ್ಞಾನಗಳ ಸಮೂಹವುಳ್ಳವನು, ಬ್ರಹ್ಮಾಂಡದ ಹೊರಗೂ ಹಾಗೆಯೇ ಒಳಗೂ ಪ್ರಕಾಶಪಡಿಸುವವನು. ಸಹಸ್ರ (೧,೦೦೦) ಲಕ್ಷ (೧,೦೦೦೦೦) ಅಪರಿಮಿತ ಸೂರ್ಯರ ಕಾಂತಿಯಂತೆ ಕಾಂತಿಯುಳ್ಳ ಸರ್ವ ಜಗಜ್ಜನಕನಾದ ಶ್ರೀ ಹರಿಯು ಯಮನ ತಂಗಿಯಾದ ಯಮುನಾನದಿಯ ದ್ವೀಪ (ಜಲಾವೃತಪ್ರದೇಶ) ದಲ್ಲಿ ಪ್ರಕಾಶಿಸುತ್ತಾನೆ.

ವಿಶೇಷಾಂಶ— (1)ಅಧಮಾಧಿಕಾರಿಗಳಿಗೆ ಸಹಸ್ರಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಶ್ರೀ ಹರಿಯನ್ನು, ಮಧ್ಯಮಾಧಿಕಾರಿಗಳಿಗೆ ಲಕ್ಷಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಶ್ರೀ ಹರಿಯನ್ನು, ಉತ್ತಮಾಧಿಕಾರಿಗಳಿಗೆ ಅಮಿತ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಶ್ರೀ ಹರಿಯನ್ನು ನೋಡಲಿಕ್ಕೆ ಯೋಗ್ಯತೆಯಿದೆ ಎಂದು ಸೂಚಿಸುವುದಕ್ಕಾಗಿ 'ಸಹಸ್ರಲ ಅಮಿತ ಸೂರ್ಯದೀಧಿತಿಃ' ಎಂದು ಹೇಳಿರುವರು || ೫೧ ||

ಅವತಾರಮಾಡಿರುವ ಶ್ರೀ ಹರಿಯ ಸ್ವರೂಪವನ್ನೂ, ಸಾಮರ್ಥ್ಯವನ್ನೂ ತೋರಿಸುತ್ತಾರೆ–

ಮೂ || ಅಗಣ್ಯದಿವ್ಯೋರುಗುಣಾರ್ಣವಃ ಪ್ರಭುಃ
ಸಮಸ್ತವಿದ್ಯಾಧಿಪತಿರ್ಜಗದ್ಗುರುಃ ||
ಅನಂತಶಕ್ತಿರ್ಜಗದೀಶ್ವರೇಶ್ವರಃ
ಸಮಸ್ತದೋಷಾತಿವಿದೂರವಿಗ್ರಹಃ || ೫೨ ||
ಶುಭಮರಕತ(ತಕ) ವರ್ಣೋ ರಕ್ತಪಾದಾಬ್ಜನೇತ್ರಾ–
ಧರಕರನಖರಸನಾಗ್ರಶ್ಚಕ್ರಶಂಖಾಬ್ಜರೇಖಃ ||
ರವಿಕರವರಗೌರಂ ಚರ್ಮ ಚೈಣಂ ವಸಾನ–
ಸ್ತಟಿದಮಲಜಟಾಸಂದೀಪ್ತಚೂಡಂ (ಚೂಟಂ) ದಧಾನಃ || ೫೩ ||
ವಿಸ್ತೀರ್ಣವಕ್ಷಾಃ ಕಮಲಾಯತಾಕ್ಷೋ
ಬೃಹದ್ಭುಜಃ ಕಂಬುಸಮಾನಕಂಠಃ ||

ಸಮಸ್ತವೇದಾನ್ಮುಖತಃ ಸಮುದ್ಗಿರನ್
ಅನಂತಚಂದ್ರಾಧಿಕಕಾಂತಿ(ತ)ಸನ್ಮುಖಃ ॥ ೫೪ ॥
ಪ್ರಬೋಧಮುದ್ರಾಭಯದೋರ್ದ್ವಯಾನ್ವಿತೋ
ಯಜ್ಞೋಪವಿತಾಜಿನಮೇಖಲೋಲ್ಲಸನ್ ॥
ದೃಶಾ ಮಹಜ್ಞಾನಭುಜಂಗದಷ್ಟ-
ಮುಜ್ಜೀವಯಾನೋ ಜಗದತ್ಯರೋಚತ ॥ ೫೫ ॥

ಅ ॥ ಗಣನ ಮಾಡಲಿಕ್ಕೆ ಅಶಕ್ಯಗಳಾದ ಲೋಕವಿಲಕ್ಷಣಗಳಾದ ಉತ್ತಮಗಳಾದ ಗುಣಗಳಿಂದ ಸಮುದ್ರದಂತೆ ಇರುವವನು, ಜಗದುತ್ಪಾತಕನು ಅಥವಾ ಸರ್ವಸಮರ್ಥನು, ಎಲ್ಲಾ ವಿದ್ಯೆಗಳಿಗೂ ಅಧಿಪತಿಯು, ಜಗತ್ತುಗಳಿಗೆ ಗುರುವಾದವನು, ಅಪರಿಮಿತಶಕ್ತಿಯುಳ್ಳವನು, ಜಗದ್ವೀಶ್ವರನಾದ ಬ್ರಹ್ಮಾದಿಗಳಿಗೆ ಸ್ವಾಮಿಯು, ಎಲ್ಲಾ ದೋಷಗಳಿಂದಲೂ ಅತ್ಯಂತ ವಿದೂರವಾದ ಶರೀರವುಳ್ಳವನು, ಶುದ್ಧವಾದ ಇಂದ್ರನೀಲಮಣಿಯಂತೆ ವರ್ಣವುಳ್ಳವನು; ರಕ್ತಗಳಾದ ಪಾದಕಮಲಗಳೂ, ನೇತ್ರಗಳೂ, ಅಧರೋಷ್ಠವೂ ಹಸ್ತಗಳೂ ಉಗುರುಗಳೂ, ನಾಲಗೆಯ ತುದಿಯೂ ಇವುಗಳುಳ್ಳವನು, ಚಕ್ರ-ಶಂಖ-ಕಮಲ-ಇವುಗಳಂತೆಯೇ ರೇಖೆಯುಳ್ಳವನು, (ಅಂದರೆ—ಹಸ್ತಪಾದಗಳಲ್ಲಿ ಚಕ್ರಾದಿಗಳುಳ್ಳ ರೇಖೆಗಳು ಇವೆ.) ಸೂರ್ಯನ ಶ್ರೇಷ್ಠಗಳಾದ ಕಿರಣಗಳಂತೆ ಶುಭ್ರವಾದ ಅಥವಾ ಸೂರ್ಯನ ಕಿರಣದಂತೆ ಉತ್ತಮವಾದ ಶುಭ್ರವರ್ಣವಾದ ಜಿಂಕೆಯ ಸಂಬಂಧಿಯಾದ ಚರ್ಮವನ್ನು ಧರಿಸಿರುವವನು, ಮಿಂಚಿನಂತೆ ನಿರ್ಮಲಗಳಾದ ಜಟೆಗಳಿಂದ ಚೆನ್ನಾಗಿ ಪ್ರಕಾಶಿಸತಕ್ಕ ಶಿಖಾಗಳುಳ್ಳ ಶಿರಸ್ಸನ್ನು ಧರಿಸಿಕೊಂಡು ಇರುವವನು (ಅಂದರೆ—ಶಿರಸ್ಸಿನಲ್ಲಿ ಸುತ್ತಲೂ ಇರತಕ್ಕ ಜಟೆಗಳಿಂದ ಪ್ರಕಾಶಿಸಿಕೊಂಡು ಇರುವ ಮಧ್ಯ ಶಿಖೆಯನ್ನು ಧರಿಸಿಕೊಂಡು ಇರುವವನು, ವಿಸ್ತೀರ್ಣವಾದ ವಕ್ಷಸ್ಥಳವುಳ್ಳವನು, ಕಮಲದಳನಂತೆ ವಿಶಾಲಗಳಾದ ಕಣ್ಣುಗಳುಳ್ಳವನು, ಶ್ರೇಷ್ಠವಾದ ಭುಜಗಳುಳ್ಳವನು, ಶಂಖದಿಂದ ಸದೃಶವಾದ ಕುತ್ತಿಗೆಯುಳ್ಳವನು, (ಅಂದರೆ—ಮೂರು ರೇಖೆಗಳಿಂದ ಕೂಡಿದ ಮಧ್ಯದಲ್ಲಿ ಎತ್ತರವಾದ ಕಂಠವುಳ್ಳವನು) ಸಮಸ್ತವೇದಗಳನ್ನು ಮುಖದಿಂದಲೇ ಚೆನ್ನಾಗಿ ಉಚ್ಚರಿಸಿಕೊಂಡು ಇರುವವನು, ಅನಂತಾನಂತ ಚಂದ್ರರಿಂದಲೂ ಅಧಿಕವಾದ ಕಾಂತಿಯುಳ್ಳ ನಿರ್ದುಷ್ಟವಾದ ಮುಖವುಳ್ಳವನು, ಜ್ಞಾನಮುದ್ರಾ—ಅಭಯಮುದ್ರಾ ಇವುಗಳುಳ್ಳ ಎರಡು ಕೈಗಳಿಂದ ಚಿಹ್ನಿತನಾದವನು, ಅಥವಾ ಯುಕ್ತನಾದವನು, ಯಜ್ಞೋಪವೀತವೂ ಉಪವೀತದಿಂದ ಕೂಡಿಕೊಂಡು ಧರಿಸಲ್ಪಡತಕ್ಕ ಕೃಷ್ಣಾಜಿನವೂ ಮೌಂಜಿಯೂ ಇವುಗಳಿಂದ ಶೋಭಿಸಿಕೊಂಡು ಇರುವವನು, ಪ್ರಸನ್ನದೃಷ್ಟಿಯಿಂದ ಮಹತ್ತಾದ ಅಜ್ಞಾನಾಖ್ಯ ಸರ್ಪನಿಂದ ಕಚ್ಚಲ್ಪಟ್ಟ ಭಕ್ತರ ಸಮೂಹವನ್ನು ಬದುಕಿಸುತ್ತಿರುವ ಶ್ರೀ ವೇದವ್ಯಾಸ ರೂಪಿಯಾದ ಶ್ರೀ ಹರಿಯು ಮಹಾಜ್ಞಾನದಿಂದ ಲಕ್ಷ್ಮೀಮೊದಲಾದ ಎಲ್ಲಾ ಜಗತ್ತನ್ನೂ ಅತಿಕ್ರಮಿಸಿ ಶೋಭಿಸಿದನು ॥ ೫೨ ॥ ೫೩ ॥ ೫೪ ॥ ೫೫ ॥

ಮೂ ॥ ಸ ಲೋಕಧರ್ಮಾಭಿರಿರಕ್ಷಯಾ ಪಿತು-
ರ್ದ್ವಿಜತ್ವಮಸ್ಯಾಶು ಪಿತುರ್ದದೌ ನಿಜಂ ॥
ಜ್ಞಾನಂ ತಯೋಃ ಸಂಸ್ಕೃತಿಮಾತ್ರತಸ್ಸದಾ
ಪ್ರತ್ಯಕ್ಷಭಾವಂ ವರಮಾತ್ಮನೋ ದದೌ ॥ ೫೬ ॥

ಅ || ಆ ವೇದವ್ಯಾಸರು ಲೋಕಧರ್ಮಗಳನ್ನು ರಕ್ಷಿಸಬೇಕೆನ್ನುವ ಇಚ್ಛೆಯಿಂದ ತಂದೆಯ ಸಕಾಶದೆಶೆಯಿಂದ ಶೀಘ್ರದಲ್ಲಿ (ಅಂದರೆ— ಉತ್ಪತ್ತಿಯಾದನಂತರ ಏಳುದಿವಸದೊಳಗೇನೇ) ಬ್ರಾಹ್ಮಣತ್ವವನ್ನು ಹೊಂದಿ ತಂದೆಗೆ ತನ್ನ ಜ್ಞಾನವನ್ನು ಕೊಟ್ಟರು. ಆ ಮಾತಾ-ಪಿತೃಗಳಿಗೆ ಯಾವಾಗಲೂ ತನ್ನ ಭಕ್ತಿಪೂರ್ವಕವಾದ ಸ್ಮರಣಮಾತ್ರದೆಶೆಯಿಂದಲೇ ಸ್ವರೂಪಗೋಚರವಾದ ಪ್ರತ್ಯಕ್ಷತ್ವರೂಪವಾದ ವರವನ್ನು ಕೊಟ್ಟರು. (ಅಂದರೆ— ಯಾವಾಗ ನನ್ನನ್ನು ಸ್ಮರಿಸುತ್ತೀರೋ ಆಗ ನಿಮ್ಮಿಬ್ಬರಿಗೆ ಪ್ರತ್ಯಕ್ಷನಾಗುವೆನು. ಎಂದು ತಾಯಿಯನ್ನು ಕುರಿತು ತಾಯಿಯ ವಿಯೋಗಕಾಲದಲ್ಲಿ ಈ ವರವನ್ನು ಕೊಟ್ಟರು) || ೫೭ ||

ಮೂ || ದ್ವೈಪಾಯನಃ ಸೋಽಥ ಜಗಾಮ ಮೇರುಂ
ಚತುರ್ಮುಖಾದ್ಯೈರನುಗಮ್ಯಮಾನಃ ||
ಉದ್ಧೃತ್ಯ ವೇದಾನಖಿಲಾನ್ಸುರೇಭ್ಯೋ
ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ || ೫೭ ||

ಅ || ಆಮೇಲೆ ಆ ವೇದವ್ಯಾಸರು ಬ್ರಹ್ಮಾದಿದೇವತೆಗಳಿಂದ ಅನುಸರಿಸಿಕೊಳ್ಳಲ್ಪಟ್ಟವರಾಗಿ ಮೇರುಪರ್ವತವನ್ನು ಕುರಿತು ಹೋದರು. ಎಲ್ಲಾ ದೇವತೆಗಳನ್ನು ಉದ್ಧಾರಮಾಡಿ ಹೇಗೆ ಆದಿಸೃಷ್ಟಿಯಲ್ಲಿ (ಬ್ರಹ್ಮನಿಗೆ) ವೇದಾದಿವಿದ್ಯೆಗಳನ್ನು ಉಪದೇಶಿಸಿರುವರೋ (ಹಾಗೆಯೆ) ದೇವತೆಗಳಿಗೂ ಮುನಿಗಳಿಗೂ ಉಪದೇಶಮಾಡಿದರು || ೫೭ ||

ಮೂ || ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ
ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ ||
ತಚ್ಛುಶ್ರುವುರ್ಬ್ರಹ್ಮಗಿರೀಶಮುಖ್ಯಾಃ
ಸುರಾ ಮುನೀನಾಂ ಪ್ರವರಾಶ್ಚ ತಸ್ಮಾತ್ || ೫೮ ||

ಅ || ಆ ವೇದವ್ಯಾಸರು ಎಲ್ಲಾ ಶಾಸ್ತ್ರಗಳನ್ನೂ ಮಾಡಿ, ಹಾಗೆಯೇ ವಿಶೇಷಾಕಾರವಾಗಿ ನಿರ್ಣಾಯಕವಾದ ಬ್ರಹ್ಮಸೂತ್ರವನ್ನೂ ಮಾಡಿದರು. ಬ್ರಹ್ಮ ರುದ್ರ ಮೊದಲಾದ ದೇವತೆಗಳೂ ಮುನಿಗಳಮಧ್ಯದಲ್ಲಿ ಶ್ರೇಷ್ಠರಾದವರೂ ಕೂಡ ಆ ವೇದವ್ಯಾಸರ ದೆಶೆಯಿಂದ ಆ ಬ್ರಹ್ಮಸೂತ್ರವನ್ನು ಕೇಳಿದರು || ೫೮ ||

ಮೂ || ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ
ಚಕ್ರೇ ಮಹಾಭಾರತನಾಮಧೇಯಂ ||
ವೇದೋತ್ತಮಂ ತಚ್ಚ ವಿಧಾತೃಶಂಕರ
ಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಂ || ೫೯ ||

ಅ || ಸಮಸ್ತಶಾಸ್ತ್ರಗಳ ಅರ್ಥಕ್ಕೆ ದೃಷ್ಟಾಂತರೂಪವಾದ ವೇದಗಳಿಂದಲೂ ಉತ್ತಮವಾದ ಮಹಾಭಾರತವೆಂದು ಹೆಸರುಳ್ಳ ಗ್ರಂಥವನ್ನು ಮಾಡಿದರು. ಬ್ರಹ್ಮರುದ್ರರೇ ಪ್ರಧಾನರಾಗಿ ಉಳ್ಳ ದೇವತೆಗಳಿಂದ ಆ ವೇದವ್ಯಾಸರ ಮುಖದಿಂದಲೇ ಆ ಭಾರತವು ಕೇಳಲ್ಪಟ್ಟಿತು.

**ವಿಶೇಷಾಂಶ—** (1) ರಾಜಸೂಯದಲ್ಲಿ ಅಗ್ರಪೂಜೆಯಿಂದ ಕೃಷ್ಣನಿಗೆ ಶ್ರೇಷ್ಠತ್ವವು ತೋರಿಸಲ್ಪಟ್ಟಿದೆ. (2) ಬಾಲಲೀಲೆಯನ್ನು ಆರಂಭಿಸಿ ಭೀಮನಲ್ಲಿ ಸರ್ವರಿಂದಲೂ ಬಲಾತಿಶಯವೂ ವಿಷಭಕ್ಷಣ ಸರ್ಪದಂಶನಾದಿಗಳಿಂದ ಮರಣಾಭಾವ ಸಾಮರ್ಥ್ಯವೂ, ಕಾರಾಗೃಹದಿಂದ ಕುಂತೀ-ಯುಧಿಷ್ಠಿರ ಮೊದಲಾದವರೆಲ್ಲರನ್ನು ಹೊತ್ತುಕೊಂಡು ಹೋದುದರಿಂದಲೂ ಸರ್ವರಿಂದಲೂ ಸಂಹರಿಸಲಶಕ್ಯವಾದ ಜರಾಸಂಧಾದಿಗಳ ಸಂಹಾರದಿಂದಲೂ ಸಕಲ ದೇವೋತ್ತಮತ್ವವೂ ನಿದರ್ಶಿತವಾಗಿದೆ ॥ ೫೯ ॥

ಮೂ ॥ ಅಥೋ ಗಿರೀಶಾದಿಮನೋನುಶಾಯೀ
ಕಲಿರ್ಮಮಾರಾಶು ಸುವಾಙ್ಮಯೈಃ ಶರೈಃ ।
ನಿಕೃತ್ತಶೀರ್ಷೋ ಭಗವನ್ಮುಖೇರಿತೈಃ
ಸುರಾಶ್ಚ ಸಜ್ಜ್ಞಾನಸುಧಾರಸಂ ಪಪುಃ ॥ ೬೦ ॥

ಅ ॥ ಆ ಮೇಲೆ ರುದ್ರನೇ ಮೊದಲಾದ ದೇವತೆಗಳ ಮನಸ್ಸನ್ನು ಅನುಸರಿಸಿಕೊಂಡು ಇರತಕ್ಕ (ಅಂದರೆ— ಮನಸ್ಸುಗಳಲ್ಲಿ ಆವಾಸಮಾಡತಕ್ಕ) ಕಲಿಯು ವೇದವ್ಯಾಸರ ಮುಖದಿಂದ ಪ್ರಯುಕ್ತಗಳಾದ ವೇದ, ಭಾರತ, ಬ್ರಹ್ಮಸೂತ್ರ ಮೊದಲಾದ ಸದ್ವಾಕ್ಯರೂಪಗಳಾದ ಬಾಣಗಳಿಂದ ಛಿನ್ನವಾದ ತಲೆಯುಳ್ಳವನಾಗಿ ಶೀಘ್ರದಲ್ಲಿ ಮೃತನಂತೆ ಆದನು. ದೇವತೆಗಳು ಸುಧಾರಸದಂತೆ ಇರುವ ಸಮೀಚೀನ ಜ್ಞಾನವನ್ನು ಪಾನಮಾಡಿದರು ॥ ೬೦ ॥

ಮೂ ॥ ಅಥೋ ಮನುಷ್ಯೇಷು ತಥಾಸುರೇಷು
ರೂಪಾಂತರೈಃ ಕಲಿರೇವಾವಶಿಷ್ಟಃ ।
ತತೋ ಮನುಷ್ಯೇಷು ಚ ಸತ್ಸು ಸಂಸ್ಥಿತೋ
ವಿನಾಶ್ಯ ಇತ್ಯೇವ (ಸ) ಹರಿರ್ವ್ಯಚಿಂತಯತ್ ॥ ೬೧ ॥

ಅ ॥ ದೇವತೆಗಳ ಮನಸ್ಸಿನಿಂದ ಹೊರಟು ಹೋದ ಮೇಲೆ ತ್ರಿವಿಧ ಮನುಷ್ಯರಲ್ಲಿಯೂ, ಹಾಗೆಯೇ ಅಸುರರಲ್ಲಿಯೂ ರೂಪವಿಶೇಷಗಳಿಂದ ಕಲಿಯು ಅವಶಿಷ್ಟನೇ ಆಗಿರುತ್ತಾನೆ. ಉಳಿದಿರುವುದರಿಂದ ಮನುಷ್ಯೋತ್ತಮರಲ್ಲಿ ಇರತಕ್ಕ ಕಲಿಯು ನನ್ನಿಂದ ವಿನಾಶಪಡಿಸಲಿಕ್ಕೆ ಯೋಗ್ಯನು, ಹೀಗೆಯೇ ವೇದವ್ಯಾಸರು ಆಲೋಚಿಸಿದರು.

**ವಿಶೇಷಾಂಶ—** (1) ದೇವರ್ಷ್ಯಾದಿಗಳಲ್ಲಿರತಕ್ಕ ಮಿಥ್ಯಾಜ್ಞಾನಾಖ್ಯ ರೂಪಗಳಿಗೆ ವಾಙ್ಮಯಶರಗಳಿಂದ ಛಿನ್ನವಾದ ಶಿರಸ್ಸು ಇದ್ದಾಗ್ಯೂ ಉತ್ತಮ ಮನುಷ್ಯರಲ್ಲಿಯೂ ಮಧ್ಯಮ ಮನುಷ್ಯರಲ್ಲಿಯೂ ಅಧಮ ಮನುಷ್ಯರಲ್ಲಿಯೂ ಅಸುರರಲ್ಲಿಯೂ ಇರತಕ್ಕ ಮಿಥ್ಯಾಜ್ಞಾನಾಖ್ಯ ರೂಪಗಳೂ ಛಿನ್ನಗಳಾಗದೆ ಇದ್ದ ಶಿರಸ್ಸುಳ್ಳವುಗಳಾಗಿಯೇ ಅವಶಿಷ್ಟಗಳಾಗಿವೆ. ಆದರಲ್ಲಿ ಅವರ ಮುಖದಿಂದಲೇ ಅನಂತವೇದ ಶ್ರವಣದಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ ಸನ್ಮನುಷ್ಯರಲ್ಲಿರತಕ್ಕ ಮಿಥ್ಯಾಜ್ಞಾನಾಖ್ಯರೂಪಗಳಿಗೆ ಶಿರಃಛೇದವನ್ನು ಹೇಗೆ ಮಾಡತಕ್ಕದ್ದು ಎಂದು ಶ್ರೀ ಹರಿಯು ಆಲೋಚಿಸಿದನು. ॥ ೬೧ ॥

ಮೂ ॥ ತತೋ ನೃಣಾಂ ಕಾಲಬಲಾತ್ಸುಮಂದ-
ಮಾಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ ।

ವಿನ್ಯಾಸ ವೇದಾನ್ಸ ವಿಭುಶ್ಚತುರ್ಧಾ
ಚಕ್ರೇ ತಥಾ ಭಾಗವತಂ ಪುರಾಣಂ ॥ ೬೨ ॥

ಅ ॥ ಆ ಮೇಲೆ ಸರ್ವಸಮರ್ಥರಾದ ಆ ವೇದವ್ಯಾಸರು ಮನುಷ್ಯರಿಗೆ ಕಲಿಕಾಲದ ಸಾಮರ್ಥ್ಯದೆಶೆಯಿಂದ (ಅಂದರೆ ಯುಗಸಾಮರ್ಥ್ಯದೆಶೆಯಿಂದ) ಅತ್ಯಲ್ಪವಾದ ಆಯುಷ್ಯವನ್ನೂ, ಪ್ರಜ್ಞೆಯನ್ನೂ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಾಚರಣವನ್ನೂ ವಿಚಾರಮಾಡಿ, ಮೂಲವೇದಗಳನ್ನು ಋಗ್ವೇದ ಮೊದಲಾದ ನಾಲ್ಕು ಪ್ರಕಾರವಾಗಿ ವಿಭಾಗಮಾಡಿದರು. ಹಾಗೆಯೇ ಭಗವತ್ಸಂಬಂಧಿಯಾದ ಪುರಾಣವನ್ನು (ಅಂದರೆ— ವೈಷ್ಣವ ಪುರಾಣಗಳನ್ನು) ಮಾಡಿದರು ॥ ೬೨ ॥

ಮೂ ॥ ಯೇ ಯೇ ಚ ಸಂತಸ್ತಮಸಾನುವಿಷ್ಟಾ-
ಸ್ತಾಂಸ್ತಾನ್ಸುವಾಕ್ಯೈಸ್ತಮಸೋ ವಿಮುಂಚನ್ ॥
ಚಚಾರ ಲೋಕಾನ್ಸ ಪಥಿ ಪ್ರಯಾಂತಂ
ಕೀಟಂ ವ್ಯಪಶ್ಯತ್ತಮುವಾಚ ಕೃಷ್ಣಃ ॥ ೬೩ ॥

ಅ ॥ ಯಾವ ಯಾವ ಸಜ್ಜನರು ಅಜ್ಞಾನದಿಂದ ಪ್ರವಿಷ್ಟರಾಗಿರುತ್ತಾರೋ ಅವರವರನ್ನು ಬ್ರಹ್ಮಸೂತ್ರಾದಿಗಳಲ್ಲಿ ಹೇಳಲ್ಪಟ್ಟ ನಿರ್ಣಯರೂಪಗಳಾದ ಸದ್ವಾಕ್ಯಗಳಿಂದ ಅಜ್ಞಾನದೆಸೆಯಿಂದ ವೇದವ್ಯಾಸರು ಬಿಡಿಸಿದವರಾಗಿ ಸಜ್ಜನರಿಂದ ಆಕ್ರಾಂತಗಳಾದ ಪ್ರದೇಶಗಳನು ಸಂಚಾರಮಾಡಿದರು. ಆ ವೇದವ್ಯಾಸರು ಮಾರ್ಗದಲ್ಲಿ ಹೋಗತಕ್ಕ ಕೀಟಸ್ವರೂಪವನ್ನು ಹೊಂದಿದ ಯಾರೋ ಒಬ್ಬ ಪುರುಷನನ್ನು ನೋಡಿದರು.; ಆ ಕೀಟಸ್ವರೂಪವನ್ನು ಹೊಂದಿದ ಪುರುಷನನ್ನು ಕುರಿತು ವೇದವ್ಯಾಸರು ಹೇಳುತ್ತಾರೆ ॥ ೬೩ ॥

ಮೂ ॥ ಭವಸ್ವ ರಾಜಾ ಕುಶರೀರಮೇತ-
ತ್ತ್ಯಕ್ತ್ವೇತಿ ನೈಚ್ಛತ್ತದಸೌ ತತಸ್ತಂ ॥
ಅತ್ಯಕ್ತದೇಹಂ ನೃಪತಿಂ ಚಕಾರ
ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಂ ॥ ೬೪ ॥

ಅ ॥ ಈದೀಪ ನಿಂದ್ಯವಾದ ಶರೀರವನ್ನು ಬಿಟ್ಟು ರಾಜನಾಗು. ಆ ಕೀಟವು ತನ್ನ ದೇಹಪರಿತ್ಯಾಗವನ್ನು ಇಚ್ಛಿಸಲೇ ಇಲ್ಲ ಆ ಮೇಲೆ ವೇದವ್ಯಾಸರು (ರಾಜನನ್ನಾಗಿ ಮಾಡಲಿಕ್ಕೆ ಹೇತುವನ್ನು ಹೇಳುತ್ತಾರೆ.) ಮೊದಲು ತನ್ನ ಭಕ್ತನಾದ ಶೂದ್ರನಾದ (ಭಕ್ತನಿಗೆ ಕೀಟಯೋನಿ ಪ್ರಾಪ್ತಿಯಾಗಲಿಕ್ಕೆ ಕಾರಣವೇನೆಂದರೆ—) ಅತಿಲೋಭಾಖ್ಯದೋಷದಿಂದ ಕೂಡಿದ ಬಿಡಲ್ಪಡದೆ ಇದ್ದ ಶರೀರವುಳ್ಳ ಆ ಕೀಟವನ್ನು ರಾಜನನ್ನಾಗಿ ಮಾಡಿದರು ॥ ೬೪ ॥

ಮೂ ॥ ಲೋಭಾತ್ಸ ಕೀಟತ್ವಮುಪೇತ್ಯ ಕೃಷ್ಣ
ಪ್ರಸಾದತಶ್ಚಾಶು ಬಭೂವ ರಾಜಾ ॥
ತದೈವ ತಂ ಸರ್ವನೃಪಾಃ ಪ್ರಣೇಮು-
ರ್ದದುಃ ಕರಂ ಚಾಸ್ಯ ಯಥೈವ ವೈಶ್ಯಾಃ ॥ ೬೫ ॥

ಅ ॥ ಭಕ್ತನೂ ಲುಬ್ಧನೂ ಆದ ಆ ಶೂದ್ರನು ಲೋಭದ್ವೆಶೆಯಿಂದ ಕೀಟಸ್ವರೂಪತ್ವವನ್ನು ಹೊಂದಿ ವೇದವ್ಯಾಸರ ಅನುಗ್ರಹದೆಶೆಯಿಂದ ಶೀಘ್ರದಲ್ಲಿ ರಾಜನಾದನು. ಆವಾಗಲೇ ಆ

ಕೀಟಸ್ವರೂಪನಾದ ರಾಜನನ್ನು ಎಲ್ಲಾ ರಾಜರೂ ನಮಸ್ಕರಿಸಿದರು. ವೈಶ್ಯರು ಬಲಿಷ್ಠನಾದ ರಾಜನಿಗೆ ಹೇಗೆ ಕಪ್ಪವನ್ನು ಕೊಡುತ್ತಾರೋ, ಹಾಗೆಯೇ ಕೀಟಸ್ವರೂಪನಾದ ರಾಜನಿಗೆ ಕಪ್ಪವನ್ನು ಕೊಟ್ಟರು ॥ ೬೫ ॥

ಮೂ ॥ ಉವಾಚ ತಂ ಭಗವಾನ್ಮುಕ್ತಿಮಸ್ಮಿಂ-
ನ್ನೇವ ಕ್ಷಣೇ ದಾತುಮಹಂ ಸಮರ್ಥಃ ।
ತಥಾಪಿ ಸೇವಾರ್ಥಮವಾಪ್ಯ ವಿಪ್ರ-
ತನುಂ ವಿಮುಕ್ತೋ ಭವ ಮತ್ಪ್ರಸಾದಾತ್ ॥ ೬೬ ॥

ಅ ॥ ಪೂಜ್ಯರಾದ ವ್ಯಾಸರು ಕೀಟಸ್ವರೂಪನಾದ ರಾಜನನ್ನು ಕುರಿತು ಹೇಳಿದರು. ಯದ್ಯಪಿ ಇದೇ ಕ್ಷಣದಲ್ಲಿ ನಿನಗೆ ಮುಕ್ತಿಯನ್ನು ಕೊಡಲಿಕ್ಕೆ ನಾನು ಸಮರ್ಥನು. ಆದಾಗ್ಯೂ ಸ್ವರೂಪತಃ ಬ್ರಾಹ್ಮಣನಾದವನು ಬ್ರಾಹ್ಮಣತ್ವವನ್ನು ಹೊಂದಿಯೇ ಮುಕ್ತಿಯನ್ನು ಹೊಂದಬೇಕು ರೂಪಾಂತರದಿಂದ ಮುಕ್ತಿಯನ್ನು ಹೊಂದುವುದಿಲ್ಲ ಎನ್ನುವ ಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ ಬ್ರಾಹ್ಮಣ ಶರೀರವನ್ನು ಹೊಂದಿ ನನ್ನ ಅನುಗ್ರಹದೆಶೆಯಿಂದ ವಿಮುಕ್ತನು ಆಗು ॥ ೬೬ ॥

ಮೂ ॥ ಜ್ಞಾನಂ ಚ ತಸ್ಮೈ ವಿಮಲಂ ದದೌ ಸಃ
ಮಹೀಂ ಚ ಸರ್ವಾಂ ಬುಭುಜೇ ತದಂತೇ
ತ್ಯಕ್ತ್ವಾ ತನುಂ ವಿಪ್ರವರತ್ವಮೇತ್ಯ
ಪದಂ ಹರೇರಾಪ ಸುತತ್ತ್ವವೇದೀ ॥ ೬೭ ॥

ಅ ॥ ಆ ವೇದವ್ಯಾಸದೇವರು ಆ ಕೀಟಸ್ವರೂಪನಾದ ರಾಜನಿಗೋಸ್ಕರ ನಿರ್ಮಲವಾದ ಜ್ಞಾನವನ್ನು ಉಪದೇಶಕೊಟ್ಟರು. (ಆ ಕೀಟರಾಜನು) ಎಲ್ಲಾ ಭೂಮಿಯನ್ನು (ಅಂದರೆ— ಚಕ್ರವರ್ತಿತ್ವವನ್ನು) ಅನುಭವಿಸಿದನು. ರಾಜ್ಯದ ಅಂತ್ಯದಲ್ಲಿ ಕೀಟದೇಹವನ್ನು ಬಿಟ್ಟು ಬ್ರಾಹ್ಮಣೋತ್ತಮತ್ವವನ್ನು ಹೊಂದಿ ಚೆನ್ನಾಗಿ ಹರಿಸ್ವರೂಪವನ್ನು ತಿಳಿದ ಸ್ವಭಾವವುಳ್ಳವನಾಗಿ ಶ್ರೀಹರಿಯ ಸ್ಥಾನವನ್ನು ಹೊಂದಿದನು ॥ ೬೭ ॥

ಮೂ ॥ ಏವಂ ಬಹೂನ್ಸಂಸೃತಿಬಂಧತಃ ಪ್ರಭು(ಸ)-
ರ್ವ್ಯಮೋಚಯದ್ವ್ಯಾಸತನುರ್ಜನಾರ್ದನಃ ।
ಬಹೂನ್ಯಚಿಂತ್ಯಾನಿ ಚ ತಸ್ಯ ಕರ್ಮಾ-
ಣ್ಯಶೇಷದೇವೇಶಸದೋದಿತಾನಿ ॥ ೬೮ ॥

ಅ ॥ ಸರ್ವಸಮರ್ಥನಾದ ವ್ಯಾಸಾಖ್ಯವಾದ ಶರೀರವುಳ್ಳ ಜನಾರ್ದನನು ಹೀಗೆಯೇ ಕೀಟದಂತೆಯೇ ಬಹುಮಂದಿ ತನ್ನ ಭಕ್ತರನ್ನು ಸಂಸಾರವೆನ್ನುವ ಬಂಧನದೆಶೆಯಿಂದ ಬಿಡಿಸಿದನು. ಎಲ್ಲಾ ಬ್ರಹ್ಮಾದಿ ದೇವಶ್ರೇಷ್ಠರಿಂದ ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಯಾವಾಗಲೂ ಸ್ವೀಕರಿಸಲ್ಪಟ್ಟ ಮನಸ್ಸಿನಿಂದ ಸ್ಮರಿಸಲಿಕ್ಕೂ ಅಶಕ್ಯಗಳಾದ ಬಹಳಕರ್ಮಗಳು ವೇದವ್ಯಾಸರಿಗೆ ಇರುತ್ತವೆ ॥ ೬೮ ॥

ಮೂ ॥ ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛಂ-
ಶ್ಚಚಾರ ರುದ್ರಃ ಸುತಪಸ್ತದೀಯಂ ।

ದದೌ ಚ ತಸ್ಮೈ ಭಗವಾನ್ವರಂ ತಂ
ಸ್ವಯಂ ಚ ತಪ್ತ್ವೇವ ತಪೋ ವಿಮೋಹಯನ್ ॥ ೭೯ ॥

ಅ ॥ ಆಮೇಲೆ ರುದ್ರನು ಈ ವ್ಯಾಸದೇವರ ಪುತ್ರತ್ವವನ್ನು ಹೊಂದಲಿಕ್ಕೆ ಇಚ್ಛಿಸುವನಾಗಿ ವ್ಯಾಸಸಂಬಂಧಿಯಾದ ಮಹತ್ತಾದ ತಪಸ್ಸನ್ನು ಮಾಡಿದನು. ವೇದವ್ಯಾಸರು ತಾನೇ ತಪಸ್ಸನ್ನುಮಾಡಿ ರುದ್ರನನ್ನು ಪುತ್ರನನ್ನಾಗಿ ಹೊಂದಿದನು ಎಂದು (ದೈತ್ಯರನ್ನು) ಮೋಹಪಡಿಸುವವನಾಗಿ ಆ ರುದ್ರನಿಗೋಸ್ಕರ ತನ್ನ ಪುತ್ರತ್ವಪ್ರಾಪ್ತಿರೂಪವಾದ ವರವನ್ನು ಕೊಟ್ಟರು. ಅಂದರೆ–ಸ್ವಯಂ ವ್ಯಾಸದೇವರು ರುದ್ರನ ತಪಸ್ಸನ್ನುಮಾಡಿಯೇ ರುದ್ರನು ನನಗೆ ಮಗನು ಆಗುವನು ಎಂದು ಹಾಗೆಯೇ ವರವನ್ನು ಕೊಟ್ಟರು) ॥ ೭೯ ॥

ವ್ಯಾಸರು ಹೀಗೆಯೇ ಬೇರೆ ಅವತಾರಗಳಲ್ಲಿಯೂ ತಪಸ್ಸನ್ನು ಮಾಡಿದಂತೆಯೇ ತೋರಿಸಿರುತ್ತಾರೆ. ಅಥವಾ ವಿಮೋಹಯನ್ ಎಂದು ಹೇಳಿದ ವಿಮೋಹವು ಯಾರಿಗೆ ಎಂದರೆ—

ಮೂ ॥ ವಿಮೋಹನಾಯಾಸುರಸರ್ಗಿಣಾಂ ಪ್ರಭುಃ
ಸ್ವಯಂ ಕರೋತೀವ ತಪಃ ಪ್ರದರ್ಶಯೇತ್ ॥
ಕಾಮಾದಿದೋಷಾಂಶ್ಚ ಸ್ಫುಟೈವ ದರ್ಶಯೇ–
ನ್ನ ತಾವತಾ ತಸ್ಯ ಹಿ ಸಂತಿ ಕುತ್ರಚಿತ್ ॥ ೮೦ ॥

ಅ ॥ ದೈತ್ಯರ ಸೃಷ್ಟಿಯುಳ್ಳವರಿಗೆ ಅಥವಾ ಅಸುರಸ್ವಭಾವವುಳ್ಳವರಿಗೆ ವಿಪರೀತ ಜ್ಞಾನ ಹುಟ್ಟುವುದಕ್ಕಾಗಿ ವೇದವ್ಯಾಸರು ತಾನೂಕೂಡ ತಪಸ್ಸನ್ನು ಮಾಡುವವನಂತೆ ತೋರಿಸುವರು. ಪುತ್ರೇಚ್ಛಾದಿ ದೋಷಗಳನ್ನು ಅವಿದ್ಯಮಾನಗಳಾದವುಗಳನ್ನೇ ತೋರಿಸುವರು. ಅಷ್ಟರಿಂದ ಆ ದೋಷಗಳು ಆ ಶ್ರೀ ಹರಿಗೆ ಯಾವದೇಶದಲ್ಲಿಯೂ ಯಾವ ಕಾಲದಲ್ಲಿಯೂ ಇರುವುದಿಲ್ಲ; ಹೀಗೆ ನಿರ್ಣಯಗ್ರಂಥಗಳಲ್ಲಿ ಪ್ರಸಿದ್ಧಿಯಿದೆ (ಹಿ) 'ನ ಕರ್ಮಣಾ ಲಿಪ್ಯತೇ ಪಾಪಕೇನ ನ ಸ್ತ್ರೀಕೃತಂ ಕಶ್ಮಲಮಶ್ನುವೀತ' ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವು.

**ವಿಶೇಷಾಂಶ**—(1)ಅರಣಿಗಳನ್ನು ಮಥನಮಾಡುವಕಾಲದಲ್ಲಿ ರೇತಃಪಾತವು ಆಯಿತು ಎನ್ನುವ ಕಥೆಯು ಅಸುರಜನರನ್ನು ಮೋಹಿಸುವುದಕ್ಕಾಗಿ. ರೇತಸ್ಸಾದರೂ ಪ್ರಾಕೃತವಾದುದು ಸ್ಪಷ್ಟವೇ ಆಗಿದೆ. ತನ್ನ ರೇತಸ್ಸು ಅಲ್ಲವೆಂದು ಸಿದ್ಧವಾಯಿತು, ಇಲ್ಲದಿದ್ದರೆ 'ಸ್ತ್ರೀಕೃತಂ ಕಶ್ಮಲಂ ನಾಶ್ನುವೀತ' ಎನ್ನುವ ಸ್ಪಷ್ಟವಚನ ವ್ಯಾಹತಿಯು ಬರುವುದು ॥ ೮೦ ॥

ಮೂ ॥ ತತಸ್ತ್ವರಣ್ಯೋಃ ಸ (ವ್ಯಾಸಸ್ಯ) ಬಭೂವ ಪುತ್ರಕಃ
ಶಿವಸ್ಯ ಸೋಂಶಭೂಚ್ಛುಕನಾಮಧೇಯಃ ॥
ಶುಕೀ ಹಿ ಭೂತ್ವಾ ಹ್ಯಗಮದ್ಘೃತಾಚೀ
ವ್ಯಾಸಂ ವಿಮಥ್ನಂತಮುತಾರಣೀಂ ತಂ ॥ ೮೧ ॥

ಅ ॥ ವರವನ್ನು ಕೊಟ್ಟದ್ದರಿಂದ ಅರಣಿ ಮಥನಕಾಷ್ಠ ವಿಶೇಷಗಳದೆಸೆಯಿಂದ ಈ ವೇದವ್ಯಾಸರಿಗೆ ರುದ್ರನು ಶುಕ ಎಂದು ಹೆಸರುಳ್ಳ ಪುತ್ರನಾಗಿ ಜನಿಸಿದನು. (ಹಾಗಾದರೆ ಅರಣಿಗಳಿಂದ ಹುಟ್ಟಿದವನಿಗೆ ಶುಕವೆನ್ನುವ ನಾಮಧೇಯವು ಹೇಗೆ ಆಯಿತೆಂದರೆ—)ಘೃತಾಚೀ ಎನ್ನುವ ಅಪ್ಸರಃ ಸ್ತ್ರೀಯು ಶುಕಿಯಾಗಿ (ಅಂದರೆ– ಶುಕಪಕ್ಷಿರೂಪವನ್ನು ಧರಿಸಿ) ಅರಣಿಯನ್ನು ಮಥನ ಮಾಡತಕ್ಕ ಆ ವೇದವ್ಯಾಸರನ್ನು ಹೊಂದಿದಳು ॥ ೮೧ ॥

ಮೂ || ಅಕಾಮಯನ್ಕಾಮುಕವತ್ಸ ಭೂತ್ವಾ
ತಯಾರ್ಥಿತಸ್ತು ಶುಕನಾಮಧೇಯಂ ।
ಚಕ್ರೇ ಹ್ಯರಣ್ಯೋಸ್ತನಯಂ ಚ ಸೃಷ್ಟ್ವಾ
ವಿಮೋಹಯಂಸ್ತತ್ವಮಾರ್ಗೇಷ್ವಯೋಗ್ಯಾನ್ ॥ ೭೨ ॥

ಅ || ಆ ಮೇಲೆ ಅಪೇಕ್ಷಾರಹಿತನಾದಾಗ್ಯೂ ವೇದವ್ಯಾಸದೇವರು ಕಾಮುಕ ಪುರುಷ ನಂತೆ (ಸ್ತ್ರೈಣಪುರುಷನಂತೆ) ಆಗ ಆ ಘೃತಾಚಿಯಿಂದ ಶುಕರೂಪವುಳ್ಳ ನನ್ನ ನಾಮಧೇಯವು ಬರಲಿ ಎಂದು ಪ್ರಾರ್ಥಿಸಿಕೊಳ್ಳಲ್ಪಟ್ಟವರಾಗಿ ಅರಣಿಗಳ ಸಕಾಶದೆಶೆಯಿಂದ ಮಗನನ್ನು ಸೃಷ್ಟಿ ಮಾಡಿ ತತ್ವಮಾರ್ಗದಲ್ಲಿ ಅಯೋಗ್ಯರಾದ ದೈತ್ಯರನ್ನು ಮೋಹಿಸುವವರಾಗಿ ಅರಣಿಗಳಿಂದ ಹುಟ್ಟಿದ ಮಗನನ್ನು ಶುಕ ಎಂದು ಹೆಸರುಳ್ಳವನಾಗಿ ಮಾಡಿದರು ॥ ೭೨ ॥

ಮೂ || ಶುಕಂ ತನೂಕು ಪ್ರವಿವೇಶ ವಾಯು-
ರ್ವ್ಯಾಸಸ್ಯ ಸೇವಾರ್ಥಮಥಾಸ್ಯ ಸರ್ವಂ ||
ಜ್ಞಾನಂ ದದೌ ಭಗವಾನ್ಸರ್ವವೇದಾನ್
ಸಭಾರತಂ ಭಾಗವತಂ ಪುರಾಣಂ ॥ ೭೩ ॥

ಅ || ವಾಯುದೇವರು ವೇದವ್ಯಾಸ ಸೇವೆಗೋಸ್ಕರ ಶೀಘ್ರದಲ್ಲಿ ಆ ಶುಕಾಚಾರ್ಯ ರನ್ನು ಪ್ರವೇಶಿಸಿದರು. ಆಮೇಲೆ ವೇದವ್ಯಾಸರು ಈ ವಾಯುದೇವರಿಗೆ ಅಥವಾ ಶುಕಾಚಾರ್ಯರಿಗೆ ಸರ್ವವಿಷಯಕವಾದ ಜ್ಞಾನವನ್ನೂ ಸರ್ವ ವೇದಗಳನ್ನೂ ಭಾರತದಿಂದ ಸಹಿತವಾದ ಭಾಗವತ ಪುರಾಣವನ್ನೂ, ಭಗವತ್ಸಂಬಂಧಿಯಾದ ಪುರಾಣವನ್ನೂ ಕೂಡ ಉಪದೇಶಕೊಟ್ಟರು. (ಅಂದರೆ — ವ್ಯಾಸರ ಮುಖದಿಂದ ಕೇಳಲಿಕ್ಕೆ ಮುಖ್ಯಾಧಿಕಾರಿಯು ವಾಯುದೇವರೇ)

ವಿಶೇಷಾಂಶ— (1) 'ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ। ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ' ಎಂದು ಪಾದ್ಮಪುರಾಣದಲ್ಲಿ ಹೇಳಿದ ಆರು ಸ್ವಾತ್ವಿಕಪುರಾಣಗಳನ್ನು ಇಟ್ಟುಕೊಳ್ಳಬೇಕು ॥ ೭೩ ॥

ವೇದವ್ಯಾಸರ ಮುಖದಿಂದ ಉಪದೇಶವನ್ನು ತೆಗೆದುಕೊಳ್ಳುವುದಕ್ಕಾಗಿ ದೇವತೆಗಳಿಗೇನೇ ಯೋಗ್ಯತಾನುಸಾರವಾಗಿ ಮುಖ್ಯಾಧಿಕಾರವು ಎಂದು ಸೂಚಿಸುವುದಕ್ಕಾಗಿ ದೇವತೆಗಳು ಮುನಿ ಗಳನ್ನೇ ಪ್ರವೇಶಮಾಡಿದರು, ಎನ್ನುತ್ತಾರೆ—

ಮೂ || ಶೇಷೋಽಥ ಪೈಲಂ ಮುನಿಮಾವಿಶತ್ತದಾ
ವೀಶಃ ಸುಮಂತುಮಪಿ ವಾರುಣಿಂ ಮುನಿಂ ||
ಬ್ರಹ್ಮಾವಿಶತ್ತಮುತ ವೈಶಂಪಾಯನಂ
ಶಕ್ರಶ್ಚ ಜೈಮಿನಿಮಥಾವಿಶದ್ವಿಭುಃ ॥ ೭೪ ॥

ಅ || ಪ್ರಕಾರಾಂತರದಿಂದ ಉಪದೇಶ ತೆಗೆದುಕೊಳ್ಳುವುದಕ್ಕಾಗಿ ಶೇಷನು ಪೈಲಮುನಿ ಯನ್ನು ಪ್ರವೇಶಮಾಡಿದನು, ಆಗ ಉಪದೇಶಕಾಲದಲ್ಲಿ ಗರುಡನಾದರೂ ವರುಣನ ಮಗನಾದ

ಸುಮಂತು ನಾಮಕನಾದ ಮುನಿಯನ್ನು ಪ್ರವೇಶಮಾಡಿದನು. ಬ್ರಹ್ಮನೂ ಕೂಡ ಭಾರತ ಪ್ರವರ್ತಕರೆಂದು ಪ್ರಸಿದ್ಧರಾದ ವೈಶಂಪಾಯನರನ್ನೂ ಪ್ರವೇಶಮಾಡಿದನು. ಸರ್ವ ಸಮರ್ಥನಾದ ದೇವೇಂದ್ರನು ಆಮೇಲೆ ಜೈಮಿನಿ ಋಷಿಯನ್ನು ಪ್ರವೇಶಮಾಡಿದನು.

ವಿಶೇಷಾಂಶ— (1) ಪ್ರವರ್ತಕರಾದ ಋಷಿಗಳ ವಿಭಾಗವನ್ನು ಹೇಳುವಾಗ ಭೃಗು ಋಷಿಯನ್ನು ಹೇಳದಿರುವುದರಿಂದಲೂ, ನಾಲ್ಕು ದೇವತೆಗಳಿಗೆ ನಾಲ್ವರಲ್ಲಿಯೇ ಪ್ರವೇಶವು ಯೋಗ್ಯವಾಗಿರುವುದರಿಂದಲೂ, ವರುಣನಮಗನಾದ ಸುಮಂತುವನ್ನು ಎಂದೇ ಅರ್ಥವು ಯೋಗ್ಯವು. ಸುಮಂತುವನ್ನು ವರುಣನ ಮಗನಾದ ಭೃಗುವನ್ನೂ ಕೂಡ ಪ್ರವೇಶಮಾಡಿದನು ಎನ್ನುವ ಅರ್ಥವು ಉಚಿತವಲ್ಲ. 'ಅಥರ್ವಾಂಗಿರಸಾಮಾಸೀತ್ಸುಮಂತುರ್ವಾರುಣೋ ಮುನಿಃ' ಎಂದು ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿದರಿಂದಲೂ, ಸುಮಂತುವೇ ವಾರುಣಿಯು; ಭೃಗುವಲ್ಲ. (2) ಸೂರ್ಯ, ನಾರದ ಮೊದಲಾದವರಾದರೂ ಸಾಕ್ಷಾತ್ ವ್ಯಾಸಮುಖದಿಂದಲೇ ಅಥವಾ ಶುಕ್ರಾಚಾರ್ಯರ ಮುಖದಿಂದಲೇ ಪಾಠಕೇಳಿದವರಾದುದರಿಂದಲೇ ಪ್ರವರ್ತಕರಾಗಿರುತ್ತಾರೆ. ಆದಕಾರಣ ಅವರಿಗೆ ಆವೇಶವನ್ನು ಹೇಳಲಿಲ್ಲ. (3) ಸಾಕ್ಷಾತ್ ವ್ಯಾಸರ ಮುಖದಿಂದಲೇ ಬ್ರಹ್ಮಾದಿಗಳು ಮೂಲರೂಪದಿಂದಲೇ ಅವಿಭಕ್ತವಾದ ಸಕಲ ವೇದಗಳನ್ನು ಶ್ರವಣ ಮಾಡಿದರಿಂದ ಪುನಃ ವಿಭಕ್ತವೇದಗಳನ್ನು ಶ್ರವಣಮಾಡುವುದಕ್ಕಾಗಿ ಮುನಿಗಳಲ್ಲಿ ಏಕೆ ಪ್ರವೇಶ ಮಾಡಿರುವರು? ಎಂದರೆ— ಸತ್ಯವೇ, ಆದರೆ ಆದಿ (ಮೂಲ) ವೇದದಲ್ಲಿ ಸಂಕಲೀಕರಿಸಿಕೊಂಡು ಋಗ್ಯಜುಸ್ಸಾಮಾಥರ್ವಗಳು ಏಕತ್ರ ಇರುತ್ತಿದ್ದವು. ಮನೋಹರಗಳಾದ ವಿಜಾತೀಯ ವಾಕ್ಯಗಳನ್ನುದ್ಧರಿಸಿ ಯುಗಾದಿಶಾಲೆಗಳನ್ನು ಮಾಡತಕ್ಕ ಕೌಶಲದ ಅಭ್ಯಾಸಕ್ಕಾಗಿ ಮುನಿಗಳಿಗೆ ಪ್ರತ್ಯೇಕ ಶಾಖಾಪ್ರವರ್ತಕತ್ವ ಶಕ್ತಿಯನ್ನು ಕೊಡುವುದಕ್ಕಾಗಿಯೂ ಪ್ರವೇಶವು ಕೂಡುತ್ತದೆ ಎನ್ನುವ ಅರ್ಥವನ್ನು ತಿಳಿಯತಕ್ಕದು ॥ ೭೪ ॥

ದೇವತೆಗಳಿಗೆ ಋಷಿಗಳಲ್ಲಿ ಪ್ರವೇಶಮಾಡುವ ವಿಷಯದಲ್ಲಿ ಫಲಾಂತರವೂ ಕೂಡ ಇದೆ ಎನ್ನುತ್ತಾರೆ—

ಮೂ ॥ ಕೃಷ್ಣಸ್ಯ ಪಾದಪರಿಸೇವನೋತ್ಸುಕಾಃ
ಸುರೇಶ್ವರಾ ವಿವಿಶುರಾಶು ತಾನ್ಮುನೀನ್ ॥
ಸಮಸ್ತವಿದ್ಯಾಃ ಪ್ರತಿಪಾದ್ಯ ತೇಷ್ವಸೌ
ಪ್ರವರ್ತಕಾಂಸ್ತಾನ್ವಿದಧೇ ಹರಿಃ ಪುನಃ ॥ ೭೫ ॥

ಅ ॥ ಶ್ರೀ ವೇದವ್ಯಾಸರ ಚರಣಗಳನ್ನು ಚೆನ್ನಾಗಿ ಸೇವಿಸುವ ವಿಷಯದಲ್ಲಿ ಔತ್ಸುಕ್ಯವುಳ್ಳ ದೇವಶ್ರೇಷ್ಠರು ಶೀಘ್ರದಲ್ಲಿ ಆ ಪೈಲಮುನಿಯೇ ಮೊದಲಾದವರನ್ನು ಪ್ರವೇಶಮಾಡಿದರು ಈ ವೇದವ್ಯಾಸರು, ಆ ದೇವತೆಗಳಲ್ಲಿ ಅಥವಾ ಆ ಮುನಿಗಳಲ್ಲಿ ಎಲ್ಲಾ ವಿದ್ಯೆಗಳನ್ನು ಹೊಂದಿಸಿಕೊಟ್ಟು ಅಥವಾ ಉಪದೇಶಕೊಟ್ಟು, ಆ ಮೇಲೆ ಶೇಷಾದಿಗಳಿಂದ ಆ ವಿಶಿಷ್ಟರಾದ ಪೈಲಾದಿಗಳನ್ನು ಭೂಲೋಕಾದಿ ಲೋಕಗಳಲ್ಲಿ ವಿದ್ಯಾಪ್ರವರ್ತಕರನ್ನಾಗಿ ಮಾಡಿದರು ॥ ೭೫ ॥

ಮೂ ॥ ಋಚಾಂ ಪ್ರವರ್ತಕಂ ಪೈಲಂ ಯಜುಷಾಂ ಚ ಪ್ರವರ್ತಕಂ ॥
ವೈಶಂಪಾಯನಮೇವೈಕಂ ದ್ವಿತೀಯಂ ಸೂರ್ಯಮೇವ ಚ ॥ ೭೬ ॥

ಅ ॥ ವೇದವ್ಯಾಸರು ಪೈಲಋಷಿಯನ್ನು ಋಕ್ಕುಗಳಿಗೆ ಪ್ರವರ್ತಕನನ್ನಾಗಿಯೂ ಮಾಡಿದರು. (೧ ಶುಕ್ಲಯಜುರ್ವೇದ, ೨ ಕೃಷ್ಣಯಜುರ್ವೇದ ಎನ್ನುವ ಭೇದದಿಂದ ಎರಡು ವಿಧಗಳಾದ ಯಜುರ್ವೇದಗಳ ಮಧ್ಯದಲ್ಲಿ) ಕೃಷ್ಣಯಜುರ್ವೇದಗಳಿಗೆ ಒಬ್ಬ ವೈಶಂಪಾಯನನನು ಪ್ರವರ್ತಕನನ್ನಾಗಿ ಮಾಡಿದರು. ಶುಕ್ಲ ಯಜುರ್ವೇದಗಳಿಗೆ ಎರಡನೇ ಸೂರ್ಯನನ್ನೇ ಪ್ರವರ್ತಕನನ್ನಾಗಿ ಮಾಡಿದರು. (ಎಲ್ಲಾದರಲ್ಲಿಯೂ ಶಾಖಾಭೇದಗಳು ಇದ್ದಪ್ರಯುಕ್ತ 'ಋಚಾಂ' ಇತ್ಯಾದಿ ಬಹುವಚನವು) ॥ ೭೭ ॥

ಮೂ ॥ ಚಕ್ರೇ೭ಥ ಜೈಮಿನಿಂ ಸಾಮ್ನಾಮಥರ್ವಾಂಗಿರಸಾಮಪಿ ॥
ಸುಮಂತುಂ ಭಾರತಸ್ಯಾಪಿ ವೈಶಂಪಾಯನಮಾದಿಶತ್ ॥ ೭೭ ॥

ಅ ॥ ಆಮೇಲೆ ಸಾಮವೇದಗಳಿಗೆ ಜೈಮಿನಿಋಷಿಯನ್ನು ಪ್ರವರ್ತಕನನ್ನಾಗಿ ಮಾಡಿದರು ಅಥರ್ವಾಂಗಿರಸಗಳಿಗೂ ಕೂಡ ಸುಮಂತುವನ್ನು ಪ್ರವರ್ತಕನನ್ನಾಗಿ ಮಾಡಿದರು. ವೈಶಂಪಾಯನ ಋಷಿಯನ್ನು (ಕೃಷ್ಣಯಜುರ್ವೇದಕ್ಕೆ ಮಾತ್ರವಲ್ಲ, ಮತ್ತೆ) ಭಾರತಕ್ಕೂ ಕೂಡ ಪ್ರವರ್ತಕನನ್ನಾಗಿ ವೇದವ್ಯಾಸರು ಅಪ್ಪಣೆಕೊಟ್ಟರು ॥ ೭೭ ॥

ಮೂ ॥ ಪ್ರವರ್ತನೇ ಮಾನುಷೇಷು ಗಂಧರ್ವಾದಿಷು ಚಾತ್ಮಜಂ ॥
ನಾರದಂ ಪಾಠಯಿತ್ವಾ ಚ ದೇವಲೋಕಪ್ರವೃತ್ತಯೇ ॥ ೭೮ ॥
ಆದಿಶತ್ಸಸೃಜೇ ಸೋ೭ಥ ರೋಮಾಂಚಾದ್ರೋಮಹರ್ಷಣಂ ॥
ತಂ ಭಾರತಪುರಾಣಾನಾಂ ಮಹಾರಾಮಾಯಣಸ್ಯ ಚ ॥ ೭೯ ॥
ಪಂಚರಾತ್ರಸ್ಯ ಕೃತ್ಸ್ನಸ್ಯ ಪ್ರವೃತ್ತ್ಯರ್ಥಮಥಾದಿಶತ್ ॥
ತಮಾವಿಶತ್ಕಾಮದೇವಃ ಕೃಷ್ಣಸೇವಾಸಮುತ್ಸುಕಃ ॥ ೮೦ ॥

ಅ ॥ ವೇದವ್ಯಾಸರು ತನ್ನ ಮಗನಾದ ಶುಕಾಚಾರ್ಯರನ್ನೂ ಮನುಷ್ಯರಲ್ಲಿಯೂ (ಪರೀಕ್ಷಿದ್ರಾಜ ಮೊದಲಾದ ಚಕ್ರವರ್ತಿಗಳಲ್ಲಿಯೂ) ಗಂಧರ್ವ-ಸಿದ್ಧ-ಚಾರಣಾದಿಗಳಲ್ಲಿಯೂ ವೇದಾದಿಗಳನ್ನು ಪ್ರವರ್ತಿಸಿಕೊಡುವುದಕ್ಕಾಗಿ ಅಪ್ಪಣೆಕೊಟ್ಟರು. ಸ್ವರ್ಗಲೋಕದಲ್ಲಿ (ಅಂದರೆ— ವಾಯು, ಶೇಷ, ಗರುಡ, ಬ್ರಹ್ಮ, ದೇವೇಂದ್ರ, ಸೂರ್ಯ ಇವರಿಂದ ಇತರರಾದ ದೇವತೆಗಳಲ್ಲಿ) ವೇದಾದಿಗಳ ಪ್ರವೃತ್ತಿಗಾಗಿ ನಾರದನನ್ನು ಅಭ್ಯಾಸಮಾಡಿಸಿ ಅಪ್ಪಣೆ ಕೊಟ್ಟರು. (ವಾಯುವ್ಯಾದಿಗಳಿಂದ ಇತರರಾದ ದೇವತೆಗಳಿಗೆ ಸಾಕ್ಷಾತ್ ಶ್ರೋತೃಗಳಾದ ಋಷಿಗಳಲ್ಲಿ ಪ್ರವೇಶವಿಲ್ಲದಿರುವುದರಿಂದಲೂ, ಸಾಕ್ಷಾತ್ ವ್ಯಾಸರ ಮುಖದಿಂದ ಶ್ರವಣವಾಗದಿದ್ದ ಪ್ರಯುಕ್ತವೂ, ಅವರಲ್ಲಿ ಪ್ರವರ್ತಿಸುವುದಕ್ಕಾಗಿ ನಾರದನಿಗೆ ಆಜ್ಞೆಯು.) ಆಮೇಲೆ ಋಷಿಗಳಿಗೆ ಅಪ್ಪಣೆಕೊಟ್ಟ ಮೇಲೆ ಆ ವೇದವ್ಯಾಸರು ರೋಮಾಂಚದೆಸೆಯಿಂದ ತನ್ನ ರೋಮಕೂಪಗಳಿಂದ ರೋಮಹರ್ಷಣನನ್ನು ಸೃಷ್ಟಿಮಾಡಿದರು. (ಪಾದಗಳಿಂದ ಶೂದ್ರನಿಗೆ ಹೇಗೆ ಸೃಷ್ಟಿಯೋ ಹಾಗೆಯೇ ರೋಮಾಂಚದೆಸೆಯಿಂದ ಸೂತಜಾತಿಯವನಾದ ರೋಮಹರ್ಷಣನಿಗೆ ಸೃಷ್ಟಿಯು.) ಸೃಷ್ಟಿಯಾದ ಮೇಲೆ ರೋಮಹರ್ಷಣನನ್ನು ವೇದವ್ಯತಿರಿಕ್ತಗಳಾದ ಭಾರತಕ್ಕೂ, ಪುರಾಣಗಳಿಗೂ, ಮಹಾರಾಮಾಯಣಕ್ಕೂ, ನಿಖಿಲ ಪಂಚರಾತ್ರಾಗಮಕ್ಕೂ ಇವುಗಳ ಪ್ರವೃತ್ತಿಗಾಗಿ ಅಪ್ಪಣೆಕೊಟ್ಟರು. (ಅಂದರೆ— ವೇದ ವ್ಯತಿರಿಕ್ತಗಳಾದ ಭಾರತ ಮೊದಲಾದ ಪೌರುಷೇಯ ಗ್ರಂಥಗಳ ಪ್ರವೃತ್ತಿಗಾಗಿ ಅಪ್ಪಣೆಕೊಟ್ಟರು.) ಶ್ರೀಕೃಷ್ಣನ ಸೇವೆಯಲ್ಲಿಯೇ ಅತ್ಯಂತ ಔತ್ಸುಕ್ಯವುಳ್ಳವನಾಗಿಯೇ ಕಾಮದೇವನು ಆ ರೋಮಹರ್ಷಣನನ್ನು ಪ್ರವೇಶಮಾಡಿದನು ॥೭೮॥೭೯॥೮೦॥

ಮೂ ॥ ಸ ತಸ್ಮೈ ಜ್ಞಾನಮಖಿಲಂ ದದೌ ದ್ವೈಪಾಯನಃ ಪ್ರಭುಃ ।
ಸನತ್ಕುಮಾರಪ್ರಮುಖಾಂಶ್ಚಕ್ರೇ ಯೋಗಪ್ರವರ್ತಕಾನ್ ॥ ೮೧ ॥
ಭೃಗಾದೀನ್ಕರ್ಮಯೋಗಸ್ಯ ಜ್ಞಾನಂ ದತ್ವಾ ಮಲಂ ಶುಭಂ ॥
ಜೈಮಿನಿಂ ಕರ್ಮಮೀಮಾಂಸಾಕರ್ತಾರಮಕರೋತ್ಪ್ರಭುಃ ॥ ೮೨ ॥

ಅ ॥ ಸರ್ವ ಸಮರ್ಥರಾದ ಆ ವೇದವ್ಯಾಸರು ಆ ಕಾಮದೇವನೀಗೋಸ್ಕರ ಅಪೌರು ಷೇಯ ಗ್ರಂಥಗಳ ಉಪದೇಶ ಮುಖದಿಂದ ವೇದ ಮೊದಲಾದುವುಗಳ ಎಲ್ಲಾ ಜ್ಞಾನವನ್ನು ಉಪ ದೇಶಿಸಿದರು. ಸನತ್ಕುಮಾರನೇ ಮೊದಲಾಗಿವುಳ್ಳ ಸನಕ-ಸನಂದನಾದಿಗಳನ್ನು ಯೋಗ ಶಾಸ್ತ್ರಕ್ಕೆ ಪ್ರವರ್ತಕರನ್ನಾಗಿ ಮಾಡಿದರು. ಭೃಗ್ವಾದಿಗಳಿಗೆ ಸಂಶಯ ರಹಿತವಾದ ಹರಿಸ್ವರೂಪ ಪ್ರಕಾಶಕವಾದ ಜ್ಞಾನವನ್ನು ಕೊಟ್ಟು ಭೃಗ್ವಾದಿಗಳನ್ನು ಕರ್ಮಯೋಗಕ್ಕೆ ಪ್ರವರ್ತಕರನ್ನಾಗಿ ಮಾಡಿದರು. ವೇದವ್ಯಾಸರು ಜೈಮಿನಿ ಋಷಿಯನ್ನು ಕರ್ಮಮೀಮಾಂಸಾ ಶಾಸ್ತ್ರವನ್ನು ಮಾಡ ತಕ್ಕವನನ್ನಾಗಿ ಮಾಡಿದರು ॥ ೮೧ ॥ ೮೨ ॥

ಮೂ ॥ ದೇವಮೀಮಾಂಸಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।
ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥ ೮೩ ॥

ಅ ॥ ವೇದವ್ಯಾಸರು ದೇವಮೀಮಾಂಸಾ ಶಾಸ್ತ್ರದ ಆದಿಭಾಗವನ್ನೂ, ಅಂತ್ಯಭಾಗವನು ತಾನೇ ಮಾಡಿ (ಅಂದರೆ—ಅಥಾತೋದೈವೀ ಮೀಮಾಂಸಾ' ಎನ್ನುವ ಆದಿಸೂತ್ರವನ್ನು, 'ಸ ವಿಷ್ಣುರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ' ಎನ್ನುವ ಅಂತಿಮ ಸೂತ್ರವನ್ನೂ ತಾನೇ ಮಾಡಿ) ಆ ಮೇಲೆ ದೇವಮೀಮಾಂಸಾ ಶಾಸ್ತ್ರದ ಮಧ್ಯ ಭಾಗವನ್ನು ಮಾಡಲಿಕ್ಕೆ ಪೈಲ ಋಷಿಯನ್ನೂ, ಪೈಲಾವಿಷ್ಟನಾದ ಶೇಷನನ್ನೂ ಅಪ್ಪಣೆಕೊಟ್ಟರು. ಆ ಮೇಲೆ ಪುರಾಣಗಳನ್ನು ಮಾಡಿಸಿದರು ॥ ೮೩ ॥

ಪುರಾಣಗಳಿಗೆ ಮೂಲವನ್ನು ತೋರಿಸುತ್ತಾರೆ—

ಮೂ ॥ ಶೈವಾನ್ಪಾಶುಪತಾಂಶ್ಚ(ತಾಚ್ಚ)ಕ್ರೇ ಸಂಶಯಾರ್ಥಂ ಸುರದ್ವಿಷಾಂ ॥
ವೈಷ್ಣವಾನ್ಪಂಚರಾತ್ರಾಂಶ್ಚ (ತ್ರಾಚ್ಚ) ಯಥಾರ್ಥಜ್ಞಾನಸಿದ್ಧಯೇ ॥
॥ ೮೪ ॥

ಅ ॥ ಪಾಶುಪತಾಗಮಾದೇಶಯಿಂದ ದೇವತೆಗಳ ದ್ವೇಷಿಗಳಾದ ದೈತ್ಯರಿಗೆ ಸಂಶಯವು ಹುಟ್ಟುವದಕ್ಕಾಗಿ (ವಿಪರೀತ ಜ್ಞಾನವು ಹುಟ್ಟುವುದಕ್ಕಾಗಿ) ಶಿವನಿಗೆ ಸರ್ವೋತ್ತಮತ್ವಪ್ರತಿಪಾದಕ ಗಳಾದ ತಾಮಸಪುರಾಣಗ್ರಂಥಸಂಗ್ರಹಗಳನ್ನು ಮಾಡಿದರು. (ಸಜ್ಜನರಿಗೆ) ಯಥಾರ್ಥಜ್ಞಾನವು ಸಿದ್ಧಿಯಾಗುವುದಕ್ಕಾಗಿ ಪಂಚರಾತ್ರಾಗಮದೆಶೆಯಿಂದ ವಿಷ್ಣು ಸರ್ವೋತ್ತಮತ್ವಪ್ರತಿಪಾದಕಗಳಾದ ಸಾತ್ವಿಕಪುರಾಣಗ್ರಂಥಸಂಗ್ರಹಗಳನ್ನು ಮಾಡಿದರು ॥ ೮೪ ॥

ಮೂ ॥ ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣಗ್ರಂಥಸಂಗ್ರಹಾನ್ ।
ಏವಂ ಜ್ಞಾನಂ ಪುನಃ ಪ್ರಾಪುರ್ದೇವಾಶ್ಚ ಋಷಯಸ್ತಥಾ ॥ ೮೫ ॥

ಅ ॥ ಸಂಶಯವು ಹುಟ್ಟುವುದಕ್ಕಾಗಿಯೇ ಆಪಾತತಃ ಕರ್ಮಾದಿಗಳನ್ನು ಪ್ರತಿಪಾದಿಸುವುದರಂತೆ ತೋರುವ ವೇದಗಳನ್ನು ಅನುಸರಿಸಿ ಬ್ರಾಹ್ಮಪುರಾಣ(ರಾಜಸಪುರಾಣ ಗ್ರಂಥಸಂಗ್ರಹ)ಗಳನ್ನು ಮಾಡಿದರು. ಮತ್ತು ವೇದಗಳ ಆಪಾತವಾದ ಅರ್ಥದೆಶೆಯಿಂದ ಪುರಾಣಗ್ರಂಥಸಂಗ್ರಹಗಳನ್ನು ಮಾಡಿದರು. ಹೀಗೆ ದೇವತೆಗಳೂ, ಹಾಗೆಯೇ ಋಷಿಗಳೂ ಮತ್ತೂ ಮತ್ತು ಜ್ಞಾನವನ್ನು ಹೊಂದಿದರು.

ವಿಶೇಷಾಂಶ— (1) ಬ್ರಾಹ್ಮಪುರಾಣಗಳನ್ನು ವೇದಗಳಿಗೆ ಆಪಾತಾರ್ಥಭೂತಗಳಾದ ದೇವಸಂಬಂಧಿಗಳನ್ನಾಗಿ ಮಾಡಿದರು ಉದಾ—ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ । ಪರತ್ವೇನ ವದೇಚ್ಛಾಸ್ತ್ರಂ ರಾಜಸಂ ಪರಿಕೀರ್ತಿತಂ' ಎನ್ನುವ ವಚನದೆಶೆಯಿಂದ ೧ 'ಪ್ರಜಾಪತೇ ನ ತ್ವದೇತಾನಿ' ೨ 'ಅಗ್ನಿಮೀಳೇ ಪುರೋಹಿತಂ' ೩ 'ದೇವೀಂ ವಾಚಮಜನಯಂತ ದೇವಾಃ' ಇತ್ಯಾದಿ ವೇದಗಳ ಆಪಾತಾರ್ಥಭೂತಗಳಾದವುಗಳನ್ನು ಮತ್ತು ೪ 'ಸವಿತಾ ಪಶ್ಚಾತ್ತಾತ್' ೫ 'ಗಣಾನಾಂ ತ್ವಾ ಗಣಪತಿಂ ಹವಾಮಹೇ' ಇದುಮೊದಲಾದ ವೇದಗಳ ಆಪಾತಾರ್ಥಭೂತಗಳಾದ ವೇದಸಂಬಂಧಿಗಳನ್ನು ಮಾಡಿದರು. (2) ಪುರಾಣಗ್ರಂಥಸಮೂಹಗಳನ್ನು ವೇದಗಳ ಆಪಾತಾರ್ಥಗಳನ್ನಾಗಿ ಮಾಡಿದರು. ಉದಾ - ವೇದಮಧ್ಯದಲ್ಲಿರತಕ್ಕ ಹಿರಣ್ಯಗರ್ಭ-ಅಗ್ನಿ-ಇಂದ್ರಾದಿ ಸೂಕ್ತಗಳಲ್ಲಿ 'ಆಪಾತತಃ' ಅವರವರಿಗೆ ಉತ್ಕರ್ಷವು ತೋರುತ್ತದೆ. ಹಾಗೆಯೇ ಕೆಲವುಭಾಗದಲ್ಲಿ ಬ್ರಹ್ಮನಿಗೂ ಕೆಲವುಭಾಗದಲ್ಲಿ ಅಗ್ನಿಗೂ ಕೆಲವು ಭಾಗದಲ್ಲಿ ಇಂದ್ರಾದಿಗಳಿಗೂ ಕೆಲವು ಕಡೆ ಲಕ್ಷ್ಮೀಸರಸ್ವತ್ಯಾದಿಗಳಿಗೂ ಸರ್ವೋತ್ತಮತ್ವಾದಿಗಳನ್ನು ಪ್ರತಿಪಾದಿಸತಕ್ಕ ಪುರಾಣಗ್ರಂಥಸಂಗ್ರಹಗಳನ್ನು ಮಾಡಿದರು. )3)ಇತ್ಯಾದಿ ಪ್ರಕಾರದಿಂದ ದೇವತೆಗಳನ್ನು ಆರಂಭಿಸಿ ಮನುಷ್ಯಪರ್ಯಂತ ಹರಿಭಕ್ತರು ವೈವಸ್ವತಮನ್ವಂತರದ ಪ್ರಥಮ ದ್ವಾಪರಗಿಂತ ಇಪ್ಪತ್ತೈದನೇ (೨೫) ದ್ವಾಪರಯುಗದಲ್ಲಿ ಮಾಡಿದ ವ್ಯಾಸಾವತಾರಕ್ಕಿಂತ ಇಪ್ಪತ್ತೆಂಟನೇ (೨೮) ದ್ವಾಪರಯುಗದಲ್ಲಿ ವೇದವ್ಯಾಸರಿಂದ ಮತ್ತು ಆವಿಷ್ಟವಾದ ರೂಪದಿಂದ ವಿಶೇಷಜ್ಞಾನವನ್ನು ಹೊಂದಿದರು. ಅದರಲ್ಲಿ ದೇವತೆಗಳು ಪ್ರತ್ಯೇಕವಾಗಿ ಆವಿಷ್ಟರೂಪದಿಂದ ವಿಶೇಷಜ್ಞಾನವನ್ನು ಹೊಂದಿದರು. ಋಷಿಗಳೂ ಮನುಷ್ಯರೂ ಕೂಡ ಗೌತಮಶಾಪದಿಂದ ನಷ್ಟಜ್ಞಾನವುಳ್ಳವರು ಪುನಃ ಜ್ಞಾನವನ್ನು ಹೊಂದಿದರು ॥ ೮೫ ॥

ಮೂ ॥ ಸನತ್ಕುಮಾರಪ್ರಮುಖಾ ಯೋಗಿನೋ ಮಾನುಷಾಸ್ತಥಾ ।
ಕೃಷ್ಣದ್ವೈಪಾಯನಾತ್ಪ್ರಾಪ್ಯ ಜ್ಞಾನಂ ತೇ ಮುಮುದುಃ ಸದಾ ॥ ೮೬ ॥

ಅ ॥ ಸನತ್ಕುಮಾರನೇ ಮೊದಲಾಗಿವುಳ್ಳ ಯೋಗಿಗಳೂ, ಹಾಗೆಯೇ ಮನುಷ್ಯರೂ, ಪೂರ್ವೋಕ್ತರಾದ ದೇವಾದಿಗಳೂ ಶ್ರೀ ವೇದವ್ಯಾಸರಿಂದ ಜ್ಞಾನವನ್ನು ಹೊಂದಿ ಇಲ್ಲಿಯೂ ಪರಲೋಕದಲ್ಲಿಯೂ ಸಂತೋಷಪಟ್ಟರು ॥ ೮೬ ॥

ವೇದವ್ಯಾಸರ ಚರಿತ್ರೆಯನ್ನು ಸಂಕ್ಷೇಪದಿಂದ ಹೇಳಿ ಉಪಸಂಹಾರಮಾಡುತ್ತಾರೆ—

ಮೂ ॥ ಸಮಸ್ತವಿಜ್ಞಾನಗಭಸ್ತಿಚಕ್ರಂ
ವಿತಾಯ ವಿಜ್ಞಾನಮಹಾದಿವಾಕರಃ ।
ನಿರಸ್ಯ ಚಾಜ್ಞಾನತಮೋ ಜಗತ್ತತಂ
ಪ್ರಭಾಸತೇ ಭಾನುರಿವಾವಭಾಸಯನ್ ॥ ೮೭ ॥

ಅ ॥ ವಿಜ್ಞಾನಮಯನಾದ, ಸರ್ವೋತ್ತಮನಾದ ವ್ಯಾಸಾಖ್ಯ ಸೂರ್ಯನು ಸರ್ವ ವಿಶೇಷಜ್ಞಾನಗಳೆನ್ನುವ ಕಿರಣಗಳ ಸಮೂಹವನ್ನು ವಿಸ್ತಾರ ಮಾಡಿ, ಜಗತ್ತಿನಲ್ಲಿ ವ್ಯಾಪ್ತವಾದ ಅಜ್ಞಾನಾಖ್ಯವಾದ ಅಂಧಕಾರವನ್ನು ತಿರಸ್ಕಾರ ಮಾಡಿ, ಸೂರ್ಯನಂತೆ ಜಗತ್ತನ್ನು ಸಜ್ಜ್ಞಾನದಿಂದ ಪ್ರಕಾಶಪಡಿಸುವವನಾಗಿ, ಸರ್ವೋತ್ಕೃಷ್ಟನಾಗಿ ಪ್ರಕಾಶಿಸುತ್ತಾನೆ ॥ ೮೭ ॥

ಮೂ ॥ ಚತುರ್ಮುಖೇಶಾನಸುರೇಂದ್ರಪೂರ್ವಕೈಃ
ಸದಾ ಸುರೈಃ ಸೇವಿತಪಾದಪಲ್ಲವಃ ।
ಪ್ರಕಾಶಯಂಸ್ತೇಷು ಸದಾತ್ಮಗುಹ್ಯಂ
ಮುಮೋದ ಮೇರೌ ಚ ತಥಾ ಬದರ್ಯಾಂ ॥ ೮೮ ॥

ಅ ॥ ಬ್ರಹ್ಮನು, ರುದ್ರನು, ದೇವೇಂದ್ರನು ಇವರೇ ಮೊದಲಾಗಿವುಳ್ಳ ದೇವತೆಗಳಿಂದ ಯಾವಾಗಲೂ ಸೇವಿಸಿಕೊಳ್ಳಲ್ಪಟ್ಟ ಚಿಗುರು ಎಲೆಯಂತೆ ಇರುವ ಪಾದಪದ್ಮವುಳ್ಳ ಶ್ರೀ ವೇದ ವ್ಯಾಸರು ಆ ಚತುರ್ಮುಖಾದಿಗಳಲ್ಲಿ ತನ್ನ ಸಂಬಂಧಿಯಾದ ಗುಣಾದಿ ರಹಸ್ಯವನ್ನು ಸದಾ ಪ್ರಕಾಶಪಡಿಸುವವರಾಗಿ ಮೇರುಪರ್ವತದಲ್ಲಿಯೂ, ಹಾಗೆಯೇ ಬದರಿಯಲ್ಲಿಯೂ ಸಂತೋಷ ಪಟ್ಟರು ॥ ೮೮ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾ(ದ)ಚಾರ್ಯವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ವ್ಯಾಸಾವತಾರಕಥಾನಿರೂಪಣಂ
(ರಾಮವರ್ಣನಂ) ನಾಮ ದಶಮೋಽಧ್ಯಾಯಃ

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ವ್ಯಾಸಾವತಾರ ಕಥಾನಿರೂಪಣ
(ವರ್ಣನ) ವೆನ್ನುವ ಹತ್ತನೇ ಅಧ್ಯಾಯವು ಸಮಾಪ್ತವಾಯಿತು.

ಶ್ರೀಮದಾನಂದತೀರ್ಥಾರ್ಯಹೃತ್ಸರೋಜಾಖ್ಯಮಂದಿರಃ ।
ಇಂದಿರಾರಾಧ್ಯಪಾದಾಬ್ಜಃ ಪ್ರೀಯತಾಂ ಪುರುಷೋತ್ತಮಃ ॥
ಶ್ರೀಮದಾನಂದತೀರ್ಥಾರ್ಯಚರಣಃ ಶರಣಂ ಮಮ ।
ಯದಾಸ್ಯಕಂಜಾತ್ಸಂಜಾತಂ ಭಾಷ್ಯಪೀಯೂಷಮಂಜಸಾ ॥
ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।
ಭೂಯಾತ್ಕುಸುಮಮಾಲೇವ ಪ್ರೀತ್ಯೈ ಮಾಧವಮಧ್ವಯೋಃ ॥

 ಶ್ರೀ ಕೃಷ್ಣಾರ್ಪಣಮಸ್ತು 